# ಕರ್ಣಾಟಕದ ಕೈಪಿಡಿ





ಕರ್ಣಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯಪರವಾಗಿ
ಕೈಪಿಡಿಯ ಸಂಪಾದಕ ಮಂಡಳಿಗಾಗಿ
ಮುದ್ರಿಸಿ ಪ್ರಕಟಿಸಿದೆ.



**ಬಿ. ಶ್ರೀನಿವಾಸಯ್ಯಂಗಾರ್,**
೩/೩೪, ಮನವಾರ್ತೆಪೇಟೆ,
ಬೆಂಗಳೂರು ಸಿಟಿ.

# ಮುನ್ನುಡಿ

---

ಭಾರತೀಯ ರಾಷ್ಟ್ರೀಯ ಮಹಾಸಭೆಯು ಕರ್ಣಾಟಕದಲ್ಲಿ ಸೇರೆಯುವ ಸುಯೋಗವು ಈಗ ತಾನೆ ಮೊದಲನೆಯ ಸಲ ಬಂದಿದೆ. ಈ ಪ್ರಯುಕ್ತಃ ಸದ್ಯಕರ್ಣಾಟಕ ಪ್ರಾಂತ್ಯಕ್ಕೇ ವಿಶೇಷವಾದಗೌರವವುಂಟಾಗಿರುವುದು. ಆದರೆ ೧೯೨೦ ರಲ್ಲಿ ಭಾಷೆಗಳಿಗನುಸಾರವಾಗಿ ಪ್ರಾಂತ್ಯಗಳನ್ನು ವಿಭಾಗಮಾಡಿ ರಾಷ್ಟ್ರೀಯ ಸಭೆಗೆ ವೈಶಿಷ್ಟ್ಯವನ್ನು ಕೊಡುವವರೆಗೂ ಕರ್ಣಾಟಕದ ಹೆಸರು ಹೊರಗಿನವರ ಕಿವಿಗೆ ಬಿದ್ದಿರಲಿಲ್ಲ. ಹಿಂದೆ ಕರ್ಣಾಟಕವು ಭರತವರ್ಷದ ಇತಿಹಾಸದಲ್ಲಿ ಎಂತಹಸ್ಥಾನವನ್ನು ಹೊಂದಿ ಏನೇನು ಕಾರ್ಯಗಳನ್ನು ಮಾಡಿತು, ಈಗ ಯಾವ ಸ್ಥಿತಿಯಲ್ಲಿದೆ, ಅದರ ಚಳವಳಿಗಳೇನು ಎಂಬ ವಿಷಯಗಳನ್ನು ತಿಳಿಸುವುದೇ ನಮ್ಮ ಈ ಪ್ರಯತ್ನದ ಮುಖ್ಯೋದ್ದೇಶ. ಹೆಚ್ಚೋಲಿಗಳಲ್ಲಿ ಪ್ರಕೃತ ಸ್ಥಿತಿಯು ವರ್ಣಿತವಾಗಿರುವುದು. ಕೆಲ ಮಿತ್ರರ ಸಲಹೆಯಂತೆ ನಾವು ಒಂದು ಸಂಪಾದಕ ಮಂಡಲಿಯನ್ನು ಏರ್ಪಡಿಸಿಕೊಂಡು ಲೇಖಕರಿಂದ ಲೇಖನಗಳನ್ನು ಬರೆಯಿಸಿ, ಪ್ರಾರ್ಥನೆ ಮಾಡಿ ಸಾಧ್ಯವಾದ ಎಲ್ಲೆಡೆಗಳಿಂದಲೂ ವಿವಿಧವಿಷಯಗಳನ್ನು ಸಂಗ್ರಹಿಸಿದ್ದೇವೆ. ಈಗ ಪಾಠಕರ ಮುಂದಿಟ್ಟಿರುವ ಪುಸ್ತಕದಲ್ಲಿ ನಾವು ಸೇರಿಸಬೇಕೆಂದಿದ್ದ ಎಷ್ಟೋ ಸಂಗತಿಗಳು ನಾವು ಮೊದಲು ಯೋಚಿಸಿದಂತೆ ಸೇರಿಲ್ಲ. ಈ ಕೈಪಿಡಿಯಲ್ಲಿರುವ ನ್ಯೂನಾತಿರೇಕಗಳು ಎಲ್ಲರಿಗಿಂತ ಹೆಚ್ಚಾಗಿ ಸಂಪಾದಕರಿಗೇ ಚೆನ್ನಾಗಿ ಗೊತ್ತುಂಟು. ಆದರೂ ಅವರು ಕರ್ಣಾಟಕದವರಿಗೂ ಹೊರಗಿನವರೆಗೂ ಇದರ ಸಹಾಯದಿಂದ ಕರ್ಣಾಟಕದ ಮಾಹಾತ್ಮ್ಯವು ಮೇಲ್ತರವಾಗಿ ಮಂದಟ್ಟಾಗಬಹುದೆಂಬ ಭಾವದಿಂದ ಧೈರ್ಯಮಾಡಿ ಇದನ್ನು ಅರ್ಪಿಸಿರುವರು. ಇದೇ ಮೊದಲನೆಯ ಪ್ರಯತ್ನ; ಹೆಚ್ಚು ವಿಷಯಸಿಕ್ಕಿಲ್ಲ; ಕಾಲವು ಸಾಲದುಮತ್ತು ಮುದ್ರಣಕಾರ್ಯವನ್ನು ಕೈಗೊಂಡಿದ್ದವರಿಗೆ ಇತರ ಕಾರ್ಯಗಳು ಹೆಚ್ಚಾಗಿದ್ದುವು. ಇದೇ ಮುಂತಾದ ಕಾರಣಗಳಿಂದ ಕೈಪಿಡಿಯು ಅಷ್ಟುತೃಪ್ತಿಕರವಾಗಿಲ್ಲ.

ಬೆಂಗಳೂರು ಸಿಟಿ ದೇಶೀಯ ವಿದ್ಯಾಶಾಲಾ ಅಧ್ಯಾಪಕವರ್ಗ ದವರ ಮೇಲೆಯೂ ಶ್ರೀಯುತ ತಾತಾಚಾರ್ಯಶರ್ಮರವರ ಮೇಲೆ ಯೂ ಲೇಖನಗಳ ಬಹುಭಾಗವನ್ನು ಬರೆಯುವ ಕರ್ತವ್ಯವೂ ಪುಸ್ತ ಕದ ಮುದ್ರಣವನ್ನು ನೋಡಿಕೊಳ್ಳುವ ಭಾರವೂ ಬಿದ್ದಿದ್ದುವು. ಶ್ರೀ ಯುತ ಬಿ. ಶ್ರೀನಿವಾಸಯ್ಯಂಗಾರ್ಯರು ಬಹು ಸಾಹಸಪಟ್ಟು ಪುಸ್ತ ಕವನ್ನು ಯಥಾವತ್ ಅಂದವಾದ ರೂಪದಲ್ಲಿ ಮುದ್ರಿಸಿ ಆವಶ್ಯಕ ವಾದ ಚಿತ್ರಗಳನ್ನು ಹೊಂದಿಸಿಕೊಟ್ಟು ಸಹಾಯಮಾಡಿರುವರು. ಇವ ರಿಗೂ, ಲೇಖನಗಳನ್ನು ಬರೆದು, ಕೇಳಿದೊಡನೆಯೇ ಬೇಕಾದ ಸಮಾ ಚಾರಗಳನ್ನು ಒದಗಿಸಿ, ವಿಧವಿಧವಾಗಿ ಉಪಕಾರಮಾಡಿದ ಸಭ್ಯಗೃ ಹಸ್ಥರೆಲ್ಲರಿಗೂ ಕರ್ಣಾಟಕ ಪ್ರಾಂತದ ರಾಷ್ಟ್ರೀಯ ಸಭೆಯ ಪರವಾಗಿ ಯೂ ಸಂಪಾದಕಮಂಡಲಿಯ ಪರವಾಗಿಯೂ ಅನೇಕ ಧನ್ಯವಾದಗ ಳನ್ನು ಅರ್ಪಿಸುತ್ತಿರುವೆನು. ಹಾಗೆಯೇ ಅವರ ಕೃತಜ್ಞತೆಯು ಚಿತ್ರದ ಅಚ್ಚುಗಳನ್ನು ಎರವು ಕೊಟ್ಟಿದ್ದವರಿಗೂ ಸಲ್ಲುತ್ತದೆ.

ದ. ಕೃ. ಭಾರದ್ವಾಜ,

ಸಂಪಾದಕ.

---

**ಸೂಚನೆ** :—ಕರ್ಣಾಟಕ ದೇಶದ ಮೇರೆಯು ಸಣ್ಣಗೆರೆಗಳಿಂದ ಸೂಚಿಸಲ್ಪಟ್ಟಿದೆ. ರಾಷ್ಟ್ರೀಯ ಮಹಾಸಭೆಯವರು ವಿಂಗಡಿಸಿರುವ ಕರ್ಣಾಟಕಕ್ಕೂ ಇದಕ್ಕೂ. ವ್ಯತ್ಯಾಸವುಂಟು ಕನ್ನಡಮಾತನಾಡುವವರಿ ರುವ ಪ್ರಾಂತಗಳನ್ನೆಲ್ಲಾ ಈ ನಕ್ಷೆಯಲ್ಲಿ ಕನ್ನಡನಾಡಿನಲ್ಲಿ ಸೇರಿಸಿದೆ. ಕರ್ಣಾಟಕದ ಸರಿಯಾದ ಮೇರೆಗಳನ್ನು ಸೂಚಿಸುವವರಿಗೆ ಕೃತಜ್ಞರಾಗಿ ರುವೆವು

# ವಿಷಯ ಸೂಚನೆ



## ಚಿತ್ರಗಳು

I.

# ಭೂವಿವರಣೆ.

——o——

**ಸ್ಥಾನ ನಿರ್ಣಯ** :—ಕರ್ಣಾಟಕವು ದಕ್ಷಿಣ ಹಿಂದೂಸ್ಥಾನದ ಮಧ್ಯಭಾಗದ ಪಶ್ಚಿಮ ದಿಕ್ಕಿನಲ್ಲಿ ಅಕ್ಷಾಂಶ ೧೧°,೧೯° ಗಳ, ರೇಖಾಂಶ ೭೩°,೭೮°೩೦′ ಗಳ ಮಧ್ಯೆ ಸ್ಥಾಪಿತವಾಗಿದೆ. ವಿಸ್ತಾರ ಸುಮಾರು ೮೦,೦೦೦ ಚದರ ಮೈಲಿಗಳು. ದಕ್ಷಿಣೋತ್ತರ ಉದ್ದ ೫೦೦ ಮೈಲಿಗಳು. ಪೂರ್ವ ಪಶ್ಚಿಮ ಅಗಲ ೩೦೦ ಮೈಲಿಗಳು.

[ಕರ್ಣಾಟಕವು, ಮುಂದೆ ಹೇಳುವ ದೇಶಗಳಲ್ಲಿ ಒಂದೊಂದೂ ಒಂದು ಜನಾಂಗವಾಗಿದ್ದು ಲೋಕದಲ್ಲೆಲ್ಲಾ ಹೆಸರುಪಡೆದ, ಇಂಗ್ಲೆಂಡ್ ಮತ್ತು ಸ್ಕಾಟ್ಲೆಂಡುಗಳು ಕೂಡಿದಷ್ಟು ಅಥವಾ ಪೋರ್ಚುಗಲ್ಲಿನ ಎರಡರಷ್ಟು, ಡೆನ್ಮಾರ್ಕಿನ ಐದರಷ್ಟು, ಹಾಲೆಂಡಿನ ಆರರಷ್ಟು, ಅಥವಾ ಬೆಲ್ಜಿಯಮ್ಮಿನ ಏಳರಷ್ಟು ವಿಸ್ತಾರವಾಗಿದೆಯೆಂದು ಹೇಳಬಹುದು.]

**ಮೇರೆಗಳು** :—ಉತ್ತರಕ್ಕೆ ಮಹಾರಾಷ್ಟ್ರ, ಗೋದಾವರೀನದಿ, ಪೂರ್ವಕ್ಕೆ ಆಂಧ್ರದೇಶ, ದಕ್ಷಿಣಕ್ಕೆ ತಮಿಳುನಾಡು, ಕೇರಳ, ಪಶ್ಚಿಮಕ್ಕೆ ಅರಬ್ಬೀಸಮುದ್ರ.

**ಪ್ರಾಕೃತಿಕಸ್ವರೂಪ**:—**ಸೂಚನೆ**: [ತುಂಗಭದ್ರಾನದಿಯ ಉತ್ತರದಲ್ಲಿರುವ ಕರ್ಣಾಟಕಕ್ಕೆ "ಉತ್ತರ ಕರ್ಣಾಟಕ" ವೆಂತಲೂ ದಕ್ಷಿಣದಲ್ಲಿರುವ ಕರ್ಣಾಟಕಕ್ಕೆ "ದಕ್ಷಿಣ ಕರ್ಣಾಟಕ" ವೆಂತಲೂ ಸಮುದ್ರತೀರದಿಂದ ಪಶ್ಚಿಮಘಟ್ಟಗಳವರೆಗೆ "ತೀರಪ್ರದೇಶ" ವೆಂತಲೂ ಇನ್ನು ಮುಂದೆ ಹೇಳುವೆವು.]

**ತೀರಪ್ರದೇಶ** :—ಕರ್ಣಾಟಕಕ್ಕೆ ೩೦೦ ಮೈಲಿಗಳಷ್ಟು ಸಮುದ್ರ ತೀರವಿದೆ. ಮುಂಬಯಿಯಂತಹ ಸ್ವಭಾವಸಿದ್ಧವಾದ ಬಂ

ದರಾವುದು ಇಲ್ಲದ್ದರೂ ಕಾರವಾರ್, ಭಟಕಲ್, ಮಲ್ಪೆ, ಮಂಗಳೂರು, ಗೋವಾ ಇವು ಸಣ್ಣರೇವು ಪಟ್ಟಣಗಳು.

**ಬೆಟ್ಟಗಳು** :—ಪಶ್ಚಿಮದಲ್ಲಿ ಸಹ್ಯಾದ್ರಿ ಅಥವಾ ಪಶ್ಚಿಮ ಘಟ್ಟಗಳು, ದಕ್ಷಿಣದಲ್ಲಿ ನೀಲಗಿರಿ, ಆಗ್ನೇಯದಲ್ಲಿ ಪೂರ್ವಘಟ್ಟದ ಕೆಲವು ಭಾಗಗಳು ಇವೆ. ಪಶ್ಚಿಮಘಟ್ಟಗಳು, ಕರ್ಣಾಟಕದ ಪಶ್ಚಿಮದಿಕ್ಕಿನಲ್ಲಿ ಸಮುದ್ರಕ್ಕೆ ಸಮೀಪವಾಗಿಯೇ ದಕ್ಷಿಣೋತ್ತರವಾಗಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಅವಿಚ್ಛಿನ್ನವಾಗಿ ಹಬ್ಬಿವೆ. ಉತ್ತರಕನ್ನಡ ಜಿಲ್ಲೆಯಲ್ಲಿ ತೀರಪ್ರದೇಶವು ೧೦,೧೫ ಮೈಲಿಗಳಷ್ಟೇ ಅಗಲವಾಗಿದೆ. ದಕ್ಷಿಣಕ್ಕೆ ಹೋಗುತ್ತ ಹೋಗುತ್ತ ತೀರಪ್ರದೇಶವು ಅಗಲವಾಗುವುದು. ದಕ್ಷಿಣಕನ್ನಡ ಜಿಲ್ಲೆಯ ತೀರ ಉತ್ತರದಲ್ಲಿರುವ ಕೊಲ್ಲೂರು ಕಣಿವೆಯ ಹತ್ತಿರ ಪಶ್ಚಿಮಘಟ್ಟಗಳು ಒಮ್ಮೇಲೆ ಪೂರ್ವಕ್ಕೆ ತಿರುಗಿ ಅಲ್ಲಿಂದ ನೀಲಗಿರಿಯ ಪರ್ಯಂತ ಆಗ್ನೇಯಾಭಿಮುಖವಾಗಿ ಹಬ್ಬಿವೆ. ಹೀಗಂದ ಮೇಲೆ ಸ್ವಭಾವವಾಗಿ ತೀರಪ್ರದೇಶವು ದಕ್ಷಿಣಕನ್ನಡ ಜಿಲ್ಲೆಯಲ್ಲಿ ಹೆಚ್ಚಾಗಿಯೇ ಇರುವುದು ; ಉದಾಹರಣೆಗಾಗಿ ಮಂಗಳೂರಿನ ಹತ್ತಿರ ೫೦ ಮೈಲಿಯಷ್ಟು ಅಗಲವಾಗಿರುತ್ತದೆ. ಕೊಲ್ಲೂರು ಕಣಿವೆಗೆ ದಕ್ಷಿಣದಲ್ಲಿರುವ ಶ್ರೇಣಿಗೂ, ಉತ್ತರದಲ್ಲಿರುವ ಶ್ರೇಣಿಗೂ ಮುಖ್ಯವಾದೊಂದು ವ್ಯತ್ಯಾಸವು ಕಂಡು ಬರುವುದು. ದಕ್ಷಿಣ ಶ್ರೇಣಿಯಲ್ಲಿ ಅಲ್ಲಲ್ಲಿ ಕೆಲವು ಕಣಿವೇ ಮಾರ್ಗಗಳಿವೆ. ಇವುಗಳ ಮುಖಾಂತರ ಪ್ರಸ್ಥಭೂಮಿಗೂ, ತೀರಪ್ರದೇಶಕ್ಕೂ, ರಸ್ತೆಗಳನ್ನು ಹಾಕಿದ್ದಾರೆ. ಇವುಗಳಲ್ಲಿ ಮುಖ್ಯವಾದುವು ಆಗುಂಭೆಘಾಟ್, ಬಿಸಲೆಘಾಟ್, ಹೈದರ್ ಘಾಟ್. (ಆಗುಂಬಿಘಾಟ್ ಮೇಲೆ ನಿಂತು ಚೈತ್ರಮಾಸದ ದಿವಸಗಳಲ್ಲಿ ಸೂರ್ಯಾಸ್ತಮಯವನ್ನು ನೋಡುವುದಕ್ಕಾಗಿಯೇ ಅನೇಕರು ಹೋಗುವರು. ಆ ಕಾಲದಲ್ಲಿ ಅರಬ್ಬೀಸಮುದ್ರವೆಲ್ಲವೂ ರಕ್ತವರ್ಣವಾಗಿ ಸೂರ್ಯನ ಕಿರಣಗಳು ಪ್ರತಿಬಿಂಬಿಸುವದರಿಂದ ಥಳಥಳಿಸಿ ಹೊಳೆಯುವುದು ಬಹುರಮ್ಯವಾಗಿರುವುದು.) ಉತ್ತರ ಶ್ರೇಣಿಯಲ್ಲಿ ಕಣಿವೇ ದಾರಿಗಳು ಅಪೂರ್ವವೆಂದೇ ಹೇಳಬಹುದು. ಈ ಘಟ್ಟ

ಗಳ ಸರಾಸರಿ ಎತ್ತರವು ೩೦೦೦ ಅಡಿಗಳು. ೬೦೦೦ ಅಡಿಗಳಿಗಿಂತಲೂ ಎತ್ತರವಾಗಿ ಹೋಗಿರುವ ಒಂದೆರಡು ಶಿಖರಗಳು ದಕ್ಷಿಣ ಶ್ರೇಣಿಯಲ್ಲಿ, ಕಡೂರು ಡಿಸ್ಟ್ರಿಕ್ಟಿನಲ್ಲಿವೆ. ಕುದುರೆಮುಖವೆಂಬುದು ೬೨೦೭ ಅಡಿಗಳು, ಮುಳ್ಳಯ್ಯನಗಿರಿ ಎಂಬುದು ೬೩೧೭ ಅಡಿಗಳು. ಈ ಘಟ್ಟಗಳುಬರೀಕಲ್ಲಿನಿಂದ ಕೂಡಿದ್ದು ನೋಡುವುದಕ್ಕೆ ಬೇಸರಿಕೆಯನ್ನುಂಟುಮಾಡುವ ಹಾಗಿಲ್ಲ. ಸೂರ್ಯನ ಕಿರಣಗಳು ನೆಲದ ಮೇಲಕ್ಕೆ ಬೀಳುವುದಕ್ಕವಕಾಶ ಕೊಡದಷ್ಟು ದಟ್ಟವಾದ ಕಾಡುಗಳು ಎರಡು ಪಕ್ಕಗಳಲ್ಲಿಯೂ ಬೆಳೆದು ಬಹು ಮನೋರಂಜಕವಾಗಿ ರಾಮಾಯಣದಲ್ಲಿ ಹೇಳಿರುವ ದಂಡಕಾರಣ್ಯವು ಈವರೆಗೂ ಉಳಿದು ಬಂದಿದೆ ಎಂದು ಹೇಳುವುದರಲ್ಲಿ ಸಂಶಯಕೊಡದ ಹಾಗೆ ಶೋಭಿಸುತ್ತಿರುವುವು.

ದಕ್ಷಿಣದಲ್ಲಿ ನೀಲಗಿರಿಯು ೮೦೦೦ ಅಡಿಗಳವರೆಗೂ ಹೋಗಿದೆ. ೮೬೪೦ ಅಡಿಗಳ ಎತ್ತರವಿರುವ ದೊಡ್ಡಬೆಟ್ಟವೆಂಬುದು ದಕ್ಷಿಣದೇಶದಲ್ಲೆಲ್ಲಾ ಅತ್ಯುನ್ನತವಾದ ಶಿಖರ. ಈ ಬೆಟ್ಟಗಳ ಮೇಲೆ ಪಶ್ಚಿಮಘಟ್ಟಗಳಲ್ಲಿರುವಷ್ಟು ದಟ್ಟವಾದ ಕಾಡುಗಳು ಇಲ್ಲ. ಪಶ್ಚಿಮಘಟ್ಟಗಳನ್ನೂ ಪೂರ್ವಘಟ್ಟಗಳನ್ನೂ ಈ ನೀಲಗಿರಿಯು ಒಂದು ಕೂಡಿಸುತ್ತದೆ.

ಪೂರ್ವಘಟ್ಟಗಳು ನೀಲಗಿರಿಗೆ ಈಶಾನ್ಯಾಭಿಮುಖವಾಗಿ ಹಬ್ಬಿವೆ. ಪಶ್ಚಿಮಘಟ್ಟಗಳ ಹಾಗೆ ಎತ್ತರವಾಗಿಲ್ಲ. ಅವಿಚ್ಛಿನ್ನವಾಗಿರದೆ ಅಲ್ಲಲ್ಲಿ ಒಡೆದೊಡೆದು ಹಬ್ಬಿವೆ; ಮತ್ತು ದಟ್ಟವಾದ ಕಾಡುಗಳಿಂದ ಕೂಡಿರದೆ ಬೋಳಾಗಿಯೇ ಇವೆಯೆಂದು ಹೇಳಬಹುದು.

ಇನ್ನೂ ಕೆಲವು ಸಣ್ಣ ಸಣ್ಣ ಬೆಟ್ಟದಸಾಲುಗಳು ದಕ್ಷಿಣದಲ್ಲಿ ಪೂರ್ವಪಶ್ಚಿಮಘಟ್ಟಗಳ ನಡುವೆ, ಅವುಗಳನ್ನನುಸರಿಸಿಯೇ ದಕ್ಷಿಣೋತ್ತರವಾಗಿ ಹಬ್ಬಿವೆ. ಉತ್ತರದಲ್ಲಿ ಇನ್ನಾವ ಶ್ರೇಣಿಯೂ ಇಲ್ಲ. ಆದ್ದರಿಂದ ದಕ್ಷಿಣ ಕರ್ಣಾಟಕವು ಹಳ್ಳತಿಟ್ಟಾಗಿದೆ; ಉತ್ತರಕರ್ಣಾಟಕವಾದರೋ ಸ್ವಲ್ಪಹೆಚ್ಚು ಕಡಿಮೆ ಒಂದೇ ಸಮನಾದ, ಪಶ್ಚಿಮದಿಂದ ಪೂರ್ವಕ್ಕೆ ಇಳಿಜಾರಾಗಿರುವ ಮೈದಾನ ಪ್ರದೇಶವಾಗಿದೆ.

**ಸ್ವಭಾವಿಕವಿಭಾಗಗಳು** :—ಸ್ವಾಭಾವಿಕವಾಗಿ ಕರ್ನಾಟಕ ವನ್ನು ತೀರಪ್ರದೇಶವೆಂದೂ, ಮಲೆನಾಡೆಂದೂ, ಬೈಲುಸೀಮೆ ಎಂದೂ ಮೂರುವಿಭಾಗ ಮಾಡಬಹುದು. ತೀರಪ್ರದೇಶವೆಂದರೆ ಯಾವುದೆಂಬುದನ್ನು ಹಿಂದೆಯೇ ಹೇಳಿದ್ದೇವೆ. ಪಶ್ಚಿಮಘಟ್ಟಗಳೂ ಅವುಗಳ ಸುತ್ತಮುತ್ತಲೂ ಇರುವ ಕಾಡುಗಳೂ, ಇರುವ ಪ್ರದೇಶಕ್ಕೆ ಮಲೆನಾಡೆಂದು ಹೆಸರು. ಬೈಲುಸೀಮೆಯೆಂದು ಕರೆಯಲ್ಪಡುವ ಮೈದಾನ ಪ್ರದೇಶವು ಉತ್ತರದಲ್ಲಿಯೂ ದಕ್ಷಿಣದಲ್ಲಿಯೂ ಇದೆ. ಉತ್ತರ ಮೈದಾನದ ಸರಾಸರಿ ಎತ್ತರವು ೧೫೦೦ ಅಡಿಗಳು; ದಕ್ಷಿಣದ್ದು ೨೦೦೦ ಅಡಿಗಳು; ಈ ಪ್ರಸ್ಥಭೂಮಿಯು ಪೂರ್ವ ಪಶ್ಚಿಮ ಘಟ್ಟಗಳ ಮಧ್ಯೆ ತ್ರಿಕೋಣಾಕಾರವಾಗಿ, ಶೃಂಗವು ನೀಲಗಿರಿಯಲ್ಲಿರುವಂತೆ ಇದೆ. ಸಾಧಾರಣವಾಗಿ ಕರ್ನಾಟಕವು ಪಶ್ಚಿಮದಿಂದ ಪೂರ್ವಕ್ಕೆ ಇಳಿಜಾರಾಗಿದೆಯೆಂದು ಹೇಳಬಹುದು.

**ಮಳೆ** :—ಮುಂಗಾರು (ವೈಶಾಖದಿಂದ ಕಾರ್ತೀಕದವರೆಗೆ) ಹಿಂಗಾರು (ಕಾರ್ತೀಕದಿಂದ ಪುಷ್ಯದವರೆಗೆ) ಮಳೆಗಳೆರಡಲ್ಲಿ, ಕರ್ನಾಟಕವು ಬದುಕುವುದು ಮುಂಗಾರಿನಿಂದಲೇ. ಮುಂಗಾರು ಬೇಸಿಗೆಯಲ್ಲಿ ಬೆಂದು, ತಪ್ತವಾಗಿ ಚಾತಕಪಕ್ಷಿಯಂತೆಬಾಯಿಬಿಟ್ಟು ಮೋಡಗಳನ್ನೇ ನೋಡುತ್ತಿರುವ ಕರ್ನಾಟಕಕ್ಕೆ ನೀರೆರೆದು, ಭೂಮಿಯನ್ನು ತಂಪಾಗಿಮಾಡಿ, ಒಣಗಿಸೊರಗಿಹೋಗಿರುವ ಹುಲ್ಲುಗಾವಲುಗಳನ್ನು ಪುನಃ ಹಚ್ಚಗೆಮಾಡುವದು. ಇದರ ಒಂದೆರಡು ಮಳೆಗಳಾದ ತಕ್ಷಣವೇ ಇಡೀಕರ್ನಾಟಕವೇ ಎದ್ದು ಉತ್ತಿಬಿತ್ತುವದರಲ್ಲಿ ತ್ವರೆಗೊಂಡು, ಕರ್ನಾಟಕದ ಮುಖ್ಯಜೀವನಾಧಾರಗಳಾದ ರಾಗಿ ಜೋಳಗಳನ್ನೂ, ಇವುಗಳೊಂದಿಗೆ ದ್ವಿದಳಧಾನ್ಯಗಳನ್ನೂ ಬೆಳೆಯುವದು. ಈ ಮಳೆಯಲ್ಲಿ ತೀರಪ್ರದೇಶದಲ್ಲಿಯೂ, ಮೋಡಗಳಿಗೆ ಅಭಿಮುಖವಾಗಿರುವ ಪಶ್ಚಿಮಘಟ್ಟಗಳ ಪಶ್ಚಿಮ ಪ್ರದೇಶದಲ್ಲಿಯೂ ೩೦೦ ಇಂಚುಗಳಷ್ಟು ವಿಪರೀತಮಳೆಯಾಗುವುದು. ಮೋಡಗಳಿಗೆ ಪರಾಙ್ಮುಖವಾಗಿರುವ ಘಟ್ಟಗಳ ಪೂರ್ವಪ್ರದೇಶದಲ್ಲಿ ಸುಮಾರು ೭೦, ೭೦ ಇಂಚುಗಳಷ್ಟೇ ಮಳೆಯಾಗುವುದು. ಮೋಡಗಳು ಪುತ್ತಿಷ್ಟು ಪೂರ್ವಕ್ಕೆ

ಬೈಲು ಸೀಮೆಗಳ ಕಡೆಗೆ ಬಂದಹಾಗೆಲ್ಲಾ ಮಳೆಯು ಬಹು ಮಟ್ಟಿಗೆ ಕುಗ್ಗಿ ಹೋಗುವದು. ಉತ್ತರಕರ್ಣಾಟಕದ ಮಧ್ಯಭಾಗಲ್ಲಿ ೧೯ ಹದಗಳಷ್ಟೇ ಮಳೆಯಾಗುವದು. ಅಂತೂ ಪಶ್ಚಿಮಪ್ರದೇಶಗಳಲ್ಲಿ ಮಳೆ ವಿಪರೀತ. ಪೂರ್ವಪ್ರದೇಶಗಳಲ್ಲಿ ಮಳೆ ಸ್ವಲ್ಪಕಮ್ಮಿ. ಈ ಮಳೆಗಾಲದಲ್ಲಿ ನದಿಗಳ ಹುಟ್ಟೆಲ್ಲಾ ಪಶ್ಚಿಮ ಘಟ್ಟಗಳಲ್ಲೇ ಇರುವದರಿಂದ ಎಲ್ಲಾನದಿಗಳಲ್ಲೂ ಏಕಪ್ರಕಾರವಾಗಿ ಪ್ರವಾಹವು ಬರುವದು. ಕೆರೆಕಟ್ಟೆಗಳು ತುಂಬಿತುಳುಕಾಡುವುವು. ದುರ್ದೈವದಿಂದ ಈ ಮಳೆಬಾರದೇ ಹೋದರೆ ಕ್ಷಾಮವು ತಲೆದೋರುವದು ಸಿದ್ಧ.

ಹಿಂಗಾರು ಈಶಾನ್ಯದಿಕ್ಕಿನಿಂದ ಬರತಕ್ಕಮಳೆ. ಮುಂಗಾರಿನಲ್ಲಿ ಮಳೆಕಮ್ಮಿಯಾಗಿರುವ ಪೂರ್ವಪ್ರದೇಶಗಳಿಗೆ ಮಳೆಯಾಗುವದು. ಉತ್ತರ ಕರ್ಣಾಟಕದ ಬೈಲುಸೀಮೆಯಲ್ಲಿ ಈ ಮಳೆಯಿಂದಲೇ ಕೆರೆಕಟ್ಟೆಗಳು ತುಂಬ ಬೇಕಾದರೆ. ಮುಂಗಾರಿನಷ್ಟು ಮಳೆ ಇದರಲ್ಲಿ ಆಗದೇ ಹೋದರೂ, ಇದು ಮುಂದೆ ಬರುವ ಬಿಸಿಲುಗಾಲ ಕಳೆಯುವವರೆಗೆ ಕೆರೆಕಟ್ಟೆಗಳಲ್ಲಿ ನೀರಿರುವಂತೆ ಮಾಡುವದಕ್ಕೂ, ಹುಲ್ಲುಗಾವಲು ಹಚ್ಚಗಿರುವದಕ್ಕೂ, ಬಹು ಸಹಕಾರಿಯಾಗಿರುತ್ತದೆ. ಒಟ್ಟಿನಮೇಲೆ ವರ್ಷದಲ್ಲಿ ಉತ್ತರ ಕರ್ಣಾಟಕಕ್ಕಿಂತಲೂ ದಕ್ಷಿಣಕರ್ಣಾಟಕದಲ್ಲಿ ಸುಮಾರು ಎರಡರಷ್ಟು ಮಳೆಯಾಗುವದು.

**ನದಿಗಳು** :—ಕರ್ಣಾಟಕದ ಒಂದೆರಡು ನದಿಗಳವಿನಾ ಮಿಕ್ಕ ನದಿಗಳೆಲ್ಲಾ ಪೂರ್ವಾಭಿಮುಖವಾಗಿ ಹರಿದು ಬಂಗಾಳಾ ಕೊಲ್ಲಿಗೆ ಸೇರುವುವು. ಅವುಗಳಲ್ಲಿ ಮುಖ್ಯವಾದುವು ಉತ್ತರದಲ್ಲಿ ಕೃಷ್ಣಾ, ದಕ್ಷಿಣದಲ್ಲಿ ಕಾವೇರೀ, ಪೂರ್ವದಲ್ಲ ಪೆನ್ನಾರ್, ಪಾಲಾರ್, ಪೊನ್ನೇರ್ ನದಿಗಳು. ಪಶ್ಚಿಮಕ್ಕೆ ಹೋಗತಕ್ಕವುಗಳೆಲ್ಲಾ ತೊರೆಗಳು. ಅವುಗಳಲ್ಲೆಲ್ಲಾ ನದಿ ಎನಿಸಿಕೊಂಡು ಪ್ರಸಿದ್ಧವಾಗಿರುವದು ಶರಾವತಿಯೊಂದೇ. ಬಲ್ಲಾಳರಾಯನ ದುರ್ಗದಿಂದ ನಂದೀದುರ್ಗಕ್ಕೆ ಒಂದು ಗೆರೆಯನ್ನೂ, ಇದನ್ನು ಸಮಕೋಣದಲ್ಲಿ ಕತ್ತರಿಸುವ ಹಾಗೆ ಮತ್ತೊಂದುಗೆರೆಯನ್ನೂ ಎಳೆದರೆ, ಕೃಷ್ಣಾ, ಕಾವೇರೀ ಮತ್ತುಪಾಲಾರ್ ಪೆನ್ನಾರ್, ಪೊನ್ನೇರ್ ನದಿಗಳ ಜಲಾಶಯಗಳನ್ನು ಸಾಮಾನ್ಯವಾಗಿ

ವಿಂಗಡಿಸಬಹುದು. ಈ ಜಲವಿಭಾಗಸ್ಥಾನದಿಂದ ಉತ್ತರಕ್ಕೆ ತುಂಗಭದ್ರೆಯು ವೇದಾವತಿಯೊಡನೆ ಹರಿದು ಆಲಂಪುರದ ಹತ್ತಿರ ಕೃಷ್ಣೆಗೆ ಕೂಡುತ್ತದೆ. ಕೃಷ್ಣಾ ನದಿಯ ಇತರ ಉಪನದಿಗಳಲ್ಲಿ ಭೀಮಾ, ಘಟಪ್ರಭಾ, ಮಲಪ್ರಭಾ ಮುಖ್ಯವಾದವು. ಜಲವಿಭಾಗಸ್ಥಾನದಿಂದ ದಕ್ಷಿಣಕ್ಕೆ ಹೇಮಾವತಿ, ಶಿಂಷಾ, ಅರ್ಕಾವತಿ ನದಿಗಳು ಹರಿದು ಕಾವೇರಿಗೆ ಕೂಡುವವು. ಕಾವೇರಿಯ ಬಲಗಡೆಯ ಉಪನದಿಗಳು ಲಕ್ಷ್ಮಣತೀರ್ಥ, ಕಪಿಲಾ, ಹೊನ್ನುಹೊಳೆ, ಈಶಾನ್ಯಾಭಿಮುಖವಾಗಿ ಹರಿದು ಬಂದು ಸೇರುವವು. ಜಲವಿಭಾಗಸ್ಥಾನದಿಂದ ಪೂರ್ವಕ್ಕೆ ಪಾಲಾರ್, ಪೆನ್ನಾರ್, ಪೊನ್ನೈರ್ ನದಿಗಳು ಹರಿಯುವವು.

ಈ ನದಿಗಳಲ್ಲಿ ಯಾವುದೂ ದೋಣಿಯ ವ್ಯಾಪಾರಕ್ಕೆ ಯೋಗ್ಯವಾಗಿಲ್ಲ. ಭದ್ರಾಕಪಿಲಾನದಿಗಳಲ್ಲಿ ಮರಗಳನ್ನು ತೇಲಿಸಿಬಿಡುವರು. ಬೇಸಿಗೆಯಲ್ಲಿ ಈ ನದಿಗಳಲ್ಲಿ ವಿಶೇಷವಾಗಿ ನೀರು ಹರಿಯುವದಿಲ್ಲ; ಒಂದು ಕಡೆಯಿಂದ ಮತ್ತೊಂದು ಕಡೆಗೆ ಸುಲಭವಾಗಿ ದಾಟಬಹುದು. ಮಳೆಗಾಲದಲ್ಲಿಯಾದರೋ ಪೂರ್ವಪ್ರವಾಹದ ಹಾವಳಿಯನ್ನು ಹೇಳಲು ಸಾಧ್ಯವಲ್ಲ. ಕೆಲವು ತಿಂಗಳುಗಳವರೆಗೆ ವ್ಯಾಪಾರ, ಪ್ರಯಾಣಗಳನ್ನು ನಿಲ್ಲಿಸಬೇಕಾಗುವದು.

**ಜಲಪಾತಗಳು**:-ಪಶ್ಚಿಮಘಟ್ಟಗಳ ಉತ್ತರ ಶ್ರೇಣಿಯಲ್ಲಿ ಜಲಪಾತಗಳು ಬಹಳವಾಗಿವೆ. ಅವುಗಳಲ್ಲಿ ಮುಖ್ಯವಾದವು ಗೇರಸೊಪ್ಪೆ, ಉಂಛಳಿ, ಲಾಳಗುಳಿ, ಮಾಗೋಡ ಮತ್ತು ಗೋಕಾಕ. ಗೇರಸೊಪ್ಪೆಯ ಜಲಪಾತವು ಶರಾವತೀ ಪ್ರವಾಹದಿಂದ ಉಂಟಾಗಿರುತ್ತದೆ. ಈ ನದಿಯು "ಸಹ್ಯಾದ್ರಿಯ ನೆತ್ತಿಯ ಮೇಲಿಂದ ನಾಲ್ಕು ಬೇರೆಬೇರೆ ಎಸಳುಗಳಾಗಿ ೮೩೦ ಅಡಿ ಆಳವಾದ ತಗ್ಗಿನೊಳಕ್ಕೆ ಬೀಳುತ್ತದೆ. ಪುಷ್ಯಮಾಸದಿಂದ ಚೈತ್ರಮಾಸದವರೆಗೆ ಪ್ರೇಕ್ಷಕರು ಮನದಣಿಯ ನೋಡುವದಕ್ಕೆ ಬಹು ಸರಸವಾದ ಕಾಲವು. ಭೂಮಿಯಲ್ಲಿ ಗೇರಸೊಪ್ಪೆಯ ಜಲಪಾತವು ಒಂದುಬಗೆಯಿಂದ ಎಲ್ಲಕ್ಕೂ ಮೇಲಾದ್ದೆಂದು ಹೇಳಬಹುದು." ಉಂಛಳಿ ಜಲಪಾತವು ತದಡಿ ಹೊಳೆಯಿಂದುಂಟಾದುದು. "ಸಹ್ಯಾದ್ರಿಯ ಮೇಲಿಂದ ೪೦೦ ಅಡಿ

ಆಳವಾದ ತಗ್ಗಿನಲ್ಲಿ ಬೀಳುವುದು. ಸುತ್ತುಮುತ್ತಲಿನ ಅಡಿಕೆಯ ತೋಟಗಳಿಂದಲೂ, ನಾನಾಪ್ರಕಾರದ ಬಹು ಭವ್ಯವಾದ ವೃಕ್ಷಗಳ ಅಡವಿಯಿಂದಲೂ ಈ ಜಲಪಾತಕ್ಕೆ ಅತಿವಿಲಕ್ಷಣವಾದ ಶೋಭೆಯುಂಟಾಗಿದೆ." ಲಾಳಗುಳಿಯ ಜಲಪಾತವು ಕಾಳೀ ನದಿಯಿಂದ ಉಂಟಾಗಿದೆ. "ಇದು ಸಹ್ಯಾದ್ರಿಯ ಮೇಲಿಂದ ೩೦೦ ಅಡಿಗಳ ವರೆಗೆ ಒಮ್ಮೇಲೆ ಎತ್ತರವಾದ ಗುಡ್ಡದ ಕೆಳಗೆ ಬೀಳದೆ, ಪಾವಟಿಗಳಂಥ ಪ್ರದೇಶದ ಮೇಲಿಂದ ಹರಿಯುತ್ತ, ಅಲ್ಲಲ್ಲಿಗೆ ೧೦, ೨೦ ಅಡಿಗಳಷ್ಟು ಬಿದ್ದು, ಅಸಂಖ್ಯ ಸಣ್ಣ ಸಣ್ಣ ಜಲಪಾತಗಳನ್ನುಂಟುಮಾಡಿ, ಕಾಲನ್ನು ನೋಡುವವರಿಗೆ ಬಹುರಮಣೀಯವಾಗಿದೆ." ಮಾಗೋಡದ ಜಲಪಾತವು, ಗಂಗಾವಳಿ ಅಥವಾ ಬೆಡತಿ ಎಂಬ ನದಿಯು, ಅಲ್ಲಲ್ಲೆ ೧೦೦, ೨೦೦ ಅಡಿಗಳ ಎತ್ತರವಾದ ಕಡಿವಾಡಿಗಳ ಮೇಲಿಂದ ೮೦೦ ಅಡಿಗಳ ವರೆಗೆ ಬೀಳುತ್ತಹೋಗುವುದರಿಂದುಂಟಾಗಿದೆ. ಲಾಳಗುಳಿಯ ಜಲಪಾತಗಳಿಗಿಂತಲೂ ಇವು ಹೆಚ್ಚು ಭವ್ಯವಾಗಿಯೂ ಸುಂದರವಾಗಿಯೂ ಕಾಣುತ್ತವೆ. ಈ ಜಲಪಾತಗಳೆಲ್ಲವೂ ಉತ್ತರಕನ್ನಡ ಜಿಲ್ಲೆಯಲ್ಲಿವೆ. ಗೋಕಾವಿಯ ಜಲಪಾತವು ಬೆಳಗಾಂವಿಜಿಲ್ಲೆಯಲ್ಲಿ, ಬೆಳಗಾಂವಿಗೆ ಸ್ವಲ್ಪದೂರದಲ್ಲಿಯೇ ಘಟಪ್ರಭಾನದಿಯು ೧೭೦ ಅಡಿಗಳಿಂದ ಬೀಳುವುದರಿಂದುಂಟಾಗಿದೆ. ಇದು ನೈಲುನದಿಯ ಜಲಪಾತವೆಂದು ಒಂದು ವಿಧದಲ್ಲಿ ಹೇಳಬಹುದು

ಗಗನಚುಕ್ಕಿ, ಭರಚುಕ್ಕಿ ಎಂಬ ಜಲಪಾತಗಳು, ಕಾವೇರೀನದಿಯು ಶಿವನಸಮುದ್ರದ ಹತ್ತಿರ ಕರ್ಣಾಟಕ ಪ್ರಸ್ಥಭೂಮಿಯಿಂದ ತಮಿಳುನಾಡು ಮೈದಾನ ಪ್ರದೇಶಕ್ಕೆ ಪ್ರವೇಶಿಸುವಾಗ ಆಗಿವೆ. ಗಗನಚುಕ್ಕಿಯ ಎತ್ತರವು ೩೭೦ ಅಡಿಗಳು. ಇಲ್ಲಿ ವಿದ್ಯುಚ್ಛಕ್ತಿಯನ್ನು ತಯಾರಿಸಿ ಬೆಂಗಳೂರು ಮೈಸೂರು ಪಟ್ಟಣಗಳನ್ನು ರಾತ್ರಿಯಲ್ಲಿ ಬೆಳಗಿಸುವುದಕ್ಕೂ, ಕೋಲಾರದ ಚಿನ್ನದಗಣಿಗಳಲ್ಲಿ ಯಂತ್ರಗಳ ಉಪಯೋಗಕ್ಕೂ ಕಳುಹಿಸುತ್ತಾರೆ.

**ಅಣೆಕಟ್ಟುಗಳು** :—ಕರ್ಣಾಟಕದಲ್ಲಿ ಸ್ವಭಾವಸಿದ್ಧವಾದ ಸರೋವರಗಳಿಲ್ಲ. ಆದರೆ ಅನುಕೂಲವಾದ ಎಡೆಗಳಲ್ಲೆಲ್ಲಾ ನದಿಗಳಿಗೆ

ಅಣ್ಣಕಟ್ಟೆಗಳನ್ನು ಹಾಕಿ ಕೃತಕಸರೋವರಗಳನ್ನು ನಿರ್ಮಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದುವು ಕೃಷ್ಣರಾಜಸಾಗರ, ಮಾರೀಕಣಿವೆ, ಸೂಳೇಕೆರೆ, ಮದಗನಕೆರೆ ಮತ್ತು ಅಯ್ಯನಕೆರೆಗಳು. ಕೃಷ್ಣರಾಜಸಾಗರ ಕಟ್ಟೆಯು ಮೈಸೂರಿನ ಹತ್ತಿರ ಕಾವೇರಿಗೆ ಅಣ್ಣಲಾಗಿದೆ. ಇದರ ಎತ್ತರ ೧೨೦ ಅಡಿಗಳು, ಉದ್ದ ೧|| ಮೈಲಿ. ಇದರ ನೀರಿನಿಂದ ಸುಮಾರು ೨ ಲಕ್ಷ ಎಕರೆ ಜಮೀನು ಸಾಗುವಳಿಯಾಗುವುದು. ಮಾರೀಕಣಿವೆಯು ಚಿತ್ರದುರ್ಗದ ಡಿಸ್ಟ್ರಿಕ್ಟಿನಲ್ಲಿ ವೇದಾವತಿಗೆ ಅಣ್ಣಲಾಗಿದೆ. ಶಿವಮೊಗ್ಗಾ ಡಿಸ್ಟ್ರಿಕ್ಟಿನಲ್ಲಿರುವ ಸೂಳೇಕೆರೆಯ ಸುತ್ತಳತೆಯು ೪೦ ಮೈಲಿಗಳು. ಕಡೂರು ಡಿಸ್ಟ್ರಿಕ್ಟಿನಲ್ಲಿ ಮದಗನಕೆರೆ, ಅಯ್ಯನಕೆರೆಗಳು ಪ್ರಸಿದ್ಧವಾದುವು.

**ವಾಯುಗುಣ** :—ತೀರಪ್ರದೇಶದ ವಾಯುವಿನಲ್ಲಿ ಆರ್ದ್ರತ್ವವು ಸರ್ವದಾ ಇದ್ದಾಗ್ಯೂ, ಹವೆಯು ಆರೋಗ್ಯಕರವಾದದ್ದು. ಶೀತರೋಗಗಳು ಹುಟ್ಟುವ ಸಂಭವವಿಲ್ಲ. "ಮಲೆನಾಡಿನ ಹವೆಯು ರೋಗಕರವು; ಇದರಲ್ಲಿ ತೇವ ಬಹಳಿರುವುದಲ್ಲದೆ ನೀರು ನಿರ್ದೋಷವಲ್ಲ. ಬೇಸಿಗೆಯಲ್ಲಿ ಮಾತ್ರ ಒಂದೆರಡು ತಿಂಗಳು ಆರ್ದ್ರತ್ವವಿರುವುದಿಲ್ಲವಾದಕಾರಣ ಜನರ ಆರೋಗ್ಯವು ನೆಟ್ಟಗಿರುತ್ತದೆ. ಉಳಿದ ಯಾವತ್ತೂ ಕಾಲದಲ್ಲಿ ಚಳಿಜ್ವರ, ನೆಗಡಿ, ಕೆಮ್ಮು ಅಜೀರ್ಣ ಮುಂತಾದುವುಗಳಿಗೆ ಹೆದರಿ ನಡಿಯಬೇಕಾಗಿದೆ. ಬೈಲುಸೀಮೆಯಷ್ಟು ಆರೋಗ್ಯಕರವಾದ ಪ್ರದೇಶವು ಯಾವುದೂ ಇಲ್ಲವೆಂದು ಅನುಭವದಿಂದ ತಿಳಿದು ಬಂದಿದೆ. ಇಲ್ಲಿನ ಒಣಹವೆಯು ಶರೀರಕ್ಕೆ ಬಹಳ ಹಿತಕರವಾಗಿರುತ್ತದೆ. ಜನರು ವಾಡಿಕೆಯಾಗಿ ನಿರೋಗಿಗಳಾಗಿರುವರು."

**ಭೂಗುಣ** :—ದಕ್ಷಿಣದಲ್ಲಿ ಭೂಮಿಯು ಕೆಂಪು, ಗಟ್ಟಿ, ಸರಜುಗಲ್ಲಿನಿಂದ ಕೂಡಿದೆ. ಮಳೆನೀರು ಹೆಚ್ಚಾಗಿ ಭೂಮಿಯಲ್ಲಿ ಇಂಗುವುದಿಲ್ಲ. ನೀರು ಅಲ್ಪಸ್ವಲ್ಪ ಇಂಗಿದ ಮೇಲೆ, ಆ ತೇವವು ಬಹಳ ದಿವಸಗಳವರೆಗೆ ಇರುವುದಿಲ್ಲ. ಉತ್ತರದಲ್ಲಿ ನೆಲ ಕಪ್ಪು; ಮೃದುವಾದುದು. ನೀರು ಬಹುಮಟ್ಟಿಗೆ ಇಂಗುವುದು. ಮಳೆ



ಕೃಷ್ಣರಾಜ ಸಾಗರ [ಕರ್ನಾಟಕದ ಕೈಪಿಡಿ ಪುಟ ೮

ಬಿದ್ದು ನೀರು ಇಂಗಿದಮೇಲೆ ಭೂಮಿಯ ಮೇಲ್ಭಾಗವು ಹೆಪ್ಪು ಕಟ್ಟುವುದರಿಂದ ತೇವವು ಬಹಳ ದಿವಸಗಳವರೆಗೆ ಇರುತ್ತದೆ. ಒಂದೆ ರಡು ಹದ ಮಳೆಯಾದರೂ ಸಾಕು, ಸಂಪೂರ್ಣ ಬೆಳೆಯನ್ನು ಬೆಳೆ ಯಬಹುದು

**ಜೀವನ** :—ವ್ಯವಸಾಯವೇ ಮುಖ್ಯಜೀವನ. ರಾಗಿಯನ್ನು ದಕ್ಷಿಣದಲ್ಲಿಯೂ, ಜೋಳವನ್ನು ಉತ್ತರದಲ್ಲಿಯೂ, ದ್ವಿದಳ ಧಾನ್ಯ ಗಳನ್ನೂ, ಎಣ್ಣೆಯ ಬೀಜಗಳನ್ನೂ ಸಾಮಾನ್ಯವಾಗಿ ಎಲ್ಲಕಡೆಯಲ್ಲಿ ಯೂ ವಿಶೇಷವಾಗಿ ಬೆಳೆಯುವರು. ಕಪ್ಪು (ಎರೆ) ಭೂಮಿ ಇರುವ ಕಡೆಗಳಲ್ಲೆಲ್ಲಾ ಹಿಂಗಾರು ಮಳೆಯಲ್ಲಿ ಹತ್ತಿಯನ್ನು ವಿಶೇಷವಾ ಗಿಯೂ, ಗೋಧಿಯನ್ನು ಸ್ವಲ್ಪ ಮಟ್ಟಿಗೂ ಬೆಳೆಯುತ್ತಾರೆ. ಭತ್ತ ಕಬ್ಬುಗಳನ್ನು ನೀರು ಸಮೃದ್ಧಿಯಾಗಿರುವ ಕಡೆಗಳಲ್ಲಿ ಸಾಗುವಳಿ ಮಾಡುವರು. ಪಶ್ಚಿಮ ಘಟ್ಟಗಳ ತಪ್ಪಲುಗಳಲ್ಲಿ ಅಡಿಕೆ, ಘಟ್ಟಗ ಳಲ್ಲಿ ಕಾಫಿ, ತೀರಪ್ರದೇಶದಲ್ಲಿ ತೆಂಗಿನಕಾಯಿ, ಸಾಂಬಾರ ಪದಾರ್ಥ ಗಳು ಆಗುವುವು.

**ಖನಿಜಗಳು** :—ಕೋಲಾರ ಬಳ್ಳಾರಿ ಜಿಲ್ಲೆಗಳಲ್ಲಿ ಚಿನ್ನವೂ, ಕಡೂರು ಜಿಲ್ಲೆಯಲ್ಲಿ ಭದ್ರಾವತಿ, ಮತ್ತು ಕಾನಡಾ ಜಿಲ್ಲೆಯಲ್ಲಿ ಸಹ್ಯಾ ದ್ರಿಯಭಾಗದಲ್ಲಿ ಹೊನ್ನಾವರದ ಹತ್ತಿರ ಬಸವರಾಜದುರ್ಗವೆಂಬ ನಡುಗಡ್ಡೆಯಲ್ಲಿ ಕಬ್ಬಿಣವೂ; ಧಾರವಾಡ, ಕರ್ಜಗಿ, ರಾಣಿಬೆನ್ನೂರು ಬಾಗಲು ಕೋಟೆ ತಾಲ್ಲೂಕುಗಳಲ್ಲಿ ಸ್ಲೇಟುಹಲಿಗೆಗಳೂ, ಶಿವಮೊಗ್ಗೆ ಯಲ್ಲಿ ಮ್ಯಾಂಗನೀಸೂ, ಮೈಸೂರಿನಲ್ಲಿ ಕ್ರೋಮೇಟೂ ಸಿಕ್ಕುವುವು.

**ರಾಜಕೀಯ ವಿಭಾಗಗಳು** :—ಕರ್ಣಾಟಕವು ಛಿದ್ರವಾಗಿ ನಾಲ್ಕು ಸರ್ಕಾರಗಳ ಆಡಳಿತಕ್ಕೆ ಸೇರಿದೆ. ಉತ್ತರಕನ್ನಡ, ಬೆಳ ಗಾಂವಿ, ರತ್ನಗಿರಿ, ಧಾರವಾಡ, ಬಿಜಾಪುರ ಜಿಲ್ಲೆಗಳು ಬೊಂಬಾಯಿ ಆಧಿಪತ್ಯಕ್ಕೂ, ರಾಯಚೂರು, ಗುಲ್ಬರ್ಗ, ಷೋಲಾಪುರ, ಉಸ್ಮಾ ನಾಬಾದ್ ಜಿಲ್ಲೆಗಳು ನಿಜಾಮರ ಸಂಸ್ಥಾನಕ್ಕೂ, ಬಳ್ಳಾರಿ ಅನಂತ ಪುರ ಕೊಯಮತ್ತೂರುಗಳಲ್ಲಿ ಕೆಲವು ಭಾಗಗಳು, ಸೇಲಂ, ನೀಲ

ಗಿರಿ ಕೊಡಗು, ದಕ್ಷಿಣಕನ್ನಡ ಮದರಾಸು ಅಧಿಪತ್ಯಕ್ಕೂ, ಮಿಕ್ಕ ಭಾಗವೆಲ್ಲವೂ ಮೈಸೂರು ಸಂಸ್ಥಾನಕ್ಕೂ ಸೇರಿದೆ. [ಕರ್ನಾಟಕದ ಏಕೀಕರಣವು ಅಗತ್ಯವಾಗಿ ಆಗಬೇಕಾಗಿದೆ. ಇಲ್ಲದೇ ಹೋದರೆ ಕರ್ನಾಟಕವು ನಾಮಾವಶಿಷ್ಟವಾಗುವುದರಲ್ಲಿ ಸಂಶಯವಿಲ್ಲ.]

**ಜನಸಂಖ್ಯೆ ಮತ್ತು ಭಾಷೆ**:—ಸುಮಾರು ೧೫೦ ಲಕ್ಷ ಜನರಿದ್ದಾರೆ. ಇವರಲ್ಲಿ ೧೦,೩೭೫,೭೦೪ ಜನರು ಕನ್ನಡ ಮಾತ ನ್ನಾಡುತ್ತಾರೆ. ಪಶ್ಚಿಮತೀರಪ್ರದೇಶದಲ್ಲಿ ಕರ್ನಾಟಕದ ಮಿಕ್ಕ ಎಲ್ಲಾ ಪ್ರದೇಶಗಳಿಗಿಂತ ಜನಸಾಂದ್ರತೆಯು ಹೆಚ್ಚಾಗಿದೆ. ಕನ್ನಡವೇ ಈ ದೇಶದ ಮುಖ್ಯ ಭಾಷೆಯು; ತುಳು, ಕೊಡಗಿ, ಬಡಗ, ತೋಡ ಇವು ಇದರ ಶಾಖೆಗಳು.

**ಆಮದು, ರಫ್ತು**:—ಕರ್ನಾಟಕವು ದಕ್ಷಿಣ ಹಿಂದೂಸ್ಥಾನದ ಜನಗಳಿಗೆಲ್ಲಾ ಬಟ್ಟೆಯಾಗುವಷ್ಟು ಹತ್ತಿಯನ್ನು ಬೆಳೆದರೂ, ಇದನ್ನು ಪರದೇಶಗಳಿಗೆ ಕಳುಹಿಸಿ ನೂಲನ್ನೂ ಬಟ್ಟೆಯನ್ನೂ ಮಾಡಿಸಿ ತರಿಸುತ್ತದೆ. ತನ್ನ ಮಕ್ಕಳು ವರ್ಷದಲ್ಲಿ ಹತ್ತಿರಹತ್ತಿರ ೬ ತಿಂಗಳವರೆಗೆ ಏನೂ ಕೆಲಸವಿಲ್ಲದೇ ಇರುವಾಗ ಕರ್ಣಾಟಕವು ಬೇರೆ ದೇಶದವರಿಗೆ ಕೆಲಸಕೊಟ್ಟು ಜೀವನೋಪಾಯವನ್ನು ಕಲ್ಪಿಸಿ ಕೊಡುವಷ್ಟು ಪರೋಪಕಾರಿಣಿಯಾಗಿದ್ದಾಳೆ.

ಕಬ್ಬಿಣ, ಕಬ್ಬಿಣದ ಸಾಮಾನುಗಳು, ಉಕ್ಕು, ರೇಷ್ಮೆ, ಸಕ್ಕರೆ ಇವು ಆಮದು ಪದಾರ್ಥಗಳಲ್ಲಿ ಮುಖ್ಯವಾದುವು. ಚಿನ್ನ, ಅಡಿಕೆ, ಕಾಫಿ, ತೆಂಗಿನಕಾಯಿ, ಬೆಲ್ಲ ಇವು ರಫ್ತು ಪದಾರ್ಥಗಳಲ್ಲಿ ಮುಖ್ಯವಾದುವು.

**ಕೈಗಾರಿಕೆ**:—ರೇಷ್ಮೆಯ ನೆಯ್ಗೆಯನ್ನು ಬೆಂಗಳೂರಿನಲ್ಲಿಯೂ, ಕಂಬಳಿನೆಯ್ಗೆಯನ್ನು ಕೋಲಾರ, ದಾವಣಗೆರೆ, ಬಾಗಲುಕೋಟೆ, ರಾಣೆಬೆನ್ನೂರು, ಸಿಂದಗಿ, ಈ ಊರುಗಳಲ್ಲಿಯೂ ಮಾಡುವರು. ಚಂದನದ ಸಾಮಾನುಗಳನ್ನು ಶಿರಸಿ, ಸಿದ್ದಾಪುರ, ಹೊನ್ನಾವರ

ಕುಮಟ, ಸೊರಬಸಾಗರಗಳಲ್ಲಿ ಹೇರಾಗಿ ತಯಾರಿಸುವರು. ಚಿತ್ರಾ
ಳಿಯ ಕೆಲಸವು ಶ್ರವಣಬೆಳಗೊಳ, ಬಾಗಲಕೋಟೆ, ಹುಬ್ಬಳ್ಳಿ,
ಶಿರಸಿ, ಬೆಳಗಾಂವಿಗಳಲ್ಲಿ ಆಗುವುದು. ಚೆನ್ನಪಟ್ಟಣ, ಗೋಕಾವಿ
ಗಳ ಬಣ್ಣದ ಸಾಮಾನುಗಳು ಬಹು ಪ್ರಸಿದ್ಧವಾಗಿವೆ.

**ರೈಲುಮಾರ್ಗ** ;—ಬೆಂಗಳೂರಿಂದ ಬೆಳಗಾಂವಿಗೂ, ಹುಬ್ಬ
ಳ್ಳಿಯಿಂದ ಹೊಸಪೇಟೆಗೂ ಇರುವ ರೈಲುಮಾರ್ಗವು ದಕ್ಷಿಣಮಹಾ
ರಾಷ್ಟ್ರ ಕಂಪೆನಿಯವರ ಕೈಯ್ಯಲ್ಲಿದೆ. ಇದಕ್ಕೆ ಉತ್ತರಕರ್ಣಾಟಕ
ಕಂಪೆನಿ ಎಂಬ ಹೆಸರು ಸಮಂಜಸವಾಗಿದೆ ಬೆಂಗಳೂರಿಂದ ನಂಜ
ನಗೂಡಿಗೂ, ಮೈಸೂರಿಂದ ಅರಸೀಕೆರೆಗೂ, ಬೆಂಗಳೂರಿಂದ ಚಿಕ್ಕ
ಬಳ್ಳಾಪುರ, ಕೋಲಾರಗಳ ಮುಖಾಂತರ ಬೌರಿಂಗಪೇಟೆಗೂ ಇರು
ವ ರೈಲುಮಾರ್ಗಗಳು ಮೈಸೂರುಸಂಸ್ಥಾನದ ಆಕ್ಷಿಕೆಯಲ್ಲಿವೆ.

**ಹರಪನಹಳ್ಳಿ ರಾಮರಾವ್.**

---

II

# ಚರಿತ್ರೆ

---

## ಪೀಠಿಕೆ

ಕರ್ಣಾಟಕದೇಶ ಕರ್ಣಾಟಕಜನಾಂಗ ಎಂಬೊಂದು ವ್ಯಕ್ತಿ ದೃಷ್ಟಿಯಿಂದ; ಕರ್ಣಾಟಕ ಜನಜೀವನ, ಧಾರ್ಮಿಕ, ನೈತಿಕ, ಮಾನಸಿಕ ಉನ್ನತಾವನತ ದೃಷ್ಟಿಯಿಂದ, ಸರಳವಾದ, ನಿಷ್ಪಕ್ಷಪಾತವಾದ, ಸಂಪೂರ್ಣ ಪ್ರತಿಭಾದರ್ಶಕವಾದ ಇತಿಹಾಸ ದೃಷ್ಟಿಯಿಂದ ಇದುವರೆಗೆ ಯಾರೂ ಕರ್ಣಾಟಕದೇಶದ ಚರಿತ್ರೆಯನ್ನು ಬರೆಯಲು ಪ್ರಯತ್ನಿಸಲಿಲ್ಲ. ನಿರೀಹರಾದ, ನಿರ್ಜೀವಿಗಳಾದ, ನೀತಿರಹಿತರಾದ, ಕಾರ್ಯಾರಂಭಗುಣಶೂನ್ಯರಾದ, ಛಿದ್ರಛಿದ್ರರಾದ ಕನ್ನಡಿಗರು ಮತ್ತೆ ನೀತಿಯುತರೂ ಸಜೀವಿಗಳೂ ಆಗಬೇಕಾಗಿದ್ದರೆ ತಮ್ಮ ಪ್ರಾಚೀನ ಇತಿಹಾಸ ಪಠನವು ಅವರಿಗೆ ಅವಶ್ಯಕ; ತಮ್ಮ ಪ್ರಾಚೀನ ವಿಭೂತಿಗಳ ಜೀವನಪರಿಚಯವು ಅವರಿಗೆ ಅತ್ಯವಶ್ಯಕ; ತಮ್ಮ ದೇಶದ ಚೆಲುವಿನರಿವು ಅವರಿಗೆ ಅತ್ಯಂತಾವಶ್ಯಕ. ಯಾವನೋ ಒಬ್ಬ ಪ್ರತಿಭಾಶಾಲಿಯು ಹುಟ್ಟಿ ಸ್ಫೂರ್ತಿದಾಯಕವೂ, ಸದುದ್ದೇಶ್ಯಪ್ರೇರಕವೂ ಸಂಪೂರ್ಣವೂ ಆದ ಕರ್ಣಾಟಕ ಇತಿಹಾಸವನ್ನು ಬರೆಯಲಿರುವನೆಂಬ ಒಂದು ಆಶೆಯು ನಮ್ಮಲ್ಲಿ ದಿನದಿನಕ್ಕೂ ವೃದ್ಧಿಹೊಂದುತ್ತಲಿದೆ. ಆ ಇತಿಹಾಸವನ್ನು ಓದಿ ಕರ್ಣಾಟಕಮಾತೆಯ ಸಂಪೂರ್ಣ ರೂಪ, ತೇಜಸ್ಸು, ಶಕ್ತಿಗಳನ್ನು ಕಂಡು ನವಚೈತನ್ಯವನ್ನು ಪಡೆಯಲು ಕನ್ನಡಿಗರೆಲ್ಲರೂ ಸಿದ್ಧರಾಗುವರೆಂಬ ಧೈರ್ಯದಿಂದ ಈಗ ಸ್ಥೂಲವಾಗಿಯೂ, ಸಂಕ್ಷೇಪವಾಗಿಯೂ ಕರ್ಣಾಟಕ ಇತಿಹಾಸಪರಿಚಯವನ್ನು ಅವರಿಗೆ ಮಾಡಿಕೊಡಲು ನಾವು ಪ್ರಯತ್ನಿಸುವೆವು.

**ಮೇರೆಗಳು:**—ಮೊಟ್ಟಮೊದಲು ಕರ್ಣಾಟಕದೇಶವು ಯಾವುದು, ಅದಕ್ಕೆ ಮೇರೆಗಳು ಯಾವವು ಎಂಬುದು ದೊಡ್ಡ ಪ್ರಶ್ನೆ. ಈ

ಪ್ರಶ್ನೆಗೆ ಸುಲಭವಾದ ಉತ್ತರವನ್ನು ಕೊಡಲು ಸಾಧ್ಯವಿಲ್ಲ. ಪುರಾಣ ಯುಗದಲ್ಲೂ, ಬಹು ಪುರಾತನಕಾಲದಲ್ಲೂ ಈ ದೇಶಕ್ಕೆ ಮೇರೆಗಳು ಯಾವುವೆಂದು ನಿರ್ಧರಿಸಿ ಹೇಳಲು ಆಗದು. ಆದರೆ ಕ್ರಿ.ಶ. ೯ನೆಯ ಶತಮಾನದ ಆದಿಯಲ್ಲಿದ್ದ ರಾಷ್ಟ್ರಕೂಟ ಸಮ್ರಾಜನಾದ ನೃಪತುಂಗನು ಉತ್ತರಕ್ಕೆ ಗೋದಾವರೀ ದಕ್ಷಿಣಕ್ಕೆ ಕಾವೇರೀ ನದಿಗಳು ಕರ್ಣಾಟಕಕ್ಕೆ ಮೇರೆಗಳೆಂದು ಹೇಳಿರುವನು. ಬಹು ಹಿಂದಿನಕಾಲದಿಂದಲೂ ಸಮುದ್ರವೇ ಕರ್ಣಾಟಕಕ್ಕೆ ಪಶ್ಚಿಮ ಮೇರೆ ಎಂಬ ವಿಷಯದಲ್ಲಿ ಯಾರ ಆಕ್ಷೇಪಣೆಯೂ ಇಲ್ಲ. ಪೂರ್ವದಗಡಿ ಇದೇ ಎಂದು ಗುರ್ತಿಸುವುದು ಕಷ್ಟಸಾಧ್ಯವಾದರೂ ಅಜಂತದಿಂದ ಗೋದಾವರೀ ಮಂಜೀರಾ ಸಂಗಮಸ್ಥಲಕ್ಕೊಂದು ಗೆರೆಯನ್ನೆಳೆದು, ಅಲ್ಲಿಂದ ದಕ್ಷಿಣದಲ್ಲಿ ನೀಲಗಿರಿಯವರೆಗೆ ನೆಟ್ಟನೆಯ ರೇಖೆಯೊಂದನ್ನೆಳೆದರೆ ಆ ರೇಖೆಯೇ ಸ್ಥೂಲವಾಗಿ ಕರ್ಣಾಟಕದ ಪೂರ್ವ ಮೇರೆಯಾಗುತ್ತದೆ. ಕರ್ಣಾಟಕಕ್ಕೆ ಉತ್ತರದಲ್ಲಿ ಮಹಾರಾಷ್ಟ್ರದೇಶವೂ, ಪೂರ್ವದಲ್ಲಿ ಆಂಧ್ರದೇಶವೂ, ದಕ್ಷಿಣದಲ್ಲಿ ತಮಿಳು ಮಲಯಾಳ ನಾಡುಗಳೂ, ಪಶ್ಚಿಮದಲ್ಲಿ ಅರಬ್ಬೀಸಮುದ್ರವೂ ಇವೆ.

**ನಾಮಾಂತರಗಳು**:—ದಕ್ಷಿಣಾಪಥವು ಅತಿ ಪುರಾತನವಾದುದು. ದ್ರಾವಿಡರಾಷ್ಟ್ರಗಳೆಲ್ಲವೂ ದಕ್ಷಿಣಾಪಥದಲ್ಲೇ ಇರುವವು. ಈ ದ್ರಾವಿಡರಾಷ್ಟ್ರಗಳಲ್ಲ ಒಂದಾದ ಕರ್ಣಾಟಕರಾಷ್ಟ್ರವೂ ಪುರಾತನವೆಂಬುದರಲ್ಲಿ ಅತಿಶಯವೇನೂ ಇಲ್ಲ. ಈ ರಾಷ್ಟ್ರವು ಬೇರೆಬೇರೆ ಶತಮಾನಗಳಲ್ಲಿ 'ಮಹಾರಾಷ್ಟ್ರ', 'ಕರ್ಣಾಟಕ', 'ರಟ್ಟಪಾಡಿ', ಎಂಬದಾಗಿಯೂ, ಬೇರೆಬೇರೆ ಭಾಗಗಳಲ್ಲಿ 'ಅಶ್ಮಕ', 'ಮೂಳಕ', 'ಕುಂತಳ', 'ಬನವಸಿ', 'ಸತಿಯಪುತ್ರ', 'ಪುನ್ನಾಟ', 'ಮಹಿಷಮಂಡಲ', 'ಕರಹಾಟ' ಎಂಬದಾಗಿಯೂ ಕರೆಯಲ್ಪಡುತ್ತಿತ್ತು.

ಹಲವರು 'ಮಹಾರಾಷ್ಟ್ರ' ವೆಂದರೆ ಈಗಿನ ಮಹಾರಾಷ್ಟ್ರವೆಂದೂ, ಕರ್ಣಾಟಕಕ್ಕೂ ಮಹಾರಾಷ್ಟ್ರಕ್ಕೂ ಯಾವ ಸಂಬಂಧವೂ ಇಲ್ಲವೆಂದೂ ವಾದಿಸುವರಾದರೂ, ಅನೇಕ ವಿದ್ವಾಂಸರು ಈ

ವಾದವು ನಿರಾಧಾರವಾದುದೆಂದೂ, ಪ್ರಾಚೀನ 'ಮಹಾರಾಷ್ಟ್ರ' ಕ್ಕೂ ಈಗಿನ 'ಮರಾಠೀ' ಜನರು ವಾಸಮಾಡುವ ದೇಶಕ್ಕೂ ಗಂಟುಹಾಕುವುದು ಅಶಾಸ್ತ್ರೀಯವೆಂದೂ ತೋರಿಸಿರುವರು. 'ಮಹಾರಾಷ್ಟ್ರ' ವೆಂದರೆ ಸಂಪೂರ್ಣವಾಗಿ 'ಕರ್ಣಾಟ' ದೇಶವೆಂದು ಅರ್ಥವಾಗದಿದ್ದರೂ ಕರ್ಣಾಟಕದ ಒಂದು ಭಾಗವು ಮಹಾರಾಷ್ಟ್ರದಲ್ಲಿ ಸೇರಿತ್ತೆಂಬುದರಲ್ಲಿ ಸಂಶಯವಿಲ್ಲ.

'ಕುಂತಳ' ದ ವಿಷಯದಲ್ಲೂ ಈ ಬಗೆಯ ಚರ್ಚೆಯೇ ಒದಗಿರುವುದು. 'ಕುಂತಳ' ಕ್ಕೂ 'ಕರ್ಣಾಟಕ' ಕ್ಕೂ ಸಂಬಂಧ ಹಚ್ಚುವುದು ಹುಚ್ಚು ಕೆಲಸವೆಂದು ಕೆಲವರು ಅಭಿಪ್ರಾಯಪಟ್ಟರೂ ಮೂಲಾಧಾರಗಳಾದ ಶಾಸನ ಸಾಹಿತ್ಯ ಮೊದಲಾದುವುಗಳನ್ನು ಆಮೂಲಾಗ್ರವಾಗಿ ಪರೀಕ್ಷಿಸಿದ ಇತಿಹಾಸ ಸಂಶೋಧಕರು 'ಕುಂತಳ' ವೆಂದರೆ 'ಕರ್ಣಾಟಕ' ವೆಂದೇ ಒತ್ತಿ ಹೇಳುತ್ತಿರುವರು. ಇದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ.

'ಬನವಸಿ' ಯು ಪಶ್ಚಿಮಸಮುದ್ರತೀರ; 'ಪುನ್ನಾಟ' ವೆಂಬುದೀಗಿನ ಮಹಿಸೂರು ದೇಶದ ತೆಂಕಲು; 'ಮಹಿಷಮಂಡಲ' ವು ಮಹಿಸೂರು; 'ಕರಹಾಟವು' ಈಗಿನ ಕೊಲ್ಲಾಪುರ ಸಂಸ್ಥಾನ; 'ರಟ್ಟಪಾಡಿ' ಯು ಗೋದಾವರೀ ಕೃಷ್ಣಾ ನದಿಗಳ ಮಧ್ಯದೇಶ; 'ಸತಿಯಪುತ್ರ' ವು ಈಗಿನ ದಕ್ಷಿಣಕನ್ನಡಜಿಲ್ಲೆ; 'ಅಶ್ಮಕ' ರಾಜ್ಯವು ನರ್ಮದಾ ನದಿಯ ದಕ್ಷಿಣಭಾಗದಲ್ಲಿತ್ತು; 'ಮೂಳಕ' ರಾಜ್ಯವಿದಕ್ಕೆ ಉತ್ತರದಲ್ಲಿತ್ತು; ಮೂಳಕವು ಬಹುತರ ಕರ್ಣಾಟಕದ ಉತ್ತರ ಮೇರೆಯಾಗಿದ್ದಿತು. ಶಾತವಾಹನರ (ಆಂಧ್ರಭೃತ್ಯರ) ರಾಜಧಾನಿಯಾದ ಪ್ರತಿಷ್ಠಾನವು (ಪೈಠಣ) ಈ ರಾಜ್ಯದಲ್ಲೇ ಇತ್ತು.

**ಪ್ರಾಚೀನತೆ**:—ಬಳಕೆಯಲ್ಲಿರುವ 'ಕರ್ಣಾಟ' ವೆಂಬ ಹೆಸರು ಈ ದೇಶಕ್ಕೆ ಯಾವಾಗಬಂತೋ ಹೇಳಲು ಸಾಧ್ಯವಿಲ್ಲ. ಮೊಟ್ಟಮೊದಲೀ ಶಬ್ದವು ಕ್ರಿ.ಶ. ೬ನೆಯ ಶತಮಾನದ ಸುಮಾರಿನಲ್ಲಿದ್ದ ವರಾಹಮಿಹಿರನ ಬೃಹತ್ಸಂಹಿತೆಯಲ್ಲಿ ಕಂಡುಬರುತ್ತದೆ. ಮಹಿಷಮಂಡಲ, ಸತಿಯ

ಪುತ್ರ, ಜನವಸಿ, ಪುನ್ನಾಟ ಎಂಬ ಹೆಸರುಗಳು ಕ್ರಿಸ್ತ ಪೂರ್ವ ಮೂರ ನೆಯ ಶತಮಾನದ ಅಶೋಕನ ಶಾಸನಗಳಲ್ಲಿ ಹೇಳಲ್ಪಟ್ಟಿವೆ. ಅಶ್ಮ ಕರಾಜ್ಯದ ಹೆಸರು ಕ್ರಿಸ್ತಪೂರ್ವ ೭ ನೆಯ ಶತಮಾನದ ಪಾಣಿನಿಯ ಅಷ್ಟಾಧ್ಯಾಯಿಯಲ್ಲಿದೆ. ಕುಂತಳ, ಬನವಸಿಗಳ ವಿಚಾರವು, ಸಾಕಾ ದಷ್ಟು ಮಟ್ಟಿಗೆ, ಭಾರತರಾಷ್ಟ್ರೀಯ ಪುರಾತನ ಪುರಾಣಗಳಾದ ರಾಮಾಯಣ ಮಹಾಭಾರತಗಳಲ್ಲಿ ವರ್ಣಿತವಾಗಿದೆ. ಈ ಪುರಾಣಗ ಳಲ್ಲಿಯೂ, ಅಶೋಕನ ಶಾಸನಗಳಲ್ಲಿಯೂ ವರ್ಣಿತರಾಗಿರುವ 'ಪು ಳಿಂದರು' ಕರ್ಣಾಟಕ ಅಥವಾ ಕುಂತಳ ನಿವಾಸಿಗಳು. ಈ ಕುಂತಳ ನಿವಾಸಿಗಳಾದ ಪುಳಿಂದರ ಉಲ್ಲೇಖವು ಕ್ರಿಸ್ತ ಪೂರ್ವ ಸುಮಾರು ೫೫೦೦ ವರ್ಷಗಳ ಕಾಲದ ಐತರೇಯ ಬ್ರಾಹ್ಮಣಗಳಲ್ಲಿ ಕಾಣಬರು ತ್ತದೆ; ಸಾಂಖ್ಯಾಯನ ಸೂತ್ರದಲ್ಲೂ ಕಂಡುಬರುತ್ತದೆ.

ಯಾರೂ ಉಸಿರೆತ್ತಲಾರದಂತಹ ಸಮನ್ವಯಾತ್ಮಕವಾದ ಈ ಇತಿಹಾಸ ಸಾಧನಗಳ ಮಾತಂತಿರಲಿ. ಅನಾದಿಕಾಲದಿಂದಲೂ ಆಚಾ ರಪರಂಪರೆಯಾಗಿ ಸ್ಮೃತಿಬದ್ಧವಾಗಿ ಬಂದ ಹಲವು ದೃಷ್ಟಾಂತಗ ಳುಂಟು. ರಾಮಾಯಣದಲ್ಲಿ ಚಿತ್ರಿತವಾಗಿರುವ ದಂಡಕಾರಣ್ಯದ ಅನೇಕ ತೀರ್ಥಗಳೂ ಕ್ಷೇತ್ರಗಳೂ ಕರ್ಣಾಟಕ ದೇಶದಲ್ಲಿವೆ. ಬಳ್ಳಾ ರಿ ಜಿಲ್ಲೆಯಲ್ಲಿ ತುಂಗಭದ್ರಾತೀರದಲ್ಲಿರುವ ಹಂಪೆಯೇ ರಾಮಾಯ ಣದ ಕಿಷ್ಕಿಂಧಾಪುರ; ಹಂಪೆಯಲ್ಲಿರುವ ಕಾಸಾರವೇ ಶ್ರೀರಾಮ ಚಂದ್ರನು ಕಂಡು ಆನಂದಿಸಿದ ಪಂಪಾಸರೋವರ; ಧಾರವಾಡ ಜಿಲ್ಲೆಯಲ್ಲಿರುವ ಹಾನುಂಗಲ್ಲೇ ಪಂಚಪಾಂಡವರು ಅಜ್ಞಾತವಾಸ ವನ್ನು ಮಾಡಿದ ವಿರಾಟನಗರ; ಮಹಿಸೂರು ಶಿವಮೊಗ್ಗೆಯ ಜಿಲ್ಲೆ ಯ ಸೊರಬದ ತಾಲ್ಲೂಕಿನ ಕೂಬತ್ತೂರೆಂಬ ಗ್ರಾಮವೇ ಚಂದ್ರ ಹಾಸನ ರಾಜಧಾನಿಯಾಗಿದ್ದ ಕುಂತಳಪುರ; ಮಹಿಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೂಕಿನ ಮಣಿಪುರದಲ್ಲೇ ಅರ್ಜುನನಿಗೂ ಬಭ್ರುವಾಹನನಿಗೂ ಕಾಳಗ ನಡೆದುದು. ಇಷ್ಟೇ ಅಲ್ಲದೆ ಅನೇಕ ಚಿಕ್ಕ ಪುಟ್ಟ ಪುರಾಣಗಳಿಂದ ಕರ್ಣಾಟಕದೇಶವು ಪುರಾತನವೂ ಪ್ರಸಿದ್ಧವೂ ಆದುದೆಂದು ತಿಳಿದು ಬರುತ್ತದೆ. ಈ ದೃಷ್ಟಾಂತಗಳಿಗೆ ಆಧುನಿಕ

ಶಾಸ್ತ್ರೀಯ ಪ್ರಮಾಣ ಪದ್ಧತಿಯ ಮೇರೆಗೆ ಅಷ್ಟು ಬೆಲೆಯಿಲ್ಲವಾದ ರೂ ಅವುಗಳಿಗೆ ಅಮೌಲ್ಯವಾದ ಸಾಂಸ್ಕೃತಿಕ ಬೆಲೆಯುಂಟೆಂದು ಹೇಳಲೇಬೇಕು.

**ಜನರು, ಸಂಸ್ಕೃತಿ:**—ಇದುವರೆಗೆ ಕರ್ಣಾಟದೇಶದ ಪ್ರಾಚೀನತೆಯನ್ನು ಕುರಿತು ವಿಚಾರ ಮಾಡಿದ್ದಾಯಿತು. ಈಗ ಕರ್ಣಾಟಕ ದೇಶದ ನಿವಾಸಿಗಳ ಸ್ಥಿತಿಗತಿಗಳು ಅವರ ಸಂಸ್ಕೃತಿ ಇತ್ಯಾದಿ ವಿಚಾರಗಳನ್ನು ಲೆಕ್ಕಿಸುವುದು ಕ್ರಮಪ್ರಾಪ್ತವಾಗಿಯೇ ಇದೆ. ಬ್ರಾಹ್ಮಣಗಳ ಕಾಲದಲ್ಲೇ ಕುಂತಳದೇಶದಲ್ಲಿ ಅನಾರ್ಯವರ್ಗಕ್ಕೆ ಸೇರಿದ ಜನರಿದ್ದರೆಂದು ತಿಳಿದೆವು. ಆರ್ಯರು ಉತ್ತರದೇಶದಿಂದ ಹೊರಟು, ವಿಂಧ್ಯಪರ್ವತವನ್ನು ದಾಟಿ, ದ್ರಾವಿಡದೇಶದಲ್ಲಿ ನೆಲಸಿ, ಮೊದಲು ಮೊದಲು ಅಲ್ಲಿನ ನಿವಾಸಿಗಳನ್ನು ಕೀಳುತರದವರೆಂದು ತೃಣೀಕರಿಸಿ, ಕ್ರಮೇಣ ಅವರೊಂದಿಗೆ ಕಲೆತುಹೋದರೆಂಬ ಮತವು ಎಲ್ಲರಿಂದಲೂ ಅಂಗೀಕೃತವಾದುದು. ಅಂದರೆ ದಕ್ಷಿಣದೇಶದ ನಿವಾಸಿಗಳ ರಕ್ತದಲ್ಲಿ ಎರಡು ಪ್ರಕೃತಿಗಳು ಇರುವುವೆಂದು ನಿಶ್ಚಯವಾಯಿತು. ಮೊದಲನೆಯದು ದ್ರಾವಿಡ ಪ್ರಕೃತಿ; ಎರಡನೆಯದು ಆರ್ಯಪ್ರಕೃತಿ. ಈ ಸಂದರ್ಭದಲ್ಲಿ ಶುದ್ಧದ್ರಾವಿಡ ಪ್ರಕೃತಿಯ ಲಕ್ಷಣಗಳನ್ನೂ, ದ್ರಾವಿಡರ ನಾಗರೀಕತೆಯನ್ನೂ; ಶುದ್ಧ ಆರ್ಯಪ್ರಕೃತಿಯ ಲಕ್ಷಣಗಳನ್ನೂ, ಆರ್ಯರ ನಾಗರೀಕತೆಯನ್ನೂ ತಿಳಿಸಿ, ಅನಂತರ ಇವೆರಡೂ ಪ್ರಕೃತಿಗಳ ನಾಗರೀಕತೆಗಳ ಮಿಳನದಿಂದುಂಟಾದ ಪರಿಣಾಮಗಳನ್ನು ಸಂಕ್ಷೇಪವಾಗಿ ತಿಳಿಸುವೆವು.

**ಆರ್ಯರೂ ದ್ರಾವಿಡರೂ:**—ದ್ರಾವಿಡರೂ ಆರ್ಯರಂತೆಯೇ ಹೊರಗಿನಿಂದ ಬಂದು ದಕ್ಷಿಣದೇಶದಲ್ಲಿ ನೆಲೆಸಿದವರೇ ವಿನಾ ಆದಿನಿವಾಸಿಗಳಲ್ಲ. ಆರ್ಯರಿಗಿಂತಲೂ ಮೊದಲೇ ಬಂದ ದ್ರಾವಿಡರ ಆಗಮನಕಾಲವನ್ನು ನಿಷ್ಕರ್ಷಿಸುವುದು ಕಷ್ಟ. ಇವರು ಬಲಿಷ್ಟರು, ಕಷ್ಟಸಹಿಷ್ಣುಗಳು; ಅಷ್ಟು ಸುಂದರ ಪುರುಷರಲ್ಲ; ಮೇಧಾವಿಗಳು, ದೂರದರ್ಶಿಗಳಲ್ಲ; ಬುದ್ಧಿವಂತರೇನೋ ಹೌದು,

ಆದರೆ ಭಾವನಾಶಕ್ತಿ ಕಡಮೆ ; ಕಾರ್ಯಾರಂಭಗುಣವಿಲ್ಲದೆ ಇಲ್ಲ ; ಆದರೆ ಏಕಾಗ್ರತೆಯೂ ಹಟವೂ ಇಲ್ಲ. ದ್ರಾವಿಡರು ಬೇಸಾಯಗಾರರು. ಸಮುದ್ರಯಾನಮಾಡಿ ಕ್ರಿ. ಪೂ. ೩೦೦೦ ವರ್ಷಗಳ ಸುಮಾರಿನಲ್ಲೇ ಪಾಶ್ಚಾತ್ಯ ದೇಶಗಳೊಂದಿಗೆ ವ್ಯಾಪಾರ ನಡೆಸುತ್ತಿದ್ದರು. ದೋಣಿಗಳನ್ನು, ಹಡಗುಗಳನ್ನು ಕಟ್ಟುವುದರಲ್ಲಿ ಕುಶಲರು. ಇವರ ಗ್ರಾಮವ್ಯವಸ್ಥೆಯು ಶುದ್ಧ ದ್ರಾವಿಡವೆನ್ನಬೇಕು. ಹಳ್ಳಿಗೊಬ್ಬ ನಾಯಕನಿರುವನು ; ಹಳ್ಳಿಯವರೆಲ್ಲರೂ ಆ ನಾಯಕನ ಆಜ್ಞಾನುವರ್ತಿಗಳು. ಶತ್ರುಭಯವುಂಟಾದಾಗ ಮಾತ್ರ ಬೇರೆಬೇರೆ ಹಳ್ಳಿಗಳ ನಾಯಕರು ಒಂದುಗೂಡಿ ದೇಶಕ್ಷೋಭೆಯನ್ನು ಹರಿಸುತ್ತಿದ್ದರು. ದ್ರಾವಿಡಮನೆತನದಲ್ಲಿ ತಾಯಿಯೇ ಹಿರಿಯಳು. ಅವಳಗೇ ಸರ್ವಾಧಿಕಾರ. ಇವರಲ್ಲಿ ಮದುವೆಯ ಪದ್ಧತಿಯಿರಲಿಲ್ಲ. ಸಾಂಘಿಕ, ಆರ್ಥಿಕ, ರಾಜಕೀಯ ವಿಚಾರಗಳಲ್ಲಿ ದ್ರಾವಿಡರು ಯಾರಿಗೂ ಹಿಂದುಬಿದ್ದಿರಲಿಲ್ಲ. ಆದರೆ ಧಾರ್ಮಿಕ ವಿಚಾರದಲ್ಲವರು ಅಷ್ಟು ಮುಂದುವರಿದಿದ್ದರೆಂದು ಧೈರ್ಯವಾಗಿ ಹೇಳಲಾಗದು.

ಆರ್ಯರು ನೋಡುವುದಕ್ಕೆ ಸುಂದರ ಪುರುಷರು. ಭಾವನಾಶಕ್ತಿಯು, ಯೋಚನಾಶಕ್ತಿಯು, ವಿಭಜನಾಶಕ್ತಿಯೂ ಇವರಲ್ಲಿ ಹೆಚ್ಚು. ಶಾಂತಸ್ವಭಾವಿಗಳು ; ಏಕಾಗ್ರತೆಯೂ ಪಟುತ್ವವೂ ಇವರಲ್ಲಿ ಹುಟ್ಟಿದುದು. ಒಟ್ಟೇನು ಆರ್ಯರು ಪ್ರತಿಭಾಶಾಲಿಗಳು. ಪ್ರಕೃತಿ ಸೌಂದರ್ಯೋಪಾಸಕರೆಂಬ ಬಿರುದು ಇವರಿಗೆ ಚೆನ್ನಾಗಿ ಸಲ್ಲುವುದು. ಪಂಚಭೂತಗಳನ್ನಿವರು ದೈವಿಕಭಾವನೆಯಿಂದಾರಾಧಿಸುತ್ತಿದ್ದರು. ಶಾಸ್ತ್ರಜ್ಞಾನದಲ್ಲಾಗಲಿ ಸಾಹಿತ್ಯದಲ್ಲಾಗಲಿ ಇವರು ಯಾರಿಗೂ ಕಡಿಮೆ ಇಲ್ಲ. ಇವರು ಲೋಕಸಂಚಾರಿಗಳು ; ಕಾಲೂರಿ ಒಂದೆಡೆ ಸ್ಥಿರವಾಗಿ ನಿಲ್ಲುವವರಲ್ಲ. ಸಾಹಸೋದ್ಯೋಗಿಗಳು ; ದಿನದಿನವೂ ಹೊಸಹೊಸ ಪದಾರ್ಥಗಳಿಗೆ ಆಶಿಸುವವರು ; ಅವುಗಳ ಸಾಧನೆಯಲ್ಲಿ ನಿರಾಶೆಯನ್ನೆಂದಿಗೂ ಸಹಿಸರು. ಇವರಲ್ಲಿ ಪೂರು, ಅನ್ಯು ಎಂಬನೇಕ ಕುಲಗಳಿದ್ದುವು. ಅನಾರ್ಯರನ್ನೆದುರಿಸುವಾಗ

ಮಾತ್ರ ಇವರೆಲ್ಲರೂ ಒಂದಾಗುತ್ತಿದ್ದರು. ಶತ್ರುಭಯವಿಲ್ಲದವೇಳೆ ತಮ್ಮ ತಮ್ಮಲ್ಲೇ ಹೋರಾಡುತ್ತಿದ್ದರು.

ಇವರು ಪಶುಪಾಲಕರೇ ವಿನಾ ಹೆಚ್ಚು ಕೃಷೀವಲರಲ್ಲ. ನೆಯ್ಗೆ, ಮರಗೆಲಸ, ಲೋಹಗೆಲಸ ಮುಂತಾದ ಔದ್ಯೋಗಿಕಕರ್ಮಗಳಲ್ಲೂ ಅವರು ನಿರತರಾಗಿದ್ದರು. ಯವೆಗೋಧಿಯನ್ನು ಹೆಚ್ಚಾಗಿ ಬೆಳೆಯುತ್ತಿದ್ದರು. ಸೋಮಪಾನವನ್ನು ಮಾಡುತ್ತಿದ್ದರು, ಒಂದೊಂದು ಕುಲಕ್ಕೂ ಒಬ್ಬೊಬ್ಬ ಅಧಿಪತಿ ಇದ್ದನು; ಈ ಅಧಿಪತಿಗಳೆಲ್ಲರೂ ಒಬ್ಬ ರಾಜನ ಅಧಿಕಾರಕ್ಕೆ ಒಳಪಟ್ಟಿದ್ದರು. ಇಂತಹ ರಾಜ್ಯಗಳೂ ಅನೇಕವಿದ್ದುವು. ಆಗಿನ ಆರ್ಯರ ರಾಜ್ಯಾಂಗವ್ಯವಸ್ಥೆಯನ್ನೂ, ಆರ್ಥಿಕಾಭಿವೃದ್ಧಿಯನ್ನೂ, ವಿಶದೀಕರಿಸಲು ಸ್ಥಲಸಂಕೋಚದಿಂದ ಸಾಧ್ಯವಿಲ್ಲ. ಇವುಗಳಲ್ಲೆಲ್ಲ ಆರ್ಯರು ಮುಂದುವರಿದಿದ್ದರು. ಆರ್ಯರಲ್ಲಿ ವರ್ಣಾಶ್ರಮಾಚಾರವಿತ್ತು; ಯಜ್ಞಯಾಗಾದಿಗಳಲ್ಲಿ ನಿರತರಾಗಿದ್ದರು. ಬಹು ವಿಚಾರಪರರಾದಕಾರಣ ಧಾರ್ಮಿಕಪ್ರಪಂಚದಲ್ಲಿ ಇವರು ಹೆಚ್ಚು ಪರಿಶ್ರಮವನ್ನು ತೋರಿಸಿದರು. ಸೃಷ್ಟಿತತ್ವವನ್ನರಿಯಲು ಇವರು ಸದಾ ಆತುರರಾಗಿದ್ದರು.

**ಮಿಳನ:**—ಆರ್ಯರು ದಕ್ಷಿಣದೇಶಕ್ಕೆ ಬಂದು ವಸತಿಗಳನ್ನು ಕಲ್ಪಿಸಿಕೊಂಡ ಕಾಲದ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿದ್ದರೂ ಅವರ ಆಗಮನ, ವಸತಿಸ್ಥಾಪನ, ಮತ್ತು ದ್ರಾವಿಡರೊಂದಿಗೆ ಮಿಳನ ಈ ವಿಚಾರಗಳನ್ನು ಕುರಿತು ಯಾರೂ ಬಾಯೆತ್ತುವಂತಿಲ್ಲ. ಆರ್ಯರ ಆಗಮನದಿಂದ ದಕ್ಷಿಣದೇಶವು ಜನಭರಿತವಾಯಿತು, ಫಲಭರಿತವಾಯಿತು. ದಾಕ್ಷಿಣಾತ್ಯರ ದೇಹದಾರ್ಢ್ಯವೂ ಕಾಂತಿಯೂ, ಮನೋಬಲವೂ ಪಾರಿಶುಧ್ಯವೂ, ಹೆಚ್ಚಿತು. ವಿಂಧ್ಯಾದ್ರಿಯವರೆಗೆ ಮಾತ್ರ ಹೋಗುತ್ತಿದ್ದ ಅವರ ದೃಷ್ಟಿಯು ಗೌರೀಶಂಕರದವರೆಗೆ ಹಾರಿತು. ಇಹಪರವಿಚಾರಗಳೆಲ್ಲದರಲ್ಲೂ ಅವರ ಮನಸ್ಸಿನಲ್ಲಿ ಊಹಿಸಲಾಗದ ಬದಲಾವಣೆಯುಂಟಾಯಿತು. ಜನರೆಲ್ಲರಲ್ಲೂ ರಾಜನ ಸಾತ್ವಿಕ ಗುಣಗಳೇ ಹೆಚ್ಚುತ್ತಬಂದವು. ರಾಜಕೀಯ, ಆರ್ಥಿಕ ವಿಚಾರಗಳಲ್ಲೂ

ಆರ್ಯರ ತೇಜಸ್ಸು ಇವರ ಮೇಲೆ ಸಂಪೂರ್ಣವಾಗಿ ಬಿತ್ತು. ಪರಸ್ಪರ ರಕ್ತಸಂಬಂಧವನ್ನು ಕಲ್ಪಿಸಿಕೊಂಡ ಮೇಲೆ ದ್ರಾವಿಡ ಸಾಂಘಿಕ ಜೀವನದಲ್ಲಿ ಸಂಪೂರ್ಣ ಆರ್ಯಸಂಸ್ಕೃತಿಯುಂಟಾಯಿತೆಂಬುದರಲ್ಲಿ ಅನುಮಾನವೇ ಇಲ್ಲ. ಇಂದಿನಿಂದ ಇವರೂ ವರ್ಣಾಶ್ರಮಾಚಾರವನ್ನೇ ಅನುಸರಿಸಿದರು. ಯಜ್ಞಯಾಗಾದಿಗಳನ್ನು ಮಾಡಲು ಮೊದಲಿಟ್ಟರು. ಧಾರ್ಮಿಕ ವಿಚಾರದಲ್ಲಂತೂ ಆರ್ಯರನ್ನೇ ಅನುಕರಿಸಿದರು. ಶಾಸ್ತ್ರ, ಸಾಹಿತ್ಯ, ಕಲೆ ಮೊದಲಾದ ಎಲ್ಲಾ ವಿಷಯಗಳಲ್ಲೂ ಆರ್ಯರ ವರ್ಚಸ್ಸು ಇವರ ಮೇಲೆ ಚೆನ್ನಾಗಿ ಬಿತ್ತು. ಒಟ್ಟೇನು ಆರ್ಯರು ದ್ರಾವಿಡರ ಮೇಲೆ ಬೌದ್ಧಿಕ ಜಯವನ್ನು ಪಡೆದು ಆ ಜಯಚಿಹ್ನವನ್ನು ದ್ರಾವಿಡರ ಪ್ರತಿ ಅಂಗದಮೇಲೂ, ಪ್ರತಿ ಚಲನದಮೇಲೂ ಮಾಸದಂತೆ ಮುದ್ರಿಸಿದರು. ಈ ಎರಡು ಮಾನವವರ್ಗಗಳ ಸಮ್ಮೇಳನವು ದಕ್ಷಿಣದೇಶದಲ್ಲಿ ಶಂಕರಾಚಾರ್ಯ, ರಾಮಾನುಜಾಚಾರ್ಯ, ಮಧ್ವಾಚಾರ್ಯ, ಬಸವೇಶ್ವರ, ವಿದ್ಯಾರಣ್ಯ, ಸಾಯಣ, ಭವಭೂತಿ, ವೇದಾಂತದೇಶಿಕ, ನರಸಿಹ್ಮವರ್ಮ, ಪುಲಕೇಶಿ, ವಿಕ್ರಮಾದಿತ್ಯ ಮುಂತಾದ ಪ್ರತಿಭಾಶಾಲಿಗಳ ಸೃಷ್ಟಿಗೆ ಕಾರಣವಾಯಿತು. ಜಗತ್ಪ್ರಖ್ಯಾತಿ ಹೊಂದಿದ ಪಾಂಡ್ಯ, ಚೋಳ, ಪಲ್ಲವ, ಚಾಳುಕ್ಯ, ಗಂಗ ಸಾಮ್ರಾಜ್ಯಗಳು ಹುಟ್ಟಿ ಬೆಳೆದು ಕೀರ್ತಿಶೇಷಗಳಾಗಲು ಕಾರಣಭೂತವಾಯಿತು. ಅನೇಕ ದ್ರಾವಿಡಭಾಷೆಗಳು ಸ್ಫೂರ್ತಿದಾಯಕವಾದ ಸಾಹಿತ್ಯಸಂಪತ್ತಿಯಿಂದ ಬೆಳಗಲು ಅವಕಾಶವಾಯಿತು.

**ಕರ್ಣಾಟಕದ ಮಹತ್ವ**:—ಆರ್ಯರು ದಕ್ಷಿಣದೇಶದಲ್ಲಿ ಮೊದಲು ಕಾಲಿಟ್ಟುದು ಕರ್ಣಾಟಕ ದೇಶದಲ್ಲಿ. ಅನಂತರ ಇವರು ಆಂಧ್ರದೇಶವನ್ನು ಹೊಕ್ಕರು; ಅನಂತರ ಪರ್ಯಾಯದ್ವೀಪವೆಲ್ಲವನ್ನೂ ಆಕ್ರಮಿಸಿದರು. ಕರ್ಣಾಟಕರಿಗೇ ಮೊದಲು ಆರ್ಯರ ಸಂಬಂಧವೂ, ಸಂಪರ್ಕವೂ ಉಂಟಾಯಿತು. ಈ ಮಾತು ಆಂಧ್ರರಿಗೂ ಅನ್ವಯಿಸುವುದು. ಆಂಧ್ರಕರ್ಣಾಟಕರ ವೇಷ ಭಾಷೆ, ನಡೆ ನುಡಿ, ಆಚಾರ ವ್ಯವಹಾರಗಳೆಲ್ಲದರಲ್ಲೂ ಸಂಪೂರ್ಣವಾಗಿ ಆ

ರ್ಯರ ವರ್ಚಸ್ಸು ಬಿತ್ತು. ಈ ಎರಡು ಭಾಷಾಪಂಗಡದವರಲ್ಲಿ ದ್ರಾವಿಡ ವ್ಯಕ್ತಿತ್ವವೇ ಮಾಯವಾಗಿ ನೂತನ ವ್ಯಕ್ತಿತ್ವವುಂಟಾಯಿತು. ಅಂದರೆ ಕೇವಲ ದಕ್ಷಿಣದಲ್ಲಿರುವ ತಮಿಳರಿಗಿಂತಲೂ ವಿಂಧ್ಯಪರ್ವತ ಸಮೀಪವಾಸಿಗಳಾದ ಆಂಧ್ರಕರ್ನಾಟಕರಲ್ಲಿ ಆರ್ಯಸಂಸ್ಕೃತಿಯು ಒಂದು ಪಾಲು ಹೆಚ್ಚೆಂದು ತಿಳಿದಂತಾಯಿತು.

ಕರ್ನಾಟಕವು ಆರ್ಯರ ಮೊಟ್ಟ ಮೊದಲಿನ ವಸತಿಗಳಿಗಾಕರವಾಯಿತು ; ಆರ್ಯದ್ರಾವಿಡ ಸಂಸ್ಕೃತಿಲಹರಿಗಳ ಸಂಗಮಸ್ಥಳವಾಯಿತು ; ಆರ್ಯದ್ರಾವಿಡ ಪ್ರಕೃತಿಗಳ ಮಿಳನದಿಂದ ಹುಟ್ಟಿದ ವ್ಯಕ್ತಿಸೃಷ್ಟಿಗೆ ಕ್ಷೇತ್ರವಾಯಿತು ; ಈ ಕಾರಣಗಳಿಂದ ದಕ್ಷಿಣ ದೇಶದಲ್ಲಿ ಕರ್ನಾಟಕಕ್ಕೆ ಮಹತ್ವಸ್ಥಾನವುಂಟು. ಸಾಂಸ್ಕೃತಿಕ ದೃಷ್ಟಿಯಿಂದ ಆರ್ಯಾವರ್ತಕ್ಕೆ ಪಂಜಾಬು ಹೇಗೋ ದಕ್ಷಿಣಾಪಥಕ್ಕೆ ಕರ್ನಾಟಕವು ಹಾಗೆನ್ನಬೇಕು. ರಾಜಕೀಯದೃಷ್ಟಿಯಿಂದ ಈ ದೇಶವು ದಕ್ಷಿಣ ಹಿಂದೂಸ್ಥಾನದ ಇತಿಹಾಸದಲ್ಲಿ ಅಗ್ರಸ್ಥಾನವನ್ನು ಹೊಂದುವುದರಲ್ಲಿ ಅಡ್ಡಿಯೇ ಇಲ್ಲ. ದಕ್ಷಿಣದೇಶದ ಸಾಮ್ರಾಜ್ಯಕ್ಕಾಗಿ ಕಾದಾಡಿದ ರಾಜಮನೆತನಗಳೆಲ್ಲಕ್ಕೂ ಕರ್ನಾಟಕವೇ ರಂಗಭೂಮಿಯೆನ್ನಬೇಕು. ದಕ್ಷಿಣದೇಶದಲ್ಲಿ ಹುಟ್ಟಿ ಬೆಳೆದು ಆಳಿ ಕೀರ್ತಿಶೇಷರಾದ ಮಹಾಮಹಾ ಚಕ್ರವರ್ತಿಗಳೆಲ್ಲರೂ ಮೊದಲು ಕರ್ನಾಟಕ ಯುದ್ಧಭೂಮಿಗಳಲ್ಲಿ ನಿಂತು ತಮ್ಮ ತಮ್ಮ ಪರಾಕ್ರಮಗಳನ್ನು ವ್ಯಕ್ತಪಡಿಸಿದರೆಂದರೆ ಅದು ಅತಿಶಯೋಕ್ತಿಯಾಗಲಾರದು. ಧಾರ್ಮಿಕ ದೃಷ್ಟಿಯಿಂದಲೂ ಈ ಭಾವವು ಸ್ಥಿರಪಡುವುದು. ಅದ್ವೈತ, ವಿಶಿಷ್ಟಾದ್ವೈತವಾದಿಗಳಾದ ಶಂಕರಾಚಾರ್ಯ ರಾಮಾನುಜಾಚಾರ್ಯರು ಹುಟ್ಟಿದುದು ಈ ನಾಡಲ್ಲವಾದರೂ ಅವರೀರ್ವರ ಧಾರ್ಮಿಕ ರಣಾಂಗಣವು ಈ ನಾಡು; ದ್ವೈತಮತಸ್ಥಾಪಕರಾದ ಮಧ್ವಾಚಾರ್ಯರ, ವೀರಶೈವಮತೋದ್ಧಾರಕರಾದ ಬಸವೇಶ್ವರರ ತೌರೂರೀ ಕರ್ನಾಟಕ ದೇಶವು. ಆರ್ಯದ್ರಾವಿಡ ಸಂಸ್ಕೃತಿಗಳ ಮಿಳನದಿಂದ ಉಂಟಾದ ಸಂಕೀರ್ಣಲಲಿತಕಲಾಜ್ಯೋತಿಗಳು ಬೆಳಗುತ್ತಲಿರುವ ನಾಡೀ ಕರ್ನಾಟಕದೇಶವು.

**ಕರ್ಣಾಟಕವು ಸಂಕ್ಷಿಪ್ತ ಭರತಖಂಡ**:—ಹೆಚ್ಚೇಕೆ. ಪ್ರಾಕೃತಿಕ ಭೇದಪ್ರಭೇದಗಳಿಂದಲೂ; ಪ್ರಕೃತಿ ಸೌಭಾಗ್ಯದ ಚಿತ್ರ ವಿಚಿತ್ರಗಳಿಂದಲೂ; ಪೂರ್ಣಸ್ವತಂತ್ರ ಆರ್ಥಿಕಸಂಪತ್ತಿಯಿಂದಲೂ; ಬಗೆಬಗೆಯ ಜನಗಳ ಮಿಳನದಿಂದ ಉಂಟಾದ ಫಲಪರಿಣಾಮಗಳಿಂದಲೂ; ರಾಜಕೀಯ, ಸಾಂಘಿಕ, ಧಾರ್ಮಿಕ, ವೃದ್ಧಿವಿಕಾಸ ಪ್ರಕಾಶಗಳಿಂದಲೂ; ವಾಸ್ತು, ಶಿಲ್ಪ, ಚಿತ್ರ, ಸಂಗೀತ ಮುಂತಾದ ಲಲಿತಕಲಾವೈಭವದಿಂದಲೂ; ಸಂಸ್ಕೃತ, ಕರ್ಣಾಟಕ ಸಾಹಿತ್ಯಸಂಪತ್ತಿಯಿಂದಲೂ ಕರ್ಣಾಟಕದೇಶವು ಅಖಿಲಭರತಖಂಡದ ಗುಣವಿಶೇಷಾದಿಗಳೆಲ್ಲವನ್ನೂ ಹೋಲಿ ಶೋಭಿಸುತ್ತಿರುವುದರದೆಸೆಯಿಂದ ಈ ಕರ್ಣಾಟಕದೇಶವನ್ನು ಸಂಕೋಚವಿಲ್ಲದೆ ಸಂಕ್ಷಿಪ್ತ ಭರತಖಂಡವೆನ್ನಬಹುದು.

---

# ಮೊದಲನೆಯ ಅಧ್ಯಾಯ

## ೧ ಮೌರ್ಯರು

**ಜೈನಮತವೂ ಚಂದ್ರಗುಪ್ತನೂ**:—ದಕ್ಷಿಣದೇಶದ ಇತಿಹಾಸಯುಗದ ಚರಿತ್ರೆಯು ಈ ದೇಶಕ್ಕೆ ಜೈನಸಂಘದ ಆಗಮನವಾದಂದಿನಿಂದ ಮೊದಲಾಯಿತೆಂದು ಸ್ಥೂಲವಾಗಿ ಹೇಳಬಹುದು. ಕರ್ಣಾಟಕ ದೇಶದ ಕಥನದಲ್ಲಂತೂ ಈ ವಿಷಯವು ಅಮೌಲ್ಯವಾದ ಹಿಡಿಗೊಂಬೆ, ನಡೆದಾಣ, ಮೊದಲನೆಯ ಮೆಟ್ಟಲು. ಅಶೋಕನ ಶಾಸನಗಳೇ ಎರಡನೆಯ ಮೆಟ್ಟಲು. ಇದಾದ ಮೇಲೆ ಗಂಗ ಮತ್ತು ಚಾಲುಕ್ಯರ ಕಾಲಕ್ಕೆ ಬರುವವರೆಗೂ ಸ್ಥಿರವಾದ, ಮನಗಂಡ ಮೆಟ್ಟಲು ಸದ್ಯಕ್ಕೆ ದೊರೆಯುವಂತಿಲ್ಲ. ಮೊದಲೆರಡು ಸೋಪಾನಗಳ ಮೇಲೇರಿ, ಕಾಲೂರಿ, ಕರ್ಣಾಟಕ ಸಾಮ್ರಾಜ್ಯ ಸೌಭಾಗ್ಯವನ್ನು ಕಣ್ಣಾರಕಂಡು, ಮನವನುಣಿಸಿ, ತಣಿಸುವುದೇ ಪ್ರಕೃತ ಪ್ರಯತ್ನದ ಮುಖ್ಯ ಉದ್ದೇಶ್ಯ.

**ಜೈನಸಂಪ್ರದಾಯ**:—ಕಟ್ಟಕಡೆಯ ಶ್ರುತಕೇವಲಿಯಾದ ಭದ್ರಬಾಹುವು ದಿವ್ಯದೃಷ್ಟಿಯಿಂದ ಉತ್ತರ ದೇಶದಲ್ಲಿ ೧೨ ವರ್ಷಗಳ ಕಾಲ ವೀರಕ್ಷಾಮವುಂಟಾಗುವುದೆಂದು ತಿಳಿದು, ಆ ವಿಚಾರವನ್ನು ತನ್ನ ಶಿಷ್ಯಕೋಟಿಗೆ ಹೇಳಿದನು. ಜೈನಸಂಘದವರೆಲ್ಲರೂ ಕ್ಷಾಮಭಯದಿಂದ ಭದ್ರಬಾಹುವನ್ನೇ ಮುಂದಾಳಾಗಿಟ್ಟುಕೊಂಡು ದಕ್ಷಿಣದೇಶಕ್ಕೆ ಬಂದರು. ಆ ಸಮಯದಲ್ಲಿ ಮೌರ್ಯಚಕ್ರವರ್ತಿಯಾಗಿದ್ದ ಚಂದ್ರಗುಪ್ತನು, ಸಮ್ರಾಜತ್ವವನ್ನು ತ್ಯಜಿಸಿ, ವಿರಕ್ತನಾಗಿ, ಭದ್ರಬಾಹುವಿಗೆ ಶಿಷ್ಯನಾಗಿ ದಕ್ಷಿಣದೇಶಕ್ಕೆ ತಾನೂ ಆತನನ್ನು ಹಿಂಬಾಲಿಸಿದನು. ಜಿನಸಂಘದ್ವಿತೀಯರಾದ ಭದ್ರಬಾಹು ಚಂದ್ರಗುಪ್ತರು ಶ್ರವಣಬೆಳ್ಗೊಳವನ್ನು ಸೇರಿದರು. ಆಗ ತನಗೆ ಅವಸಾನಕಾಲವು ಸಮೀಪಿಸಿತೆಂದು ತಿಳಿದು ಭದ್ರಬಾಹುವು ಶಿಷ್ಯರಿಗೆ ಪುನ್ನಾಟರಾಜ್ಯಕ್ಕೆ ಹೋಗಿರೆಂದು ಆಜ್ಞೆಯಿತ್ತು, ತಾನು ಬೆಟ್ಟದಲ್ಲಿ ತನ್ನ ಕಡೆಯ ದಿನಗಳನ್ನು ಕಳೆಯಲು ನಿಶ್ಚಯಿಸಿದನು. ಆಗ ಚಂದ್ರಗುಪ್ತನು ಕಡೆಯ

ವರೆಗೂ ಗುರುವಿನೆಡೆಯಲ್ಲೇ ಇದ್ದು ಶುಶ್ರೂಷೆಯನ್ನು ಮಾಡಬೇಕೆಂಬ ಉತ್ಕಟೇಚ್ಛೆಯಿಂದ ತಾನೂ ಅಲ್ಲಿಯೇ ನಿಂತನು. ಜೈನಸಂಘವು ಮುಂದುವರಿಯಿತು. ಅಲ್ಪಕಾಲದಲ್ಲೇ ಭದ್ರಬಾಹುವು ಕಾಲವಾದನು. ಅನಂತರ ಚಂದ್ರಗುಪ್ತನು ಅಲ್ಲೇ ಗುರುಗಳ ಪಾದಗಳನ್ನು ಪೂಜಿಸುತ್ತಿದ್ದು, ಸಲ್ಲೇಖನವ್ರತವನ್ನಾಚರಿಸಿ, ತಾನೂ ಮೃತನಾದನು.

**ಶ್ರವಣಬೆಳಗೊಳದ ಐತಿಹ್ಯ**:—ಶ್ರವಣಬೆಳಗೊಳದ ಚಿಕ್ಕಬೆಟ್ಟಕ್ಕೆ ಚಂದ್ರಗಿರಿಯೆಂದು ಹೆಸರು. ಚಂದ್ರಗುಪ್ತನು ಅಲ್ಲಿ ವಾಸಮಾಡುತ್ತಿದ್ದು ಕಾಲವಶನಾದುದರಿಂದ ಆ ಬೆಟ್ಟಕ್ಕೆ ಆ ಹೆಸರು ಬಂತು. ಅದೇ ಬೆಟ್ಟದಲ್ಲೇ ಚಂದ್ರಗುಪ್ತ ಬಸದಿಯೊಂದುಂಟು. ಅದನ್ನು ಚಂದ್ರಗುಪ್ತನೇ ಕಟ್ಟಿಸಿದಕಾರಣ ಅದಕ್ಕಾ ಹೆಸರು ಬಂತು. ಅಲ್ಲದೆ ಅಲ್ಲಿ ಭದ್ರಬಾಹು ಗುಹೆ ಎಂಬೊಂದು ಗುಹೆಯುಂಟು. ಅಲ್ಲಿ ಭದ್ರಬಾಹುವಿನ ಪಾದ ಚಿಹ್ನೆಗಳುಂಟು. ಶ್ರುತಕೇವಲಿಯು ಪಾಂಚಭೌತಿಕ ದೇಹವನ್ನು ಪರಿತ್ಯಾಗಮಾಡಿದ ಸ್ಥಳವೇ ಇದು.

**ಶಾಸನಗಳ ದೃಷ್ಟಾಂತ**:—ಇಲ್ಲಿ ಸಿಗುವ ಹಲವು ಶಾಸನಗಳಲ್ಲಿ ಭದ್ರಬಾಹು ಚಂದ್ರಗುಪ್ತರ ವಿಷಯವು ಉಕ್ತವಾಗಿದೆ. ಅಲ್ಲಿರುವ ಶಾಸನಗಳಲ್ಲೆಲ್ಲ ಪುರಾತನ ಶಾಸನ ವೊಂದರಲ್ಲಿ ಭದ್ರಬಾಹುಸ್ವಾಮಿಯು ತನ್ನ ದಿವ್ಯಜ್ಞಾನದಿಂದ ೧೨ ವರ್ಷಗಳ ವೀರಕ್ಷಾಮವು ಉತ್ತರದೇಶದಲ್ಲಿ ಬರುವುದೆಂದು ತಿಳಿದು ಶಿಷ್ಯರೊಂದಿಗೆ ದಕ್ಷಿಣದೇಶಕ್ಕೆ ಬಂದನೆಂದೂ, ಅಲ್ಲಿ ಆತನ ಮರಣಕಾಲವು ಸಮೀಪಿಸಲು, ಸಂಘದಿಂದ ಬೇರಾಗಿ ಆತನಲ್ಲಿ ಸಮಾಧಿಯನ್ನು ಪಡೆದನೆಂದೂ ಹೇಳಿದೆ. ಕ್ರಿ. ಶ. ಸುಮಾರು ೬೫೦ ರಲ್ಲಿ ಬರೆದ ಶಾಸನದಲ್ಲಿ ಭದ್ರಬಾಹು ಚಂದ್ರಗುಪ್ತರೆಂಬಿಬ್ಬರು ಮಹಾಯತಿಗಳಿಂದ ಆ ಪ್ರಾಂತ್ಯವು ಮಹೋನ್ನತವಾಯಿತೆಂದೂ, ಆಗ ಜೈನಮತವು ವೃದ್ಧಿ ಹೊಂದಿತೆಂದೂ ಹೇಳಿದೆ. ಕ್ರಿ.ಶ. ಸು. ೧೧೦೦ ರಲ್ಲಿ ಹುಟ್ಟಿದ ಶಾಸನವೊಂದು ಭದ್ರಬಾಹು ಗುಹೆಯಲ್ಲಿದೆ. ಅದರಿಂದ ಭದ್ರಬಾಹುವಿನ ಪಾದಗಳಿಗೆ

ಪೂಜೆನಡೆಯುತ್ತಿದ್ದಂತೆ ತಿಳಿಯಬರುತ್ತದೆ. ೧೧೨೯ ರ ಶಿಲಾಲೇಖ ವೊಂದರಿಂದ ಚಂದ್ರಗುಪ್ತನು ಭದ್ರಬಾಹುವಿನ ಶಿಷ್ಯನಾಗಿದ್ದು, ಕಡೆಯವರೆಗೂ ಆತನಿಗೆ ಸೇವೆಮಾಡಿದನಾದಕಾರಣ ವನದೇವತೆ ಗಳೆಲ್ಲರೂ ಬಹುಕಾಲವವನಿಗೆ ಶುಶ್ರೂಷೆಮಾಡುತ್ತಿದ್ದರೆಂದು ತಿಳಿಯ ಬರುತ್ತದೆ. ೧೧೬೩ ರಲ್ಲಿ ಬರೆದ ಮತ್ತೊಂದು ಶಾಸನದಿಂದಲೂ ಈ ವಿಚಾರವು ವಿಶದವಾಗುತ್ತದೆ. ೧೫ ನೆಯ ಶತಮಾನದ ಶಾಸನ ದಲ್ಲೂ ಕಡೆಯ ಶ್ರುತಕೇವಲಿಯಾದ ಭದ್ರಬಾಹು, ಆತನ ಶಿಷ್ಯನಾದ ಚಂದ್ರಗುಪ್ತರ ಮಹಿಮೆಯೂ, ಘೋರತಪಸ್ಸೂ, ವರ್ಣಿತವಾಗಿದೆ. ಶ್ರವಣಬೆಳಗೊಳದ ಶಾಸನಗಳ ಮಾತಂತಿರಲಿ. ಶ್ರೀರಂಗಪಟ್ಟಣದ ಬಳಿ ಕಾವೇರಿಯ ಉತ್ತರದಡದಲ್ಲಿ ಸು. ಕ್ರಿ. ಶ. ೯೦೦ ರ ಶಾಸನಗಳಿ ರಡುಂಟು. ಭದ್ರಬಾಹು ಚಂದಗುಪ್ತರ ಪಾದಸ್ಪರ್ಶದಿಂದ ಚಂದ್ರ ಗಿರಿಯು ಪವಿತ್ರವಾಯಿತೆಂದು ಈ ಶಾಸನಗಳಲ್ಲಿ ಹೇಳಿದೆ.

**ಸಾಹಿತ್ಯದ ಸಾಕ್ಷಿ** :—ಕ್ರಿ.ಶ. ೧೦ ನೆಯ ಶತಮಾನದ ಬೃಹ ತ್ಕಥಾಕೋಶದಲ್ಲಿ ಹರಿಸೇನನು—ಚಂದ್ರಗುಪ್ತನು ಭದ್ರಬಾಹುವಿನ ಶಿಷ್ಯನು ೧೨ ವರ್ಷಗಳ ಕ್ಷಾಮಬರುವುದೆಂದರಿತು ಭದ್ರಬಾಹುವು ಚಂದ್ರಗುಪ್ತನನ್ನು ಜೈನಸಂಘಕ್ಕೆ ನಾಯಕನನ್ನಾಗಿ ಮಾಡಿ ದಕ್ಷಿಣ ದೇಶದಲ್ಲಿರುವ ಪುನ್ನಟರಾಜ್ಯಕ್ಕೆ ಕಳುಹಿಸಿದನು—ಎಂಬದಾಗಿ ಹೇಳಿ ರುವನು. ೧೫ ನೆಯ ಶತಮಾನದ ಸುಮಾರಿನಲ್ಲಿದ್ದ ರತ್ನನಂದಿಯು ಭದ್ರಬಾಹು ಚರಿತದಲ್ಲಿ ಭದ್ರಬಾಹುವು ೧೨ ವರ್ಷದ ಕ್ಷಾಮವನ್ನರಿತು ಚಂದ್ರಗುಪ್ತ ದ್ವಿತೀಯನಾಗಿ ೧೨,೦೦೦ ಜೈನ ಶಿಷ್ಯರೊಂದಿಗೆ, ಕರ್ಣಾಟಕದೇಶಕ್ಕೆ ಹೊರಟನೆಂದೂ, ಅಲ್ಲಿ ಅವನ ಕಡೆಗಾಲವು ಸಮೀಪಿಸಲು, ಸಂಘವನ್ನು ಮುಂದಕ್ಕೆ ಪ್ರಯಾಣಮಾಡುವಂತಾ ಜ್ಞಾಪಿಸಿ, ಚಂದ್ರಗಿರಿಯಲ್ಲಿ ನಿಂತು, ಚಂದ್ರಗುಪ್ತನಿಂದ ಸೇವಿತನಾಗಿ, ಸಲ್ಲೇಖನ ವ್ರತದಿಂದ ಕಾಲವಾದನೆಂದೂ ಹೇಳಿರುವನು. ೧೭ ನೆಯ ಶತಮಾನದ ಚಿದಾನಂದಕವಿಯು ಶ್ರುತಕೇವಲಿ ಭದ್ರಬಾಹುವು ಚಿಕ್ಕ ಬೆಟ್ಟದಲ್ಲಿ ವಾಸಮಾಡುತಿದ್ದನೆಂದೂ, ಒಂದು ಹುಲಿಯು ಬಂದವ ನನ್ನು ಕೊಂದಿತೆಂದೂ, ಈಗಲೂ ಆತನ ಪಾದಚಿಹ್ನೆಗಳಲ್ಲುಂಟೆಂದೂ,

ಚಂದ್ರಗುಪ್ತನು ಅಲ್ಲಿಗೆ ಯಾತ್ರಾರ್ಥಿಯಾಗಿ ಬಂದಿದ್ದನೆಂದೂ, ತನ್ನ ಮುನಿವಂಶಾಭ್ಯುದಯದಲ್ಲಿ ಬರೆದಿರುವನು. ೧೯ ನೆಯ ಶತಮಾನದಲ್ಲಿ ಬರೆದ ರಾಜಾವಳೀಕಥೆಯಲ್ಲೂ ಕ್ಷಾಮ, ಸಂಘದೊಂದಿಗೆ ಭದ್ರಬಾಹು ಚಂದ್ರಗುಪ್ತರು ದಕ್ಷಿಣದೇಶಕ್ಕೆ ಬಂದುದೂ, ಶ್ರವಣಬೆಳಗೊಳದಲ್ಲಿ ಭದ್ರಬಾಹು ಚಂದ್ರಗುಪ್ತರು ನಿಂತುದೂ, ಸಂಘವು ಮುಂದುವರಿದುದೂ, ಭದ್ರಬಾಹು ಚಂದ್ರಗುಪ್ತರ ಮರಣ ಇವೆಲ್ಲವೂ ದೇವಚಂದ್ರನಿಂದ ವಿಶದವಾಗಿ ವರ್ಣಿಸಲ್ಪಟ್ಟಿವೆ.

**ನಿರ್ಣಯ** :—ಜೈನಪಟ್ಟಾವಳಿಗಳ ಪರೀಕ್ಷಣದಿಂದಲೂ, ಶ್ವೇತಾಂಬರ ದಿಗಂಬರ ಶಾಖೆಗಳ ವೃತ್ತಾಂತಗಳಿಂದಲೂ, ಶ್ರುತಕೇವಲಿ ಭದ್ರಬಾಹುವಿನ ನಾಯಕತ್ವದಲ್ಲಿ ಜೈನಸಂಘವು ದಕ್ಷಿಣದೇಶಕ್ಕೆ ಪ್ರಯಾಣಮಾಡಿತೆಂಬುದು ವ್ಯಕ್ತವಾಗುತ್ತದೆ. ಚಂದ್ರಗುಪ್ತಮೌರ್ಯನು ಜೈನನು. ಚಂದ್ರಗುಪ್ತನೂ, ಶ್ರುತಕೇವಲಿಯಾದ ಭದ್ರಬಾಹುವೂ ಸಮಕಾಲಿಕರು. ಕ್ರಿ. ಪೂ. ಸು. ೩೨೨ ರಲ್ಲಿ ಅಂದರೆ ಬಹು ಚಿಕ್ಕವಯಸ್ಸಿನಲ್ಲೇ ಪಟ್ಟಕ್ಕೆ ಬಂದ ಚಂದ್ರಗುಪ್ತನ ಆಳ್ವಿಕೆಯು ಕ್ರಿ.ಪೂ. ೨೯೮ ರಲ್ಲಿ ಕೊನೆಗಂಡಿತು. ರಾಜ್ಯಭಾರದಿಂದಿವನು ಮುಕ್ತನಾದಾಗ ಇವನಿಗೆ ೫೦ ವರ್ಷಗಳ ಮೇಲೆ ಆಗಿರಲಾರದು. ರಣರಂಗದಲ್ಲಾಗಲಿ, ರೋಗದಿಂದಾಗಲಿ ಮೃತ್ಯುವಶನಾದನೆಂದು ಊಹಿಸೋಣವೆಂದರೆ ಅವಕಾಶವಿಲ್ಲ. ಜೈನ ಸಂಪ್ರದಾಯ, ಶ್ರವಣಬೆಳ್ಗೊಳದ ಐತಿಹ್ಯ, ಶಾಸನಗಳ ಬಲ, ಸಾಹಿತ್ಯದ ಹೇಳಿಕೆ ಮೊದಲಾದ ಬಗೆಬಗೆಯ ಸಾಧನಸಾಮಗ್ರಿಗಳಲ್ಲಿ ಸಂಪೂರ್ಣವಾದ, ಅವಿವಾದಾಂಶವಾದ, ಸಮರ್ಪಕವಾದ, ಇತಿಹಾಸಾಂಶಗಳು ಹೊರಬೀಳುವುವೆಂದು ಹೇಳಲಾಗದು. ಆದರೆ ಈ ಸಾಧನ ಸಂಪತ್ತಿಯೊಂದಿಗೆ ಶ್ವೇತಾಂಬರ ದಿಗಂಬರ ಶಾಖಾ ಸಮಾಚಾರ, ಭದ್ರಬಾಹು ವೃತ್ತಾಂತ, ಚಂದ್ರಗುಪ್ತನ ಚರಿತ್ರೆ, ಮುಂತಾದ ಗೊತ್ತಾದ ಅಂಶಗಳನ್ನು ಜೋಡಿಸಿ ಓದಿದ್ದೇ ಆದರೆ, ಮುಂದೆ ಕಂಡುಹಿಡಿಯಬಹುದಾದ ಐತಿಹಾಸಿಕ ಸಾಧನ ಸಾಮಗ್ರಿಗಳಿಂದ ಜೈನಸಂಪ್ರದಾಯ ಸಿದ್ಧವಾಗಿ ಬಂದ ಐತಿಹ್ಯವು ನಿರಾಧಾರವಾದುದೆಂದು ಚರ್ಚಿಸಿ, ಸಿದ್ಧಾಂತಪಡಿಸುವವ

ರೆಗೂ ಈ ಐತಿಹ್ಯ ವಿಚಾರವು ಸುಳ್ಳೆಂದೂ, ಚರಿತ್ರಾರ್ಹವಾದುದಲ್ಲ ವೆಂದೂ ಅನುಮಾನಿಸಲು ಕಾರಣವಿಲ್ಲ.

**ಬೌದ್ಧಮತವೂ ಅಶೋಕನೂ**:—ನಿಜಾಂ ಸರ್ಕಾರಕ್ಕೆ ಸೇರಿದ ಮಾಸಕಿ ಎಂಬಲ್ಲಿ ಅಶೋಕ ಚಕ್ರವರ್ತಿಯ ಶಾಸನವು ಸಿಕ್ಕಿದೆ. ಚಿತ್ರದುರ್ಗದ ಜಿಲ್ಲೆಗೆ ಸೇರಿದ ಸಿದ್ದಾಪುರದ ಬಳಿ ಬೇರೆ ಅಶೋಕನ ಶಾಸನಗಳು ದೊರತಿವೆ. ಮಾಸಕಿಯೂ ಸಿದ್ದಾಪುರವೂ ಕರ್ಣಾಟಕ ದೇಶದಲ್ಲಿದೆಯೆಂಬುದರಲ್ಲಿ ಅನುಮಾನವಿಲ್ಲ. ಆಂದರೆ ಅಶೋಕನ ಕಾಲದಲ್ಲಿ ಮೌರ್ಯಸಾಮ್ರಾಜ್ಯವು ಮೈಸೂರು ಸಂಸ್ಥಾನದ ಉತ್ತರ ಭಾಗದವರೆಗೂ ವಿಸ್ತರಿಸಿತ್ತೆಂದು ಕಂಡು ಬರುತ್ತವೆ. ಅಶೋಕನು ಮೊದಲು ಜೈನಮತಾವಲಂಬಿಯಾಗಿದ್ದು ಅನಂತರ ಬೌದ್ಧಮತವನ್ನು ಸ್ವೀಕರಿಸಿ, ಆ ಮತ ಪ್ರಕಾಶ ವಿಕಾಸಕ್ಕೆ ತನ್ನ ಜೀವನವನ್ನೇ ಧಾರೆಯೆ ರೆದನೆಂಬ ವಿಚಾರವೆಲ್ಲರಿಗೂ ತಿಳಿದುದೆ. ಮಾಸಕಿ ಮತ್ತು ಸಿದ್ಧಾಪುರದ ಶಾಸನಗಳು ಧರ್ಮಶಾಸನಗಳೇ ವಿನಾ ರಾಜಶಾಸನಗಳಲ್ಲ. ಧರ್ಮಸಂಸ್ಥಾಪನವೇ ಅವನ ಶಾಸನಗಳ ಮುಖ್ಯ ಉದ್ದೇಶ ; ಜಗದ್ಧಿತ ನೀತಿತತ್ವಪ್ರಚಾರವೇ ಅವನ ಜೀವನ ಧ್ಯೇಯ.

**ಕರ್ಣಾಟಕದೇಶವೂ ಬೌದ್ಧಮತ ಪ್ರಚಾರವೂ**:—ದಕ್ಷಿಣ ದೇಶದಲ್ಲಿ ಬೌದ್ಧ ಧರ್ಮ ಪ್ರಚಾರಕ್ಕಾಗಿ ಅಶೋಕನು ಬಹಳ ಪ್ರಯತ್ನಮಾಡಿದನೆಂಬುದು ಅವನ ಶಾಸನಗಳಿಂದಲೇ ವ್ಯಕ್ತವಾಗುತ್ತದೆ. ಅಲ್ಲದೆ ಅವನ ಕಾಲದಲ್ಲಿ ಬನವಸಿ, ಮಹಿಷಮಂಡಲ, ಕಾಂಚೀಪುರ, ಸಿಂಹಳ ಮುಂತಾದ ಕಡೆಗಳಿಗೆ ಬೌದ್ಧಮತ ಪ್ರಚಾರಕರನ್ನು ಕಳುಹಿಸಿದನೆಂದು ತಿಳಿದು ಬಂದಿದೆ. ಪಶ್ಚಿಮ ಸಮುದ್ರತೀರ, ಧಾನ್ಯಕಟಕ, ಕಾಂಚಿ, ಮೊದಲಾದೆಡೆಗಳಲ್ಲಿ ದೊರೆವ ಸ್ತೂಪಾರಾಮಚಿಹ್ನೆಗಳಿಂದಲೂ, ಪಾಂಡ್ಯದೇಶದ (ಗುಹೆಗಳು) ಕಲ್ಮನೆಗಳಿಂದಲೂ, ದಕ್ಷಿಣದೇಶದಲ್ಲಿ ಬೌದ್ಧಮತ ಪ್ರಚಾರಕಾರ್ಯವು ಸಮರ್ಪಕವಾಗಿಯೇ ನಡೆಯಿತೆಂದು ಹೇಳಬಹುದು. ವಿದೇಶೀಯ ಪ್ರವಾಸಿಗಳೂ ಈ ಅಭಿಪ್ರಾಯಕ್ಕೆ ಬಲಕೊಡುವರು. "ಮಹಿಷಮಂಡಲಕ್ಕೂ ಬನವಸಿಗೂ

ತನ್ನ ಧರ್ಮಪ್ರಚಾರಕರನ್ನು ಕಳುಹಿಸಿದ್ದಾಗ್ಯೂ ಅಶೋಕ ಮಹಾರಾಜನು ಬೌದ್ಧಮತವನ್ನಿಲ್ಲಿ (ಕರ್ಣಾಟಕ ದೇಶದಲ್ಲಿ) ಸ್ಥಿರವಾಗಿ ನೆಲೆಗೊಳಿಸಿದಂತೆ ಕಾಣಬರುವುದಿಲ್ಲ. ಬಹುಶಃ ಆ ಕಾಲದಲ್ಲಿ ಜೈನರಿಲ್ಲಿ ಪ್ರಬಲರಾಗಿದ್ದು ಬೌದ್ಧಮತಕ್ಕವಕಾಶ ಕೊಡಲಿಲ್ಲವೆಂದೆಣಿಸೋಣವೆ? ಭವಿಷ್ಯದ್ವಿಮರ್ಶೆಗಳಿಂದ ಇದು ಸಿದ್ಧಾಂತವಾಗಬೇಕು."

**ಮೌರ್ಯರೂ ಕರ್ಣಾಟಕವೂ** :—ಮೌರ್ಯಸಾಮ್ರಾಜ್ಯವು ಕರ್ಣಾಟಕದೇಶದಲ್ಲಿ ಶುದ್ಧ ರಾಜಕೀಯ ದೃಷ್ಟಿಯಿಂದ ಬೇರೂರಿ ನಿಲ್ಲಲಿಲ್ಲವಾದರೂ ಆ ಸಾಮ್ರಾಜ್ಯವ್ಯಕ್ತಿಯ ವರ್ಚಸ್ಸು ಈ ದೇಶದ ಮೇಲೆ ಬಿತ್ತೆಂಬುದರಲ್ಲಿ ಸಂಶಯವಿಲ್ಲ. ಇದಕ್ಕೆ ಮೌರ್ಯಸಾಮ್ರಾಜ್ಯದ ಕೀರ್ತಿಗಂಬಗಳಂತಿರುವ ಅಶೋಕನ ಶಾಸನಗಳೇ ಸಾಕ್ಷಿ. ಅಶೋಕನ ಶಾಸನಗಳಿಂದ ಅವನು ಜಯಿಸಿದ ದೇಶಗಳನ್ನೂ, ನೆರೆಹೊರೆಯ ರಾಜ್ಯಗಳನ್ನೂ ವಿಂಗಡಿಸಬಹುದು. ಚೋಳ, ಪಾಂಡ್ಯ, ಕೇರಳ, ಸತಿಯಪುತ್ರ ಮುಂತಾದುವು ಸ್ನೇಹಭಾವದಿಂದಿದ್ದ ನೆರೆಹೊರೆಯ ರಾಜ್ಯಗಳು. ಪಿತಿನಿಕ, ಆಂಧ್ರ, ಪುಳಿಂದ, ರಾಷ್ಟ್ರಿಕ, ಅಪರಾಂತ ಮೊದಲಾದುವು ಅವನು ಜಯಿಸಿದ ರಾಜ್ಯಗಳು.

ಸುಮಾರು ಕ್ರಿ. ಶ. ೬ ನೆಯ ಶತಮಾನದಲ್ಲಿ ಮೌರ್ಯ ವಂಶೀಯರು ಕೊಂಕಣದಲ್ಲಿ ಆಳುತ್ತಿದ್ದರೆಂದೂ, ಅವರನ್ನು ಬಹು ಸಾಹಸದಿಂದ ಚಾಳುಕ್ಯ ಸಮ್ರಾಜನಾದ ಮೊದಲನೆಯ ಕೀರ್ತಿವರ್ಮನೂ, ಎರಡನೆಯ ಪುಲಕೇಶಿಯೂ ಸೋಲಿಸಿದರೆಂದೂ, ತಿಳಿದುಬರುತ್ತದೆ. ಕ್ರಿ. ಶ. ೧೨ ನೆಯ ಶತಮಾನದ ಹಲವು ಶಾಸನಗಳಿಂದಲೂ ನವನಂದರೂ, ಗುಪ್ತರೂ, ಅನಂತರ ಮೌರ್ಯಚಕ್ರವರ್ತಿಗಳೂ ಕುಂತಳ ದೇಶವನ್ನು ಆಳಿದರೆಂದೂ, ಅನಂತರ ರಾಷ್ಟ್ರಕೂಟರೂ, ಚಾಳುಕ್ಯರೂ, ಕಳಚುರ್ಯರೂ, ಹೊಯ್ಸಳರೂ ರಾಜ್ಯಭಾರ ಮಾಡಿದರೆಂದೂ ಸ್ಪಷ್ಟವಾಗಿ ತಿಳಿದು ಬರುತ್ತದೆ. ಇದೇ ಕಾಲದ ಕೆಲವು ತಮಿಳು ಶಾಸನಗಳಲ್ಲಿ ದಕ್ಷಿಣ ಆರ್ಕಾಟು ಮತ್ತು ಸೇಲಂ ಜಿಲ್ಲೆಗಳಿಗೆ ಮಗಧ ಮಂಡಲವೆಂಬ ಹೆಸರಿತ್ತೆಂದು ಕಾಣಬರುತ್ತದೆ. ಈ ಕಾರಣಗಳಿಂದ

ಮೌರ್ಯರಿಗೂ ದಕ್ಷಿಣ ದೇಶಕ್ಕೂ ಸಂಬಂಧವಿತ್ತೆಂಬುದು ಸ್ಪಷ್ಟವಾಗುತ್ತದೆ. ಈ ಸಾಧನ ಸಂಪತ್ತಿಯ ಬಲದಿಂದ ಮೌರ್ಯಸಾಮ್ರಾಜ್ಯವು ದಕ್ಷಿಣದೇಶದಲ್ಲಿ ಹರಡಿ ಸ್ಥಿರಪಟ್ಟಿತ್ತೆಂದಾಗಲಿ, ಆ ಮನೆತನದರಸರು ಪರಂಪರೆಯಾಗಿ ಇಲ್ಲಿ ಆಳಿದರೆಂದಾಗಲಿ ಭಾವಿಸಲಾಗದು. ಆದರೆ ಪಿತಿನಿಕ, ಆಂಧ್ರ, ಪುಳಿಂದ ರಾಜ್ಯಗಳನ್ನು ಅಶೋಕನು ಗೆದ್ದನೆಂದು ತಿಳಿದು ಬಂದಿರುವುದರಿಂದಲೂ, ಮಹಿಸೂರಿನಲ್ಲಿಯೂ, ನಿಜಾಂ ಕರ್ಣಾಟಕದಲ್ಲಿಯೂ ಅಶೋಕನ ಶಾಸನಗಳು ಸಿಕ್ಕಿರುವುದರಿಂದಲೂ, ಮೌರ್ಯಸಾಮ್ರಾಜ್ಯವು ಚಿತ್ರದುರ್ಗದ ಜಿಲ್ಲೆಯವರೆಗೂ ಹಬ್ಬಿತ್ತೆಂದು ಧೈರ್ಯವಾಗಿ ಹೇಳಬಹುದು.

---

## ೨ ಶಾತವಾಹನರು

ಕ್ರಿ. ಪೂ. ೨೨೭ ಸುಮಾರಿಗೆ ಮೌರ್ಯ ಅಥವಾ ಮಗಧಸಾಮ್ರಾಜ್ಯವು ಕೊನೆಗಂಡಿತು. ಅಶೋಕನ ಅನಂತರ ಅವನ ಸಾಮಂತರನೇಕರು ಸ್ವತಂತ್ರರಾದರು. ಅವರಲ್ಲಿ ಮುಖ್ಯರಾದ ಶಾತವಾಹನರು ಸ್ವತಂತ್ರರಾದುದು ಮಾತ್ರವೇ ಅಲ್ಲದೆ ಮಗಧಸಾಮ್ರಾಜ್ಯದ ಅನೇಕ ಭಾಗಗಳನ್ನು ಆಕ್ರಮಿಸಿ ತಮ್ಮಾಳ್ವಿಕೆಯನ್ನು ಬಲಪಡಿಸಿಕೊಂಡರು. ಇವರಿಗೆ ಆಂಧ್ರಭೃತ್ಯರೆಂದೂ ಹೆಸರುಂಟು. ಮುಖ್ಯವಾಗಿ ಈ ಮನೆತನದ ೩೦ ಮಂದಿ ಅರಸರು ಆಂಧ್ರಕರ್ಣಾಟಕದೇಶ (ಕೃಷ್ಣಾಗೋದಾವರಿಗಳ ಮಧ್ಯದೇಶ) ವನ್ನು ೪೦೦-೪೫೦ ವರ್ಷಗಳಕಾಲ ಪರಿಪಾಲನೆ ಮಾಡಿದರು. ಬೇರೆಬೇರೆ ಕಾಲಗಳಲ್ಲಿ ನಾಸಿಕ್, ಪೈಠಣ, ಕೋಟಿಲ, ಧಾನ್ಯಕಟಕಗಳು ಅವರ ರಾಜಧಾನಿಗಳಾಗಿದ್ದವು.

**ಶಾತವಾಹನರು ಯಾರು**:—ಇವರು ದ್ರಾವಿಡ ಪಂಗಡಕ್ಕೆ ಸೇರಿದವರೆಂಬುದರಲ್ಲಿ ಮತಭೇದವಿಲ್ಲ. ಆದರೆ ಅನೇಕ ಚರಿತ್ರಕಾರರು ಶಾತವಾಹನರನ್ನು ಆಂಧ್ರರೆಂದು ಕರೆದು, ಈಗಿನ ಆಂಧ್ರದೇಶನಿವಾ

ಸಿಗಳು ಇವರ ಸಂಬಂಧಿಗಳೆಂದು ಊಹಿಸಿರುವರು. ಆದರೆ ಈ ಊಹೆಗೆ ಸಾಕಾದಷ್ಟು ಆಧಾರಗಳಿಲ್ಲ. ಶಾಸನಗಳಲ್ಲಿ ಇವರನ್ನು ಶಾತವಾಹನರೆಂದು ಕರೆದಿರುವರೇ ವಿನಾ ಆಂಧ್ರರೆಂದು ಕರೆದಿಲ್ಲ. ಹಲವು ಪುರಾಣಗಳಲ್ಲಿ ಆಂಧ್ರರೆಂದೂ, ಮತ್ತೆ ಹಲವು ಪುರಾಣಗಳಲ್ಲಿ ಆಂಧ್ರಭೃತ್ಯರೆಂದೂ ಶಾತವಾಹನ ಮನೆತನದರಸರನ್ನು ಸಂಬೋಧಿಸಿರುವಂತೆ ಕಾಣಬರುತ್ತದೆ. ವಿದೇಶೀಯ ಪ್ರವಾಸ ಲೇಖಕರು ಶಾತವಾಹನರ ವಿಚಾರ ಹೇಳುವಾಗ ಆಂಧ್ರರ ಹೆಸರನ್ನಾಗಲಿ, ಆಂಧ್ರರ ಸಮಾಚಾರವನ್ನು ತಿಳಿಸುವಾಗ ಶಾತವಾಹನರ ಹೆಸರನ್ನಾಗಲಿ ಎತ್ತಿಲ್ಲ. ಆಧುನಿಕ ಚರಿತ್ರಕಾರರಲ್ಲಿ ಕೆಲವರು ಈ ಮನೆತನದವರನ್ನು ಶಾತವಾಹನರೆಂದೂ, ಕೆಲವರು ಆಂಧ್ರರೆಂದೂ, ಮತ್ತೆ ಕೆಲವರು ಆಂಧ್ರಭೃತ್ಯರೆಂದೂ ಹೆಸರಿಟ್ಟು ಕರೆಯುವರು.

ಇದಂತಿರಲಿ; ಈಗ ದೊರೆತಿರುವ ಈ ಮನೆತನದ ಶಾಸನಗಳು ನಾಣ್ಯಗಳು ಇವುಗಳಲ್ಲಿ ಕರ್ಣಾಟಕದಲ್ಲಿ ದೊರೆತಿರುವುವೇ ಹೆಚ್ಚು; ಶಾತವಾಹನ ಅರಸರನೇಕರಿಗೆ 'ಕುಂತಲಸ್ವಾಮಿ' ಎಂಬ ಹೆಸರಿತ್ತು. ಇಷ್ಟೇ ಅಲ್ಲದೆ ಬಳ್ಳಾರಿಜಿಲ್ಲೆಯ ಹಿರೇಹಡಗಲಿ ಮತ್ತು ಮ್ಯಾಕದೊಣಿ ಶಾಸನಗಳಿಂದ ಆ ಪ್ರಾಂತ್ಯಕ್ಕೆ ಶಾತವಾಹನನಾಡೆಂಬ (ಶಾತವಾಹನೀಹರ) ಹೆಸರಿತ್ತೆಂದು ವಿಶದವಾಗುತ್ತದೆ. ಆಂಧ್ರಭೃತ್ಯರೆಂಬ ಹೆಸರಿನಿಂದಲೇ ಶಾತವಾಹನರು ಆಂಧ್ರರಿಂದ ಅನ್ಯರೆಂಬುದು ಸ್ಪಷ್ಟವಾಗುತ್ತದೆ. ಒಂದುಪಕ್ಷ ಆಂಧ್ರರು ತೆಲುಗನ್ನೇ ಮಾತನಾಡುತ್ತಿದ್ದರೂ ಆಂಧ್ರಭೃತ್ಯರು ತೆಲುಗರೇ ಆಗಿರಬೇಕೆಂಬುದು ಯಾವ ನ್ಯಾಯ? ಈ ಕಾರಣಗಳಿಂದ ಶಾತವಾಹನರು ಕರ್ಣಾಟಕರೆಂದೂ, ಈಗಿನ ಬಳ್ಳಾರಿ ಜಿಲ್ಲಾ ಪ್ರಾಂತವು ಅವರ ತಾಯ್ನಾಡಾಗಿತ್ತೆಂದೂ ತೋರಿಬರುತ್ತದೆ.

**ಶಾತವಾಹನರ ರಾಜ್ಯವಿಸ್ತಾರ:**—ಮಗಧರಾಜ್ಯ ನಾಶನಾನಂತರ ಆ ರಾಜ್ಯದ ದಕ್ಷಿಣಭಾಗಕ್ಕೆಲ್ಲ ಶಾತವಾಹನರೇ ಒಡೆಯರಾದರು. ಪೂರ್ವ-ಪಶ್ಚಿಮ ಸಮುದ್ರಗಳ ಮಧ್ಯದೇಶವೆಲ್ಲವೂ ಇವರ ವಶವಾಯಿತು. ತುಂಗಭದ್ರೆಯೇ ಇವರ ರಾಜ್ಯದ ದಕ್ಷಿಣಮೇರೆಯೆಂದು

ಹೇಳಬಹುದು. ಶಿವಮೊಗ್ಗೆ ಜಿಲ್ಲೆಯ ಸೊರಬದ ಸೇರೆಯಾದ ಬನವಸಿ ಯಲ್ಲಿ ಹಾರೀತಿಯ ಮಗನಾದ ಶಾತಕರಣಿಯ ಶಾಸನವೊಂದು ಸಿಕ್ಕಿ ರುವುದು. ಷಿಕಾರಿಪುರದ ಮಳವಳ್ಳಿಯಲ್ಲಿ ಮತ್ತೊಂದು ಶಾಸನ ವುಂಟು. ತಾಲಗುಂದದ ಕದಂಬ ಶಾಸನದಲ್ಲಿ ಶಾತಕರಣಿಯೊಬ್ಬನ ಉಲ್ಲೇಖವುಂಟು. ಇಷ್ಟೇ ಅಲ್ಲದೆ ಚಿತ್ರದುರ್ಗದ ಬಳಿಯ ಚಂದ್ರಾ ವಳಿಯೆಂಬ ಊರ ಬಳಿ ಪುಳುಮಾಯಿಯ ನಾಣ್ಯವೊಂದು ಸಿಕ್ಕಿರು ವುದು. ಈ ಕಾರಣಗಳಿಂದ ಶಾತವಾಹನ ಸಾಮ್ರಾಜ್ಯವು ಈಗಿನ ಮಹಿಸೂರು ದೇಶದ ಉತ್ತರ ಸರಹದ್ದನ್ನು ಮೀರಿತ್ತೆಂಬ ಅಂಶವು ನಿರ್ವಿವಾದವಾಗುತ್ತದೆ.

**ಅರಸರು** :—ಸಿಮುಕನೆಂಬುವನೇ ಈ ಮನೆತನಕ್ಕೆ ಮೂಲ ಪುರುಷನು. ಇವನು ಕ್ರಿ. ಪೂ. ಸುಮಾರು ೨೪೦ ರಲ್ಲಿ ಆಳುತ್ತಿ ದ್ದನು. ೨ ನೆಯ ಅರಸಾದ ಕೃಷ್ಣನ ಕಾಲಕ್ಕೆ ಈ ರಾಜ್ಯವು ಪಶ್ಚಿಮಸಮುದ್ರದಿಂದ ಪೂರ್ವಸಮುದ್ರದವರೆಗೂ ಹಬ್ಬಿತ್ತು. ಕಳಿಂಗರಾಜ್ಯದ ಖಾರವೇಲನ ಸಮಕಾಲಿಕನೇ ಮೂರನೆಯವನಾದ ಶ್ರೀಶಾತಕರಣಿಯು. ಇಲ್ಲಿಂದ ಸುಮಾರು ಕ್ರಿ. ಪೂ. ೨೭ ಕ್ಕೆ ಬರು ವವರಿಗೂ ಅವರ ಚರಿತ್ರೆಯು ಎಳ್ಳಷ್ಟೂ ತಿಳಿಯುವಂತಿಲ್ಲ. ಮಗಧ ಸಾಮ್ರಾಜ್ಯ ಪತನಾನಂತರ ಸುಂಗವಂಶಜರೂ ಅವರ ಅನಂತರ ಕಣ್ವಮನೆತನದವರೂ ಆಳಿದರು. ಕಣ್ವರ ಕಡೆಯವನಾದ ಸುಶ ರ್ಮನನ್ನು ಶಾತಕರಣಿಯೊಬ್ಬನು ಕೊಂದನು. ಈ ಶಾತಕರಣಿ ಯು ಶಾತವಾಹನ ರಾಜರಲ್ಲಿ ೧೩ ನೆಯವನು. ಅನಂತರ ಹಾಲರಾ ಜನೇ ಪ್ರಸಿದ್ಧನು. ಇವನು ಪ್ರಾಕೃತ ಭಾಷೆಯಲ್ಲಿ ಸಪ್ತಶತಿಯೆಂಬ ಗ್ರಂಥವನ್ನು ರಚಿಸಿದನು. ಅನೇಕ ಕವಿಗಳಿಗವನು ಆಶ್ರಯನಾಗಿ ದ್ದನು. ಕ್ರಿ. ಶ. ಸು. ೧೦೮-೧೩೯ ರಲ್ಲಿ ರಾಜ್ಯಾಭಿಷಿಕ್ತನಾದ ಗೌತ ಮೀಪುತ್ರ ಶಾತಕರಣಿಯೇ ಶಾತವಾಹನರಲ್ಲಿ ಮಹಾ ಪ್ರಖ್ಯಾತನು. ಇವನು ಈ ಮನೆತನದ ೨೩ ನೆಯ ಅರಸನು. ಶಾತವಾಹನರ ವೃದ್ಧಿಗೆ ಅಡ್ಡಿಯಾಗಿ ಶಕರು, ಕ್ಷತ್ರಪರು, ತಲೆಯೆತ್ತಿದ್ದರು. ಗೌತಮೀ ಪುತ್ರನು ಕ್ರಿ. ಶ. ಸು. ೧೨೪ ರಲ್ಲಿ ಕ್ಷಹರಾಟರನ್ನು ಮಟ್ಟಹಾಕಿ,

ರಾಜಾಧಿರಾಜನೆನಿಸಿ ಕೀರ್ತಿವಂತನಾದನು. ಇವನು ಬೌದ್ಧ ಬ್ರಾಹ್ಮಣಮತಗಳೆರಡಕ್ಕೂ ಪ್ರೋತ್ಸಾಹವನ್ನು ಕೊಟ್ಟನು. ಕ್ರಿ. ಶ. ೧೩೫ ರಲ್ಲಿ ಗೌತಮೀಪುತ್ರನ ಮಗನಾದ ವಾಸಿಷ್ಠೀಪುತ್ರ ಪುಳುಮಾಯಿಯು ಪಟ್ಟಕ್ಕೆ ಬಂದನು. ಇವನ ಕಾಲದಲ್ಲಿ ಕ್ಷಹರಾಟರಿಗೂ, ಶಾತವಾಹನರಿಗೂ, ರಕ್ತಸಂಬಂಧವುಂಟಾಯಿತು. ೩೦ ವರ್ಷಗಳ ಕಾಲ ರಾಜ್ಯವಾಳಿ ಪುಳುಮಾಯಿಯು ಕಾಲವಾದನು. ಅವನ ಅನಂತರ ಬಲಹೀನರಾದ ಅರಸರು ಸಿಂಹಾಸನಕ್ಕೆ ಬಂದರು. ಅಂದಿನಿಂದ ಶಾತವಾಹನ ಸಾಮ್ರಾಜ್ಯದ ಅವನತಿಯು ಆರಂಭವಾಯಿತು.

**ಕಡೆನುಡಿ** :—ಶಾತವಾಹನರಲ್ಲಿ ೩೦ ಮಂದಿ ರಾಜರು ಸುಮಾರು ೪೫೦ ವರ್ಷಗಳು ರಾಜ್ಯಭಾರಮಾಡಿದರೆಂದು ಹಿಂದೆಯೇ ತಿಳಿಸಿವು. ಕ್ರಿ. ಶ. ೨೨೫ ಸುಮಾರಿನಲ್ಲಿ ಇವರ ಆಡಳಿತವು ಕೊನೆಗಂಡಿತು. ರಾಜ್ಯವಿಚ್ಛಿನ್ನವಾಗಿ ಅನೇಕ ಸಣ್ಣಪುಟ್ಟ ರಾಜ್ಯಗಳು ಬೆಳಕಿಗೆ ಬಂದುವು. ಆದರೆ ಈ ಕಾಲದ ಇತಿಹಾಸವು ನಮಗೆ ಚನ್ನಾಗಿ ತಿಳಿದುಬಂದಿಲ್ಲ. ಮಗಧರಾಜ್ಯಾನಂತರ ದಕ್ಷಿಣದೇಶದಲ್ಲಿ ಶಾತವಾಹನ ಸಾಮ್ರಾಜ್ಯವೇ ಘನವೂ, ಸ್ಥಿರವೂ, ವಿಶಾಲವೂ ಆದುದು. ಈ ಯುಗದಲ್ಲಿ ಆಂಧ್ರ ಕರ್ಣಾಟಕದೇಶವು ಬಹಳ ಮಟ್ಟಿಗೆ ನಾಗರೀಕಸ್ಥಿತಿಗೆ ಬಂದಿತು. ಬೌದ್ಧಮತ ಪ್ರಚಾರವೂ, ಪ್ರಾಕೃತಸಾಹಿತ್ಯಾಭ್ಯಾಸವೂ ಈ ಕಾಲದ ಮುಖ್ಯ ವೈಶಿಷ್ಟ್ಯವೆಂದು ಹೇಳಬಹುದು. ದೇಶದ ಎಲ್ಲೆಡೆಗಳಲ್ಲೂ ವಿದ್ಯಾದಾನಕ್ಕೆ ತಕ್ಕ ಏರ್ಪಾಡುಗಳಿದ್ದುವು. ಅನೇಕ ವಣಿಜ ಸಂಘಗಳಿದ್ದುವು. ನೌಕಾವ್ಯಾಪಾರವೂ ಬಹು ಅಭಿವೃದ್ಧಿಸ್ಥಿತಿಯಲ್ಲಿತ್ತು. ಒಟ್ಟಿನಲ್ಲಿ ಶಾತವಾಹನರ ಕಾಲದಲ್ಲಿ ಆಂಧ್ರಕರ್ಣಾಟಕರಾಜ್ಯವು ಸಾಂಘಿಕ, ಆರ್ಥಿಕ, ವಿಚಾರಗಳಲ್ಲಿ ಬಹಳ ಮುಂದುವರಿದು, ಧನ ಧಾನ್ಯ ಸಂಪತ್ತಿಯಿಂದ ತುಂಬಿತುಳುಕುತ್ತಲಿತ್ತು.

---

## ೩ ಕದಂಬರು

ಶಾತವಾಹನರ ತರುವಾಯ ಕರ್ಣಾಟಕದಲ್ಲಿ ಏಕಚ್ಛತ್ರಾಧಿಪತ್ಯ
ವನ್ನು ನಡಿಸಿ, ಕರ್ಣಾಟಕದ ಯಶೋಜ್ಯೋತಿಯನ್ನು ನಂದಿಸದೆ
ಕ್ರಿ. ಶ. ೨ ನೇ ಶತಮಾನದಿಂದ ೬ ನೇ ಶತಮಾನದವರೆಗೆ ಬೆಳಗಿಸಿ
ದವರೇ ಕದಂಬರು. ಬನವಸಿಯೇ (ವೈಜಯಂತೀ ಎಂದೂ ಇದಕ್ಕೆ
ಬೇರೊಂದು ಹೆಸರುಂಟು) ಅವರ ರಾಜಧಾನಿಯಾಗಿತ್ತು. ಈ ಮನೆ
ತನದವರು ಬ್ರಹ್ಮಕ್ಷತ್ರಿಯ ಕುಲಕ್ಕೆ ಸೇರಿದವರು.

**ಉತ್ಪತ್ತಿಕಥನ**:—ಕದಂಬರ ಉತ್ಪತ್ತಿಯನ್ನು ಕುರಿತು ಅನೇ
ಕ ಕಥೆಗಳಿರುವುವು. ಸಪ್ತಕೊಂಕಣ (ಪಶ್ಚಿಮಸಮುದ್ರತೀರ)
ಪ್ರದೇಶವನ್ನು ಪರಶುರಾಮನುಂಟುಮಾಡಿದಮೇಲೆ ಪಾರ್ವತೀ ಪರ
ಮೇಶ್ವರರು ಸಹ್ಯಾದ್ರಿಗೆ ಬಂದು, ಒಂದು ಕದಂಬ (ಈಚಲು) ವೃಕ್ಷ
ದಡಿಯಲ್ಲಿ ಕ್ರೀಡಿಸುತ್ತಿರಲು ಒಂದು ಮಗು ಹುಟ್ಟಿತೆಂದೂ, ಆ ಮಗು
ವೇ ಕದಂಬ ವಂಶಕ್ಕೆ ಮೂಲಪುರುಷನಾದನೆಂದು ಒಂದು ಕಥೆ.
ತ್ರಿಪುರಾಸುರ ಸಂಹಾರ ಕಾಲದಲ್ಲಿ ಶಿವನ ಸ್ವೇದ ಬಿಂದುಗಳು
ಕದಂಬ ವೃಕ್ಷಕ್ಕೆ ತಾಕಲು ಕದಂಬ ವಂಶಸ್ಥಾಪಕನ ಜನನವಾಯಿ
ತೆಂದು ಮತ್ತೊಂದು ಕಥೆ. ಕದಂಬರ ಮನೆಯೆದುರಿಗೆ ಒಂದು
ಈಚಲುಮರವಿತ್ತೆಂದೂ, ಆ ಮರದ ಹೆಸರೇ ಆ ಮನೆತನಕ್ಕೆ ಬಂ
ತೆಂದೂ ಇನ್ನೊಂದು ಕಥೆ. ಸಮುದ್ರಮಥನ ಸಮಯದಲ್ಲಿ
ಕಡೆಗೋಲಿನಿಂದ ಅಮೃತ ಬಿಂದುವೊಂದು ನೆಲದಮೇಲೆ ಬಿತ್ತಂತೆ.
ಅದೇ ಕದಂಬ ವೃಕ್ಷವಾಗಿ ಪರಿಣಮಿಸಿತಂತೆ. ಈ ಕಥೆಗಳಿಂದ ಕದಂ
ಬ ಮನೆತನದವರು ನೆರೆಯವರಲ್ಲ, ನೆಲದವರೆಂಬುದು ಸ್ಪಷ್ಟವಾಗು
ತ್ತದೆ.

ಈ ಮನೆತನದ ಮೊದಲಿಗನು ಹುಟ್ಟಿದ ಕಾಲದಲ್ಲಿ, ಆ ದೇಶಕ್ಕೆ
ನಾಯಕನಿಲ್ಲದಿರಲು, ಪ್ರಜೆಗಳು ಪಟ್ಟದಾನೆಯ ಸೊಂಡಿಲಿಗೊಂದು
ಪುಷ್ಪಹಾರವನ್ನು ಕೊಟ್ಟರು. ಆಗಲಾ ಆನೆಯು ಆ ಮಾಲೆಯನ್ನು

ತೆಗೆದೊಯ್ದು ಕದಂಬವಂಶ ಸ್ಥಾಪಕನಾದ ಬಾಲಕನ ಕೊರಳಿಗೆ ಹಾಕಿತು. ಪ್ರಜೆಗಳೆಲ್ಲರೂ ಆ ಬಾಲಕನನ್ನೇ ತಮ್ಮರಸನನ್ನಾಗಿ ಅಂಗೀಕರಿಸಿದರು. ಆವನಿಗೆ ಜಯಂತ, ತ್ರಿನೇತ್ರಕದಂಬ, ತ್ರಿಲೋಚನ ಕದಂಬ ಎಂಬ ಹೆಸರುಗಳಿದ್ದುವು. ಈ ವಂಶೀಯರನೇಕರು ಅಶ್ವಮೇಧಯಾಗವನ್ನು ಮಾಡಿ, ತಾವು ಚಕ್ರವರ್ತಿಗಳೆಂಬಂಶವನ್ನು ವ್ಯಕ್ತಗೊಳಿಸಿದರು. ಬನವಾಸಿಯ ಮಧುಕೇಶ್ವರನೇ ಇವರ ಮನೆದೇವರು. ಶಾತವಾಹನರಂತೆಯೇ ಇವರೂ ಹಾರೀತೀ ಪುತ್ರರು; ಮಾನವ್ಯಗೋತ್ರಿಗಳು ಇವರದು ಹನುಮಧ್ವಜ; ಸಿಂಹಲಾಂಛನ.

**ಅರಸರು** :—ಈ ಕಾಲದ ಇತಿಹಾಸವನ್ನು ನಿರ್ದುಷ್ಟವಾಗಿಯೂ, ಸಂಪೂರ್ಣವಾಗಿಯೂ, ಬರೆಯುಲು ಸಾಧನ ಸಂಪತ್ತಿಯಿನ್ನೂ ಸಾಕಾದಷ್ಟು ಸಿಕ್ಕಿಲ್ಲ. ಇತಿಹಾಸ ಸಂಶೋಧನಾಕಾರ್ಯವಿನ್ನೂ ಕರ್ಣಾಟಕದಲ್ಲಿ ಬಾಲ್ಯಾವಸ್ಥೆಯಲ್ಲಿರುವ ಕಾರಣ ಈ ಮನೆತನದ ವಂಶವೃಕ್ಷವನ್ನು ಶಾಸ್ತ್ರೀಯವಾಗಿ ರಚಿಸಲು ಕಷ್ಟಸಾಧ್ಯವಾಗಿದೆ. ಆದರೂ ಆಳಿದ ಅರಸರ ವಿಷಯವಾಗಿ ಅನೇಕಾಂಶಗಳು ತಿಳಿದು ಬಂದಿವೆ. ಅವೆಲ್ಲವನ್ನೂ ವಿಶದೀಕರಿಸಲು ಅವಕಾಶವಿಲ್ಲವಾದುದರಿಂದ, ಮುಖ್ಯ ಮುಖ್ಯರಾದರಸರಾಳ್ವಿಕೆಯನ್ನಿಲ್ಲಿ ಪ್ರಸ್ತಾಪಿಸುವೆವು.

ಕ್ರಿ ಶ. ಸುಮಾರು ೨ ನೆಯ ಶತಮಾನದಲ್ಲಿ ಜಯಂತನು ಕದಂಬ ಮನೆತನದರಸುತನಕ್ಕೆ ಆರಂಭಮಾಡಿದನು. ಇವನ ಅನಂತರ ಮಧುಕೇಶ್ವರ, ಮಲ್ಲಿನಾಥ, ಚಂದ್ರವರ್ಮರೆಂಬದಾಗಿ ಮೂವರು ಆಳಿದರು. ಚಂದ್ರವರ್ಮನಿಗೆ ಚಂದ್ರವರ್ಮ ಮತ್ತು ಪುರಂದರ ಎಂಬಿಬ್ಬರು ಮಕ್ಕಳಾದರು. ಚಂದ್ರವರ್ಮನ ಮಗನೇ ಮಯೂರವರ್ಮನು. ಇವನಿಗೆ ಮಯೂರಶರ್ಮನೆಂದೂ ಹೆಸರುಂಟು. ಮಹಾಭಾರತದಲ್ಲಿ ಉಕ್ತವಾಗಿರುವ ಕುಂತಳದೇಶಾಧಿಪತಿಯಾಗಿದ್ದ ಚಂದ್ರಹಾಸನೇ ಈ ಮನೆತನದ ಮೊದಲನೆಯ ಚಂದ್ರವರ್ಮನಿರಬಹುದೆಂದು ಹಲವರ ಊಹೆ. ಹಾಗೆಯೇ ಕೊಡಗರ ಮೂಲಪುರುಷನಾದ ಚಂದ್ರವರ್ಮನೇ ಎರಡನೆಯ ಚಂದ್ರವರ್ಮನೆಂದು ಹಲವರು ಅಭಿಪ್ರಾಯಪಡುತ್ತಾರೆ.

ಮಯೂರಶರ್ಮನ ಕಾಲಕ್ಕೆ ಕದಂಬ ರಾಜ್ಯವು ಸ್ಥಿರಪಟ್ಟಿತು. ಅನೇಕ ಇತಿಹಾಸಜ್ಞರು ಮಯೂರಶರ್ಮನನ್ನೇ ಕದಂಬ ಮನೆತನಕ್ಕೆ ಮೂಲಪುರುಷನೆಂದು ಭಾವಿಸುತ್ತಾರೆ. ಇದು ಹೇಗಾದರೂ ಇರಲಿ. ಮಯೂರಶರ್ಮನು ಮಹಾಪರಾಕ್ರಮಿಯೂ, ಕದಂಬರಲ್ಲಿ ಪ್ರಖ್ಯಾತನೂ ಆಗಿದ್ದನೆಂಬುದರಲ್ಲಿ ಲೇಶವೂ ಅನುಮಾನವಿಲ್ಲ. ಇವನು ಕಲ್ಯಾಣದರಸನಾದ ರಾಜವಲ್ಲಭನರಸಿ ಶಶಿಪ್ರಭೆಯನ್ನು ಗೋಮಂತ ಗುಹಾ ವಾಸಿಯಾದ ಕಂದರ್ಪಭೂಷಣನೆಂಬೊಬ್ಬ ಯಕ್ಷನಿಂದ ಸಂರಕ್ಷಿಸಿದನು. ಇದರ ಸಲುವಾಗಿ ಮಯೂರಶರ್ಮನಿಗೆ ವಿಸ್ತಾರ ರಾಜ್ಯಲಾಭವುಂಟಾಯಿತು. ಅಷ್ಟೇ ಅಲ್ಲ; ಕಲ್ಯಾಣದ ರಾಜಪುತ್ರಿಯಾದ ಶಶಾಂಕಮುದ್ರೆಯೊಂದಿಗೆ ವಿವಾಹವೂ ಆಯಿತು.

ಘಟ್ಟದಸೀಮೆಗೆ ಅಹಿಚ್ಛತ್ರದಿಂದ ಬ್ರಾಹ್ಮಣರನ್ನು ಕರೆಸಿ ಅವರ ವಸತಿಗಳನ್ನು ಕಲ್ಪಿಸಿದವನಿವನೆಂದು ಅನೇಕರ ಊಹೆ. ಈಗ ಉತ್ತರ ದಕ್ಷಿಣ ಕನ್ನಡ ಜಿಲ್ಲೆಗಳೊಳಗಿರುವ ಹವೀಕ ಬ್ರಾಹ್ಮಣರೇ ಅಂದಿನವರ ಸಂತತಿಯವರು. ಹೆಸರುವಾಸಿಯಾದ ಮಯೂರಶರ್ಮನನ್ನು ಕುರಿತು ಅನೇಕ ಕಥೆಗಳುಂಟು. ಆದರೆ ಶಾಸನಸ್ಥವಾದೊಂದು ವೃತ್ತಾಂತವನ್ನು ಮಾತ್ರ ಇಲ್ಲಿ ಕೊಡುವೆವು.

ಕದಂಬ ಕುಲೋತ್ಪನ್ನನಾದ ಮಯೂರಶರ್ಮನೆಂಬೊಬ್ಬ ವಿಪ್ರನು ತನ್ನ ಗುರುವಾದ ವೀರಶರ್ಮನೊಂದಿಗೆ ವಿದ್ಯಾರ್ಜನೆಗಾಗಿ ಪ್ರಸಿದ್ಧ ಘಟಿಕಾಸ್ಥಾನವಾದ ಕಾಂಚೀನಗರವನ್ನು ಸೇರಿದನು. ಆಗ ಅಲ್ಲಿ ಪಲ್ಲವರು ಆಳುತ್ತಿದ್ದರು. ಮಯೂರಶರ್ಮನಿಗೂ ಪಲ್ಲವರಿಗೂ ಕಾರಣಾಂತರದಿಂದ ಕಲಹವುಂಟಾಗಿ, ಮಯೂರಶರ್ಮನು ಪರಾಜಿತನಾದನು. ಆ ಕೋಪದಿಂದ ಮಯೂರಶರ್ಮನು ಪಲ್ಲವರಮೇಲೆ ಹಗೆ ತೀರಿಸಿಕೊಳ್ಳಲು, ಕ್ಷಾತ್ರವನ್ನು ಸ್ವೀಕರಿಸಿ, ಕರ್ನೂಲು ಜಿಲ್ಲೆಯ ಶ್ರೀಪರ್ವತ ಪ್ರಾಂತವನ್ನು ಸೇರಿ, ಅಲ್ಲಿಯ ನೆರೆಹೊರೆಯ ರಾಜರನ್ನು ಎದುರಿಸಿ, ಪ್ರಬಲನಾದನು. ಇದನ್ನು ಕಂಡು ಸಹಿಸದ ಪಲ್ಲವರು ಸೈನ್ಯಸಮೇತರಾಗಿ ಬಂದು ಮಯೂರಶರ್ಮನನ್ನು ಎದುರಿಸಿ

ವರು. ಆದರೇನು ಮಯೂರನ ಬಲದೆದುರಿಗೆ ಪಲ್ಲವರು ನಿಲ್ಲಲಾರದೆ ಹೋದರು; ಸೋತರು; ಅವನೊಡನೆ ಸಂಧಿಯನ್ನು ಮಾಡಿಕೊಂಡು, ಅಮರಾರ್ಣವದಿಂದ ಪರಮಾರ ರಾಷ್ಟ್ರದವರೆಗೂ ಇದ್ದ ರಾಜ್ಯವನ್ನು ಮಯೂರನಿಗೆ ಬಿಡಲೊಪ್ಪಿದರು.

ಮಯೂರನ ಅನಂತರ ಅವನ ಮಗನಾದ ಕಂಗ ಅಥವಾ ಕನಕವರ್ಮನು ಪಟ್ಟಕ್ಕೆ ಬಂದನು. ಇವನ ಮಗನೇ ಭಗೀರಥನು. ಇವನಾದ ಮೇಲೆ ಇವನ ಮಕ್ಕಳಾದ ರಘುವರ್ಮನೂ ಮತ್ತು ಕಕುಸ್ಥವರ್ಮನೂ ಒಬ್ಬರಾದ ಮೇಲೊಬ್ಬರು ರಾಜ್ಯಭಾರವನ್ನು ಕೈಕೊಂಡರು. ಇವರಲ್ಲಿ ಕಕುಸ್ಥವರ್ಮನೇ ಹೆಸರುವಾಸಿಯಾದವನು. ಇವನು ಗುಪ್ತಸಂರಾಜರೊಂದಿಗೆ ವಿವಾಹ ಬಾಂಧವ್ಯವನ್ನು ಬೆಳೆಸಿದ್ದನು. ಕಕುಸ್ಥನಿಗೆ ಶಾಂತಿವರ್ಮ, ಕೃಷ್ಣವರ್ಮರೆಂಬಿಬ್ಬರು ಮಕ್ಕಳಿದ್ದರು. ಶಾಂತಿವರ್ಮನ ತರುವಾಯ ಕ್ರಮವಾಗಿ ಅವನಿಬ್ಬರು ಮಕ್ಕಳಾದ ಮೃಗೇಶವರ್ಮ, ಮಾಂಧಾತವರ್ಮರು ಸಿಂಹಾಸನಾಧಿಷ್ಟರಾದರು. ಮೃಗೇಶವರ್ಮನು ಗಂಗವಂಶದರಸರಿಗೂ, ಪಲ್ಲವರಿಗೂ ಯಮಪ್ರಾಯವಾಗಿದ್ದನು. ಮಾಂಧಾತನ ಆಳ್ವಿಕೆಯಾನಂತರ ಮೃಗೇಶನ ಮಗನಾದ ರವಿವರ್ಮನು ಪಟ್ಟಕ್ಕೆ ಬಂದನು. ಇವನೂ ಪಲ್ಲವ ರಾಜನಾದ ವಿಷ್ಣುವರ್ಮನನ್ನು ಕೊಂದನು; ಚಂಡದಂಡನನ್ನು ಮೂಲೋತ್ಪಾಟನ ಮಾಡಿದನು. ರವಿವರ್ಮನ ಮಗನೇ ಹರಿವರ್ಮನು. ಇವನ ಅನಂತರ ಕಾರಣಾಂತರಗಳಿಂದ ಶಾಂತಿವರ್ಮನ ತಮ್ಮ ಕೃಷ್ಣವರ್ಮನ ಮೊಮ್ಮಗನ ಮಗನಾದ ಎರಡನೇ ಕೃಷ್ಣವರ್ಮನು ಪಟ್ಟಕ್ಕೆ ಬಂದಂತೆ ಕಾಣಬರುತ್ತದೆ. ಇವನ ಅನಂತರ ಅಜವರ್ಮ, ಭೋಗಿವರ್ಮ ಮುಂತಾದ ಹಲವು ಹೆಸರುಗಳು ಕಾಣಬಂದರೂ, ಅವರು ಸಂಪೂರ್ಣ ಸ್ವಾತಂತ್ರ್ಯದಿಂದ, ಅವರ ಹಿರಿಯರ ವೈಭವದಿಂದ, ಆಳಿದಂತೆ ತೋರಿಬರುವುದಿಲ್ಲ.

**ಕದಂಬರ ಕೊನೆಗಾಲ**:—ಕದಂಬರ ಬಲವು ದಿನೇ ದಿನೇ ಕುಗ್ಗುತ್ತ ಬಂತು. ಕ್ರಿ. ಶ. ೫೭೬ ಸುಮಾರಿನಲ್ಲಿ ಬಾದಾಮಿಯ

ಚಾಳುಕ್ಯ ರಾಜನಾದ ಕೀರ್ತಿವರ್ಮನು ಕದಂಬರನ್ನು ಧ್ವಂಸಮಾಡಿ, ಆ ಮನೆತನದವರನ್ನು ಮೂಲೆಗೊತ್ತರಿಸಿ, ಕದಂಬರಾಜ್ಯವನ್ನು ಚಾಳುಕ್ಯ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು. ಆದರೂ ಕದಂಬರು ಕರ್ನಾಟಕ ಇತಿಹಾಸದಿಂದ ಮಾಯವಾಗಲಿಲ್ಲ. ೧೪ ನೆಯ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯಸ್ಥಾಪನೆಯಾಗುವವರೆಗೂ, ಇವರು ಬಾದಾಮಿ ಚಾಳುಕ್ಯರು, ಹೊಯ್ಸಳರು ಮೊದಲಾದವರಿಗೆ ಸಾಮಂತರಾಗಿದ್ದುಕೊಂಡು ಗೋವಾ, ಹಾನುಂಗಲ್ಲು ಮೊದಲಾದ ಪ್ರಾಂತಗಳಲ್ಲಿ ಮಾಂಡಲಿಕತನವನ್ನು ಮಾಡುತ್ತಿದ್ದರು.

---

## ೪ ಇತರ ಮನೆತನಗಳು

ಕದಂಬರಿಗೆ ಸಮಕಾಲೀನರಾಗಿದ್ದು, ಕಾವೇರೀ ತುಂಗಭದ್ರಾ ಮಧ್ಯದೇಶದಲ್ಲಿ ಸುಮಾರು ೭-೮ ಶತಮಾನಗಳು ಸಾಮ್ರಾಜ್ಯ ವೈಭವದಿಂದಾಳಿದ ಗಂಗರಸರ ಚರಿತ್ರೆಯನ್ನು ಮುಂದಿನ ಪ್ರಕರಣದಲ್ಲಿ ಹೇಳುವೆವು. ಇಲ್ಲಿ ಯಾವ ಮನೆತನದ ಇತಿಹಾಸವು ಸ್ಪಷ್ಟವಾಗಿ ತಿಳಿದು ಬಂದಿಲ್ಲವೋ, ಯಾವ ಅರಸರ ಆಡಳಿತವಿಚಾರ ವಿಶದೀಕರಣವು ಕರ್ನಾಟಕಇತಿಹಾಸ ಪ್ರಮಾಣ ದೃಷ್ಟಿಯಿಂದ ಅಪ್ರಯುಕ್ತವೋ ಅಂತಹ ಸಣ್ಣ ಪುಟ್ಟ ಅರಸು ವಂಶೀಯರ ವಿಷಯಗಳನ್ನು ಬಿಟ್ಟು ಮುಖ್ಯವಾದವುಗಳ ವಿಚಾರಗಳನ್ನಿಲ್ಲಿ ಸಂಗ್ರಹಿಸುವೆವು.

**ಪುನ್ನಟರು** :—ಚಂದ್ರಗುಪ್ತನ (ಕ್ರಿ. ಪೂ ೩ ನೇ ಶತಮಾನ) ಕಾಲದಲ್ಲೇ ಪುನ್ನಟರಾಜ್ಯದ ವಿಚಾರವನ್ನು ಕೇಳಿದೆವು. ಭದ್ರಬಾಹುವಿನಿಂದಾಜ್ಞಪ್ತರಾದ ಜೈನರು ಈ ರಾಜ್ಯವನ್ನು ಸೇರಿದರೆಂದು ತಿಳಿದೆವು. ಕ್ರಿ. ಶ. ೨ ನೇ ಶತಮಾನದ ಟೋಲೆಮಿಯು ಪುನ್ನಟದಲ್ಲಿ ಪಚ್ಚೆಯ ಗಣಿಗಳು ಹೇರಳವಾಗಿರುವುವೆಂದು ಬರೆದಿರುವನು. ಪುನ್ನಟವಾರುಸಾವಿರ ರಾಜ್ಯವೆಂದು ೮ ನೇ ಶತಮಾನದ ಗಂಗಶಾಸನದಿಂದ ಗೊತ್ತಾಗುತ್ತದೆ. ಇಷ್ಟಲ್ಲದೆ ಆ ರಾಜ್ಯದ ವಿಚಾರವಿನ್ನೇನೂ

ನಮಗೆ ತಿಳಿದು ಬಂದಿಲ್ಲ. ಅದರ ರಾಜಧಾನಿಯು ಕೀರ್ತಿಪುರ. ಈಗ ಅದಕ್ಕೆ ಕಿತ್ತೂರೆಂದು ಹೆಸರು. ಅದು ಮಹಿಸೂರು ಜಿಲ್ಲೆಯ ಹೆಗ್ಗಡ ದೇವನಕೋಟೆ ತಾಲ್ಲೂಕಿನಲ್ಲಿ ಕಪಿನೀ ನದಿಯ ದಡದಲ್ಲಿದೆ. ಈ ಮನೆತನದ ಒಂದು ಶಾಸನದಿಂದ ಕೆಳಗೆ ಕಾಣಿಸಿರುವ ರಾಜರ ಹೆಸರು ಗಳು ತಿಳಿಯ ಬರುತ್ತವೆ.




ಅವಿನೀತನ ಕಾಲದಲ್ಲಿ ಅಂದರೆ ಸುಮಾರು ಕ್ರಿ. ಶ. ೬ ನೆಯ ಶತಮಾನಾಂತ್ಯದಲ್ಲಿ ಪುನ್ನಾಟರಾಜ್ಯವು ಗಂಗವಾಡಿ (ಸಾಮ್ರಾಜ್ಯ) ಯಲ್ಲಿ ಸೇರಿಹೋದಂತೆ ಕಾಣಬರುತ್ತದೆ.

**ಬಾಣರಸರು** :—ಇವರಿಗೆ ಮಹಾವಲಿಬಾಣರಸರೆಂದೂ ಹೆಸರು. ಅಲ್ಲದೆ ಬೃಹದ್ಬಾಣರೆಂದೂ ಇವರನ್ನು ಕರೆಯುವುದುಂಟು. ಕರ್ಣಾಟಕದಲ್ಲಿ ಆಳಿದ ಮನೆತನಗಳಲ್ಲಿ ಇದೂ ಪುರಾತನವೂ ಪ್ರಖ್ಯಾತವೂ ಆದುದು. ಮೊದಲು ಮೊದಲಿನ ಕದಂಬರಾಜರು ಬಾಣರಾಜರಿಂದ ಕಪ್ಪವನ್ನು ತೆಗೆದುಕೊಂಡರು. ಗಂಗರಾಜರ ಮೊದಲಿಗನಾದ (ಕ್ರಿ. ಶ. ೨ ನೇ ಶತಮಾನ) ಕೊಂಗುಣಿ ವರ್ಮನು ಬಾಣ ಮಂಡಲವನ್ನು ಗೆದ್ದನು. ಬಾಣರಸರು ಪುರಾಣ ಪ್ರಸಿದ್ಧನಾದ

ಬಲಿಚಕ್ರವರ್ತಿಯ ವಂಶಜರೆಂಬೊಂದು ನಂಬುಗೆಯುಂಟು. ದೊರೆತ
ಶಾಸನಗಳಿಂದ ಬಾಣರು ಪಳುವರೆಲಕ್ಷ ರಾಜ್ಯಕ್ಕಧಿಪತಿಗಳಾಗಿದ್ದ
ರೆಂದೂ, ೧೨.೦೦೦ ಪುರಗ್ರಾಮಗಳಿಂದ ಕೂಡಿದ ಈ ರಾಜ್ಯವು
ಆಂಧ್ರದೇಶಕ್ಕೆ ಪಶ್ಚಿಮಭಾಗದಲ್ಲಿತ್ತೆಂದೂ, ತಿಳಿಯಬರುತ್ತದೆ. ಈ
ಗಿನ ಮೈಸೂರು ದೇಶದ ಪೂರ್ವಭಾಗವೆಲ್ಲವೂ ಅವರಧೀನದಲ್ಲಿತ್ತು.
ಅಸಿತಧ್ವಜರಿವರು; ವೃಷಭಲಾಂಛನ. ೯-೧೦ ನೆಯ ಶತಮಾನದ
ಶಿಲಾಶಾಸನಗಳಿಂದ ಉತ್ತರ ಆರ್ಕಾಡು ಜಿಲ್ಲೆಯೊಳಗಣ ಪಡುವಿಪ್ಪುರಿ
(ಈಗ ಇದಕ್ಕೆ ಪಡವೀಡು ಎಂದು ಹೆಸರು) ಎಂಬುದವರ ರಾಜಧಾನಿ
ಯಾಗಿದ್ದಂತೆ ತಿಳಿಯ ಬರುತ್ತದೆ. ಇವರ ಮೊದಲಿನ ರಾಜಧಾನಿ
ಯಾವುದೋ ಗೊತ್ತಿಲ್ಲ.

ಬೃಹದ್ಬಾಣರು ಕ್ರಿ. ಶ. ಒಂದೆರಡನೆಯ ಶತಮಾನಗಳಲ್ಲೇ
ಸ್ವತಂತ್ರವಾಗಿ ಆಡಳಿತವನ್ನು ನಡೆಸುತ್ತಿದ್ದರು. ಕದಂಬರು ಪ್ರಬಲ
ರಾದಮೇಲೆ ಸುಮಾರು ಕ್ರಿ.ಶ. ೨೦೦ ರಿಂದ ೪೦೦ ರವರೆಗೆ ಬಾಣರು
ಅವರಿಗೆ ಸಾಮಂತರಾಗಿದ್ದರು. ಅನಂತರ ಮತ್ತೆ ಸ್ವಾತಂತ್ರ್ಯವನ್ನು
ಪಡೆದರು. (ಬಾದಾಮಿಯ ಚಾಳುಕ್ಯರೂ, ಪಲ್ಲವರೂ, ಚೋಳರೂ
ಪ್ರಬಲರಾಗುತ್ತ ಆಗುತ್ತ ಬಾಣರ ಪ್ರಾಬಲ್ಯವು ಕಡಮೆಯಾಯಿತು.)
ಕ್ರಿ. ಶ. ೬೫೫ ಸುಮಾರಿನಲ್ಲಿ ಸಿಂಹಾಸನವನ್ನೇರಿದ ಮೊದಲನೆಯ
ವಿಕ್ರಮಾದಿತ್ಯ ಚಾಳುಕ್ಯನು ರಾಜಮಲ್ಲನೆಂಬ ಬಾಣರಾಜನನ್ನು ಗೆದ್ದ
ನು. ಕ್ರಿ.ಶ. ೯ ನೆಯ ಶತಮಾನಾಂತ್ಯದಲ್ಲಿ ಚೋಳರೂ, ಪಲ್ಲವರೂ,
ಬಾಣರನ್ನು ಮುಟ್ಟಹಾಕಿದರು. ಅಂದರೆ ೧೦ ನೆಯ ಶತಮಾನಾಂ
ತಕ್ಕೆ ಬಾಣರಾಜರ ಸ್ವಾತಂತ್ರ್ಯವು ಹೋಯಿತು. ಅಲ್ಲಿಂದಾಚೆಗೆ
ಬಾಣರು ಕೆಲಕಾಲ ಪಲ್ಲವರಿಗೆ ಅಧೀನರಾಗಿದ್ದರು.

**ರಾಷ್ಟ್ರಕೂಟರು**:—ಶಾತವಾಹನರು ಆಂಧ್ರ ಕರ್ನಾಟಕ
ವನ್ನು ಪರಿಪಾಲಿಸುತ್ತಿದ್ದ ಕಾಲದಲ್ಲಿ ಕರ್ನಾಟಕದಲ್ಲಿ ರಸ್ತಿಕ, ರಟ್ಟ,
ಅಥವಾ ರಾಷ್ಟ್ರ ಕೂಟರೆಂಬವರು ಅವರಿಗೆ ಅಧೀನರಾಗಿದ್ದರು.
ಶಾತವಾಹನರ ಅನಂತರ ಬಂದ ಕ್ಷತ್ರಪರ ಮತ್ತು ಕದಂಬರ ಕೈ

ಕೆಳಗೂ ಇವರು ಹಲವು ಕಾಲ ಬಾಳಿರಬೇಕು. ಆದರೆ ಬಹು ಬೇಗ ಸ್ವತಂತ್ರರಾಗಿ ರಾಜ್ಯಭಾರವಾಡುತ್ತಿದ್ದರು. ಇವರು ಕ್ರಿ. ಶ. ಸು. ೬ ನೆಯ ಶತಮಾನದಿಂದ ೭ ನೆಯ ಶತಮಾನಾರಂಭದವರೆಗೂ ಸುಸೂತ್ರವಾಗಿ ಆಳಿದರು. ಕ್ರಿ. ಶ. ೫೦೦ ಸುಮಾರಿನಲ್ಲಿ ಚಾಳುಕ್ಯರ ಮೊದಲನೆಯ ರಾಜನಾದ ಜಯಸಿಂಹನು ರಾಷ್ಟ್ರಕೂಟ ಕೃಷ್ಣರಾಜನ ಮಗನಾದ ಇಂದ್ರನನ್ನು ಎದುರಿಸಿ, ಅವನನ್ನು ಕೊಂದು, ಚಾಳುಕ್ಯ ರಾಜ್ಯಸ್ಥಾಪನೆಯನ್ನು ಮಾಡಿದನು.

**ನಳರು** :—ಇವರಾಳುತ್ತಿದ್ದ ದೇಶಕ್ಕೆ ನಳವಾಡಿಯೆಂದು ಹೆಸರು. ಇದು ಬಳ್ಳಾರಿ ಕರ್ನೂಲು ಜಿಲ್ಲೆಗಳ ಕಡೆಗಿತ್ತೆಂದು ಹಲವರ ಅಭಿಪ್ರಾಯ. ಇಮ್ಮಡಿ ಪುಲಕೇಶಿಯ ತಂದೆಯೂ, ರಣಪರಾಕ್ರಮಿಯೂ ಆದ ಮೊದಲನೆಯ ಕೀರ್ತಿವರ್ಮನು 'ನಳಕುಲ ಕಾಲಾಂತಕ'ನೆಂದೂ, 'ನಳವಿಷಯ ವಿನಾಶಕ'ನೆಂದೂ ಹೆಸರು ಪಡೆದಿದ್ದನು. ನಳರ ವಿಷಯವಾಗಿ ನಮಗೆ ಇನ್ನೇನೂ ತಿಳಿದು ಬಂದಿಲ್ಲ. ಚಾಳುಕ್ಯರಾಜ್ಯ ಸ್ಥಾಪನಾಕಾಲದಲ್ಲಿ ನಳರು ಸಾಮಾನ್ಯ ಸಣ್ಣ ಪುಟ್ಟ ನಾಯಕರಲ್ಲವೆಂದೂ, ರಾಷ್ಟ್ರಕೂಟರಂತೆ ಸ್ವಾತಂತ್ರ್ಯ ರಕ್ಷಣೆಗಾಗಿ, ರಣಪರಾಕ್ರಮಿಗಳಾದ ಚಾಳುಕ್ಯರೊಂದಿಗೆ ಹೋರಾಡಿದ ವೀರರೆಂದೂ ತೋರುರದು.

**ಮೌರ್ಯರು** :—ಮೌರ್ಯಕುಲದರಸರು ಪಶ್ಚಿಮ ಸಮುದ್ರತೀರ ದೇಶದಲ್ಲಿ ಆಳುತ್ತಿದ್ದರು. ಮೊದಲನೆಯ ಕೀರ್ತಿವರ್ಮನು ಈ ಅರಸರನ್ನೆದುರಿಸಿ ಸೋಲಿಸಿದನು. ಐಹೊಳೆ ಶಾಸನದಿಂದ ಇಮ್ಮಡಿ ಪುಲಕೇಶಿಯು ಅಪಾರವಾದ ಸೈನ್ಯ ಸಮೇತನಾಗಿ ಮೌರ್ಯರ ಮೇಲೆ ಧಾಳಿಯಿದ್ದು, ಅವರನ್ನು ಧ್ವಂಸಮಾಡಿದನೆಂದು ತಿಳಿದು ಬರುತ್ತದೆ. ಇವರು ಬಹುತರ ಕ್ರಿ. ಪೂ. ೪ ನೆಯ ಶತಮಾನದಲ್ಲಿ ಚಂದ್ರಗುಪ್ತ ಮೌರ್ಯನಿಂದ ಸ್ಥಾಪಿಸಲ್ಪಟ್ಟ ಮೌರ್ಯಮನೆತನಕ್ಕೆ ಸೇರಿದವರೆಂದು ಕಾಣಬರುತ್ತದೆ.

**ಸೇಂದ್ರಕರು** :—ಕ್ರಿ. ಶ. ೫೧೭ ಸುಮಾರಿನಲ್ಲಿ ಆಳುತ್ತಿದ್ದ ಕದಂಬ ಹರಿವರ್ಮನ ಶಾಸನವೊಂದರಲ್ಲಿ ಭಾನುಶಕ್ತಿಯೆಂಬೊಬ್ಬ

ಸೇಂದ್ರಕರಾಜನ ಹೆಸರು ಕಾಣಬರುತ್ತದೆ. ಮತ್ತೊಂದು ಶಾಸನ ದಿಂದ ಭಾನುಶಕ್ತಿಗೆ ಆದಿತ್ಯಶಕ್ತಿಯೆಂಬ ಮಗನೊಬ್ಬನಿದ್ದನೆಂದೂ, ಅವನಿಗೆ ಪೃಥ್ವೀವಲ್ಲಭ ನಿಕುಂಭಲ್ಲಶಕ್ತಿಯೆಂಬ ಮಗನಿದ್ದನೆಂದೂ ಗೊತ್ತಾಗುತ್ತದೆ. ಮೊದಲನೆಯ ಪುಲಕೇಶಿಗೆ ಸಾಮಿಯಾರನೆಂಬ ವನೊಬ್ಬನು ಸಾಮಂತನಾಗಿದ್ದನು. ಇವನು ರೌಂದ್ರನೀಳ ಸೇಂದ್ರ ಕವಂಶದಲ್ಲಿ ಹುಟ್ಟಿದವನು. ದುರ್ಗಶಕ್ತಿಯೆಂಬ ಸೇಂದ್ರಕರಾಜನು ಇಮ್ಮಡಿ ಪುಲಕೇಶಿಗೆ ಅಧೀನನಾಗಿದ್ದನು. ಅಲ್ಲದೆ ದುರ್ಗಶಕ್ತಿಯು ಭುಜಗೇಂದ್ರ ಕುಲಕ್ಕೆ ಸೇರಿದವನು. ಮತ್ತೊಂದು ಶಾಸನದಿಂದ ಶ್ರೀವಲ್ಲಭ ಸೇನಾನಂದ ರಾಜನೆಂಬ ಸೇಂದ್ರಕನೊಬ್ಬನು ಇಮ್ಮಡಿ ಪುಲಕೇಶಿಯ ಸೋದರಮಾವನಾಗಿದ್ದನೆಂದು ತಿಳಿದುಬಂದಿದೆ. ಇದೇ ವಂಶದ ದೇವಶಕ್ತಿಯು ಮೊದಲನೆಯ ವಿಕ್ರಮಾದಿತ್ಯನ ಮಾಂಡಲಿಕ ನಾಗಿದ್ದನು. ಮಹಾರಾಜ ಪೊಗಿಲ್ಲಿ ಸೇಂದ್ರಕನು ಜನವಾಸಿ ವಿಷಯ ದೊಳಗಣ ನಾಗರಖಂಡಕ್ಕೊಡೆಯನಾಗಿದ್ದನು. ಆನೆಯು ಇವರ ಲಾಂಛನವಾಗಿತ್ತು.

**ಕಲಚುರ್ಯರು** :—ಇವರಿಗೆ ಹೈಹಯರೆಂದೂ ಹೆಸರುಂಟು. ಇವರು ಸಹಸ್ರಾರ್ಜುನ ಅಥವಾ ಸಹಸ್ರಬಾಹು ಅರ್ಜುನನ ವಂಶೀಯ ರೆಂದು ಐತಿಹ್ಯವುಂಟು. ಸಮುದ್ರಗುಪ್ತನು ತನ್ನ ಅಲಹಾಬಾದ್ ಪ್ರಶಸ್ತಿಯಲ್ಲಿ ಇವರನ್ನು ಆರ್ಜುನಾಯನರೆಂದು ಕರೆದಿರುವನು. ಕ್ರಿ. ಶ. ೬ ನೆಯ ಶತಮಾನಾರಂಭದಿಂದ ಈ ಕಲಚುರ್ಯರು ಮಧ್ಯಪ್ರಾಂ ತ್ಯದಿಂದ ಬಂದು ಲಾಟ ದೇಶದಲ್ಲಿ ಆಳುತ್ತಿದ್ದರು. ಮೊದಲನೆಯ ಪುಲಕೇಶಿಯ ಮಗನಾದ ಮಂಗಳೇಶನು ಕಲಚುರ್ಯರ ರಾಜ್ಯ ಶ್ರೀ ಯನ್ನು ಕೈಹಿಡಿದನೆಂದು ಹೇಳಿದೆ. ಅಂದರೆ ಮಂಗಳೇಶನು ಕಲ ಚುರ್ಯರನ್ನು ಸೋಲಿಸಿ ಅವರ ನಾಡಿಗೊಡೆಯನಾದ ನೆಂದಾಯಿತು. ಕ್ರಿ. ಶ. ೬೮೦ ಸುಮಾರಿನಲ್ಲಿ ಮತ್ತೆ ವಿನಯಾದಿತ್ಯನು ಕಲಚುರ್ಯ ರನ್ನು ರಣರಂಗದಲ್ಲಿ ಎದುರಿಸ ಬೇಕಾಯಿತು. ಆಗ ವಿನಯಾದಿತ್ಯನೇ ವಿಜಯಿಯಾದನು. ಅಂದಿನಿಂದ ಕಲಚುರ್ಯರು ಚಾಳುಕ್ಯರೊಂದಿಗೆ ಶತ್ರುತ್ವವನ್ನು ಬಿಟ್ಟರು; ಅವರೊಂದಿಗೆ ವಿವಾಹ ಸಂಬಂಧವನ್ನು

ಜೆಳೆಸಿದರು ; ಅವರ ಸಾಮಂತರಾದರು. ಎರಡನೆಯ ವಿಕ್ರಮಾ ದಿತ್ಯನು ಲೋಕಮಹಾದೇವಿ, ಮತ್ತು ತ್ರೈಲೋಕ್ಯಮಹಾದೇವಿ ಯೆಂಬಿಬ್ಬರು ಕಲಚುರಿ ರಾಜಪುತ್ರಿಯರನ್ನು ಮದುವೆಯಾದನು. ಅಲ್ಲದೆ ಕಲಚುರ್ಯರು ಪೂರ್ವಚಾಳುಕ್ಯರೊಂದಿಗೂ, ರಾಷ್ಟ್ರಕೂಟ ರೊಂದಿಗೂ ಬಂಧುತ್ವವನ್ನು ಜೆಳೆಸಿದರು. ರಾಷ್ಟ್ರಕೂಟರ ಪತ ನಾನಂತರ ಮತ್ತೆ ಪಟ್ಟಕ್ಕೆ ಬಂದ ಕಲ್ಯಾಣೀ ಚಾಳುಕ್ಯರ ಮೊದಲಿಗ ನಾದ ಇಮ್ಮಡಿ ತೈಲಪನು ಕಲಚುರಿ ರಾಜಪುತ್ರಿಯಾದ ಬೊಂತಾ ದೇವಿಯ ಪುತ್ರನು.

ಈ ಮನೆತನದ ಒಂದು ಶಾಖೆಯವರು ಬಹುಕಾಲ ಸಮಯ ಕಾದಿದ್ದು ೧೨ ನೆಯ ಶತಮಾನದಲ್ಲಿ (ಮುಮ್ಮಡಿ ತೈಲಪನ ಅನಂತರ) ಕಲ್ಯಾಣಿಯಲ್ಲಿ ಚಾಳುಕ್ಯರನ್ನು ಮೂಲೆಗೆ ಕೂಡಿಸಿ ತಾವು ಅರಸುತನ ವನ್ನು ಮಾಡಿದರು.

**ಆಳುಪರು** :—ಆಳ್ವಖೇಡವಾರುಸಾವಿರ ದೇಶವು ಪಶ್ಚಿಮ ಸಮುದ್ರ ತೀರದಲ್ಲಿತ್ತೆಂಬುದರಲ್ಲಿ ಅನುಮಾನವಿಲ್ಲ. ಕ್ರಿ. ಶ. ೨ ನೆಯ ಶತಮಾನದಲ್ಲೇ ಟೋಲೆಮಿಯು 'ಓಲೋಖೋರಿಯ' ಎಂಬ ದೇಶ ವನ್ನು ವರ್ಣಿಸಿರುವನು. ಇದೇ ಆಳ್ವಖೇಡ. ಈ ಆಳ್ವಖೇಡದಲ್ಲಿ ಆಳುಪರೆಂಬುವರು ಆಳುತ್ತಿದ್ದರು. ಇವರು ಸೋಮವಂಶೋದ್ಭ ವರು. ಕ್ರಿ. ಶ. ೬೦೮ ರಲ್ಲಿ ಇಮ್ಮಡಿ ಪುಲಕೇಶಿಯು ಗಂಗರಸರನ್ನೂ ಆಳುಪರನ್ನೂ ಸೋಲಿಸಿದನು. ಪುಲಕೇಶಿಯು ಅವರನ್ನು ಎದುರಿಸ ಬೇಕಾಗಿದ್ದರೆ ಆಳುಪರು ಬಹು ಬಲಿಷ್ಟರಾಗಿದ್ದಿರಬೇಕು. ಚಾಳುಕ್ಯ ಶಾಸನಗಳಿಂದ ಗುಣಸಾಗರಾಳುಪನೆಂಬವನು ಕದಂಬ ಮಂಡಲ ವನ್ನು ಆಳುತ್ತಿದ್ದಂತೆ ತಿಳಿಯುಬರುತ್ತದೆ. ಅವನಿಗೆ ಚಿತ್ರವಾಹನನೆಂ ಜೊಬ್ಬ ಮಗನಿದ್ದನು. ಇವನು ವಿನಯಾದಿತ್ಯನ ಸಾಮಂತನಾಗಿದ್ದು ಪಟ್ಟಿಪೊಂಬುಚ್ಚ (ಹುಂಬುಚ) ದಲ್ಲಿ ಆಳುತ್ತಿದ್ದನು. ಈ ಮನೆತನದ ರಣಸಾಗರನು ಉದಯಪುರವನ್ನು (ಉಡುಪಿಯ ಬಳಿಯಿರುವ ಉದ ಯಾವರ) ಹೊಕ್ಕು, ಯುದ್ಧಮಾಡಿ, ಅದನ್ನು ಸ್ವಾಧೀನ ಪಡಿಸಿ ಕೊಂಡಂತೆ ಕಾಣಬರುತ್ತದೆ. ವಿಜಯಾದಿತ್ಯ, ಉದಯಾದಿತ್ಯ ಎಂಬ

ಬ್ಬರಿಗೆ 'ಉತ್ತಮಪಾಂಡ್ಯ' ಎಂಬ ಹೆಸರಿತ್ತು. ಇದರಿಂದ ಆಳುಪರಿಗೂ, ದ್ರಾವಿಡದೇಶಾಧಿಪರಾದ ಪಾಂಡ್ಯರಾಜರಿಗೂ ಸಂಬಂಧವಿದ್ದಂತೆ ತೋರಿಬರುತ್ತದೆ. ಇದೇನು ರಕ್ತಸಂಬಂಧವೋ, ರಾಜಕೀಯ ಸಂಬಂಧವೋ ಹೇಳಲಾಗದು. ಅಂತು ಕ್ರಿ. ಶ. ೭ ನೆಯ ಶತಮಾನದಲ್ಲೇ ಆಳುಪರು ಪ್ರಖ್ಯಾತರಾಗಿದ್ದರು. ಚಾಳುಕ್ಯರ ಕಾಲದಲ್ಲಿ, ಸಾಮಂತರಾಗಿದ್ದರೂ ವಿಪುಲಯಶಸ್ಸುಳ್ಳವರಾಗಿದ್ದರು. ಹುಂಬುಚ, ಉದಯಾವರಗಳವರ ರಾಜಧಾನಿಗಳಾಗಿದ್ದುವು. ಬಹುತರ ಇವರು ಜೈನಮತಾನುಯಾಯಿಗಳು.

ಚಾಳುಕ್ಯರ ಹೊಡೆತದಿಂದ ಆಳುಪರು ಕೆಳಕ್ಕೆ ಬಿದ್ದರು. ಕ್ರಿ.ಶ. ೮ ನೆಯ ಶತಮಾನಾನಂತರ ಅವರ ಹೆಸರೇ ಕಾಣಬರುವುದಿಲ್ಲ. ಆದರೆ ೧೦-೧೧ ನೆಯ ಶತಮಾನದಲ್ಲಿ ಗೋವೆಯ ಕದಂಬರೇ ಮೊದಲಾದವರೊಂದಿಗೆ ಹೋರಾಡಿ ೧೪ ನೆಯ ಶತಮಾನಾಂತದವರೆಗೂ, ಮಂಗಳೂರು, ಬಾರಕೂರುಗಳನ್ನು ರಾಜಧಾನಿಗಳನ್ನಾಗಿ ಮಾಡಿಕೊಂಡು ರಾಜ್ಯವಾಳಿದಂತೆ ದಕ್ಷಿಣಕನ್ನಡ ಶಾಸನಗಳಿಂದ ಸ್ಪಷ್ಟವಾಗುತ್ತದೆ.

ಚಾಳುಕ್ಯರು ಕರ್ಣಾಟಕ ಸಾಮ್ರಾಜ್ಯನಿರ್ಮಾಣಕ್ಕಾಗಿ ಆಭೀರ, ತ್ರೈಕೂಟಕ, ಲಾಟ, ಮಾಳವ, ಗೂರ್ಜರ, ಪಲ್ಲವ ಮೊದಲಾದನೇಕ ಅರಸರೊಂದಿಗೆ ಕಲಹಮಾಡಿ, ಅವರಿಂದ ರಾಜ್ಯಸಂಪಾದನೆಯನ್ನು ಮಾಡಿದರು. ಆದರೆ ಅವರೆಲ್ಲರ ಆನುಪೂರ್ವಿಯನ್ನು ಇಲ್ಲಿ ಹೇಳುವುದನುಚಿತ.

---

## ೫ ಕರ್ಣಾಟಕ ಸಂಸ್ಕೃತಿ

(ಕ್ರಿ. ಶ. ೭ ನೆಯ ಶತಮಾನದವರೆಗೆ)

ಆರ್ಯರಲ್ಲಿ ಪರಸ್ಪರ ಸಂಬಂಧವನ್ನು ಕಲ್ಪಿಸಿಕೊಂಡನಂತರ ಕರ್ಣಾಟಕರಲ್ಲಿ ದ್ರಾವಿಡತ್ವವು ದೂರವಾಗಿ ಆರ್ಯಸಂಸ್ಕೃತಿಯುಂಟಾಯಿತು. ದ್ರಾವಿಡ ವ್ಯಕ್ತಿತ್ವವು ಮಾಯವಾಗಿ ನೂತನವ್ಯಕ್ತಿತ್ವವುಂಟಾಯಿತೆಂದು ಮೊದಲೇ ತಿಳಿಸಿದ್ದಾಯಿತು. ಕರ್ಣಾಟಕದ ಸರ್ವತೋ

ಮುಖ್ಯವಾದ ಸಾಂಸ್ಕೃತಿಕ ವೃದ್ಧಿ ವಿಕಾಸಕ್ಷೇತ್ರದಲ್ಲಿ ಈ ನೂತನ ವ್ಯಕ್ತಿತ್ವವು ಎಷ್ಟುಮಟ್ಟಿಗೆ ಕಾರ್ಯಾರಂಭ ಕಾರ್ಯೋತ್ಪಾದಕ ದೀಕ್ಷತೆಯನ್ನು ವಹಿಸಿತೋ, ಅದರ ಫಲಯೋಗವೇನಾಯಿತೋ ನೋಡುವ.

ಕರ್ಣಾಟಕ ದೇಶದಲ್ಲಿ ಸಿಗುವ ಅಶೋಕನ ಶಾಸನಗಳೆಲ್ಲವೂ ಪ್ರಾಕೃತದಲ್ಲಿಯೇ ಇವೆ. ಶಾತವಾಹನ ಸಮ್ರಾಜರು ಪ್ರಾಕೃತ ಗ್ರಂಥರಚನೆಗೂ, ವಾಙ್ಮಯಪ್ರಚಾರಕ್ಕೂ ಉದಾರಾಶ್ರಯವನ್ನಿತ್ತರು. ಶಾತವಾಹನ ರಾಜನೊಬ್ಬನು ಪೈಶಾಚಿಯಲ್ಲಿ ಬೃಹತ್ಕಥೆಯನ್ನು ಬರೆದಂತೆ ಹೇಳಿಕೆಯುಂಟು. ಮತ್ತೊಬ್ಬ ಶಾತವಾಹನ ರಾಜನಿಂದಾಜ್ಞಪ್ತನಾದ ಶರ್ವವರ್ಮನು ಕಾತಂತ್ರವೆಂಬ ವ್ಯಾಕರಣವನ್ನು ಬರೆದನು. ಪಾಣಿನಿಯ ಅಷ್ಟಾಧ್ಯಾಯಿಯನ್ನು ಬಿಟ್ಟರೆ ಇದೇ ಮುಖ್ಯ ವ್ಯಾಕರಣ. ಹಾಲನೆಂಬ ಮಗದೊಬ್ಬ ಶಾತವಾಹನನು ಸಪ್ತಶತೀ ಎಂಬೊಂದು ಕಾವ್ಯಮಾಲಿಕೆಯನ್ನು ರಚಿಸಿದನು. ವಾತ್ಸಾಯನ ಕಾಮಸೂತ್ರದಲ್ಲಿ ಕುಂತಳಶಾತಕರಣಿಯ ಹೆಸರು ಕಾಣಬರುತ್ತದೆ. ಶಾತವಾಹನ ಶಾಸನಗಳು ಮಾತ್ರವೆ ಅಲ್ಲದೆ ಅವರ ಅನಂತರ ಬಂದ ಕದಂಬರ ಶಾಸನಗಳು ಕೂಡ ಪ್ರಾಕೃತಭಾಷೆಯಲ್ಲೇ ಇವೆ. ಆರನೆಯ ಶತಮಾನಾರಂಭಕ್ಕೆ ಬರುವವರೆಗೂ ಕನ್ನಡದ ಸುಳಿವೇ ಕಾಣಬರುವುದಿಲ್ಲ. ಇಂದಿನ ತುಳು, ಬಡಗ, ಕೊಡಗು ಭಾಷೆಗಳಂತೆ ಆಗ ಕನ್ನಡವನ್ನು ಜನರು ಆಡುತ್ತಿದ್ದಿರಬಹುದು. ಆದರೆ ಅದು ಕೇವಲ ರೂಕ್ಷಾವಸ್ಥೆಯಲ್ಲೇ ಇತ್ತು. ಆರ್ಯಸಂಸ್ಕೃತಿಯ ಸಂಪರ್ಕದಿಂದ ಅಪ್ರೌಢಾವಸ್ಥೆಯಲ್ಲಿದ್ದ ಕನ್ನಡವು ಒಂದು ವ್ಯಕ್ತಿತ್ವವನ್ನು ಪಡೆಯಲು ಒಳಗೊಳಗೇ ಪರಿವರ್ತನವನ್ನು ಹೊಂದುತ್ತಲಿತ್ತು. ಶಾತವಾಹನ ಕದಂಬರ ಕಾಲದಲ್ಲಿ ಕರ್ಣಾಟಕ ದೇಶದಲ್ಲೆಲ್ಲಾ (ಕ್ರಿ. ಶ. ೪ ನೆಯ ಶತಮಾನಾಂತ್ಯದ ವರೆಗೆ ಸಾಧಾರಣವಾಗಿ ದಕ್ಷಿಣದೇಶದಲ್ಲೆಲ್ಲ) ಪ್ರಾಕೃತ ಭಾಷೆಯು ಪ್ರಚಾರದಲ್ಲಿತ್ತು. ಅದೇ ಜನರೆಲ್ಲರ ವ್ಯವಹಾರಭಾಷೆಯಾಗಿತ್ತು: ವಿದ್ಯಾವಂತರ ವಾಙ್ಮಯ ಭಾಷೆಯಾಗಿತ್ತು. ವೈದಿಕ ಮತ ಪ್ರಾಚುರ್ಯವು ಹೆಚ್ಚುತ್ತ ಹೆಚ್ಚುತ್ತ ಸಂಸ್ಕೃತಭಾಷಾಭ್ಯಾಸವೂ ಮೊದಲಾಯಿತು.

ಈ ಕಾಲದಲ್ಲಿ ಬೌದ್ಧಜೈನಮತ ಪ್ರಚಾರವೇ ಹೆಚ್ಚು ನಡೆಯು ತ್ತಿತ್ತು. ಆದರೆ ವೈದಿಕಮತವೂ, ಸ್ಫೂರ್ತಿಯಿಂದ ತಲೆಯೆತ್ತಲು ಮೊದಲಾಗಿತ್ತು. ಜೈನಬೌದ್ಧ ಮತಗಳ 'ಅಹಿಂಸಾ' ತತ್ವದಿಂದ ವೈದಿಕಮತವು ಬಹಳ ಮಟ್ಟಿಗೆ ಹದಕ್ಕೆ ಬಂದಿತ್ತೆಂಬುದನ್ನು ಮರೆಯ ಬಾರದು. ಸ್ಥೂಲವಾಗಿ ಜೈನ, ಬೌದ್ಧ, ಬ್ರಾಹ್ಮಣ, ಧರ್ಮಗಳು ಏಕಕಾಲದಲ್ಲಿ ಪರಸ್ಪರ ಅಸೂಯಾತಂಕಗಳಿಲ್ಲದೆ ಬೆಳೆದುವು. ಶಾತ ವಾಹನರು ಬ್ರಾಹ್ಮಣಮತಾನುಯಾಯಿಗಳಾದರೂ ಅನೇಕ ಬೌದ್ಧ ಭಿಕ್ಷುಗಳಿಗೆ ದಾನ ಧರ್ಮಗಳನ್ನು ಮಾಡಿದರು. ಕದಂಬರು ಕರ್ಣಾ ಟಕದಲ್ಲಿ ಜೈನಸಂಸ್ಕೃತಿಯು ಹರಡಲು ಹೆಚ್ಚು ಅವಕಾಶವನ್ನೂ, ಉತ್ತೇಜನವನ್ನೂ ಕೊಟ್ಟರೆಂಬುದು ಕಾಕುಸ್ಥವರ್ಮನ ಸೈನ್ಯಾಧಿಪ ತಿಯೂ, ಮೃಗೇಶವರ್ಮನೂ, ದಾಮಕೀರ್ತಿ, ಜಯಕೀರ್ತಿ, ಬಂಧು ಸೇನ, ಕುಮಾರದತ್ತ ಇತ್ಯಾದಿ ಜೈನಾಚಾರ್ಯರಿಗೆ ಕೊಟ್ಟ ದತ್ತಿಗಳಿಂ ದಲೂ, ಹರಿವರ್ಮನು ವೀರಸೇನಾಚಾರ್ಯನ ವಿದ್ಯಾಪೀಠಕ್ಕಾಗಿ ಕೊಟ್ಟ ಹಲಸಿಯ ಗ್ರಾಮದಾನದಿಂದಲೂ ವ್ಯಕ್ತವಾಗುತ್ತದೆ.

ರಾಜರೂ, ವರ್ತಕರೂ, ಸಾಧಾರಣ ಪ್ರಜೆಗಳೂ, ಎಲ್ಲರೂ ಶ್ರದ್ಧಾ ಭಕ್ತಿಗಳಿಂದ ಅವರವರ ಮತಾನುಸಾರ ಸ್ತೂಪಾರಾಮ ಚೈತ್ಯ ವಿಹಾರ ದೇಗುಲ ಧರ್ಮಶಾಲೆಗಳನ್ನು ಕಟ್ಟಿಸಿ, ಅವು ಸಜೀವ ದಿಂದ ಆಚಂದ್ರಾರ್ಕವಾಗಿರಲು ಬೇಕಾದ ದಾನಧರ್ಮಗಳನ್ನು ಮಾಡಿ ದರು. ಜನರ ಸಿಕ್ಕಲವಾದ ಧಾರ್ಮಿಕಸತ್ವವು ಲಲಿತಕಲೋತ್ಪಾದ ನದಲ್ಲಿ ಕೊನೆಗಂಡಿತು; ಸೌಂದರ್ಯಾನುಭವದಲ್ಲಿ ಕೊನೆಗಂಡಿತು. ಈ ಕಾಲದಲ್ಲೇ ಕಾರ್ಲಿ, ಕಾನ್ಹೇರಿ, ಅಜಂತಾ ಮೊದಲಾದೆಡೆ ಜಗ ನ್ಮೋಹನಾಕಾರವಾದ ಗುಹಾಂತರ್ದೇವಾಲಯಗಳು ನಿರ್ಮಾಣವಾ ದುವು. ಬೌದ್ಧರ ಅವಶೇಷಗಳಿಗಿಂತಲೂ ಜೈನರ ಅವಶೇಷಗಳೇ ಕರ್ಣಾಟಕದಲ್ಲಿ ಹೆಚ್ಚು. ಇಂದಿಗೂ ಕರ್ಣಾಟಕವೇ ದಕ್ಷಿಣದೇಶದಲ್ಲಿ ಜೈನಸಂಸ್ಕೃತಿಯ ತಾಯ್ನಾಡು.

---

## ಎರಡನೆಯ ಅಧ್ಯಾಯ

### ೧ ಬಾದಾಮಿಯ ಚಾಳುಕ್ಯರು

ಹಿಂದಿನ ಪ್ರಕರಣದಲ್ಲಿ ಕದಂಬರ ಅನಂತರ ಅನೇಕ ಸಣ್ಣಸಣ್ಣ ಅರಸು ಮನೆತನಗಳು ಪ್ರಾಬಲ್ಯಕ್ಕೆ ಬಂದುವೆಂದೂ ಚಾಳುಕ್ಯರು ಅವರೆಲ್ಲರನ್ನೂ ನಿಗ್ರಹಿಸಿದರೆಂದೂ ಹೇಳಿದ್ದಾಯಿತು. ಇವರೆಲ್ಲರಿಗಿಂತಲೂ ಪಲ್ಲವರೇ ಚಾಳುಕ್ಯರ ರಾಜ್ಯಸ್ಥಾಪನೆಗೆ ಹೆಚ್ಚು ಕಿರುಕುಳವನ್ನುಂಟುಮಾಡಿದವರು. ವೆಂಗೀ ದೇಶದಲ್ಲಿ ಕಾಲೂರಿದ್ದ ಪಲ್ಲವರನ್ನು ಬಹುಸಾಹಸದಿಂದ ಚಾಳುಕ್ಯರು ಹೊರಡಿಸಿ ಅವರನ್ನು ದ್ರಾವಿಡದೇಶಕ್ಕೆ ಓಡಿಸಿದರು. ಪಲ್ಲವರು ಅಲ್ಲಿ ತಮಿಳು ರಾಜ್ಯಕ್ಕಧಿಪತಿಗಳಾಗಿ, ಕಾಂಚೀನಗರವನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡು, ಚಾಳುಕ್ಯರಿಗೆ ಜನ್ಮಶತ್ರುಗಳಾಗಿದ್ದರು.

**ಉತ್ಪತ್ತಿ** :—ಚಾಳುಕ್ಯರಿಗೆ ಬಾದಾಮಿಯ ಚಾಳುಕ್ಯರೆಂದೂ ಹೆಸರುಂಟು. ಬಾದಾಮಿಯು (ವಾತಾಪಿ) ಅವರ ರಾಜಧಾನಿ. ಈಗ ಅದು ಬಿಜಾಪೂರ ಜಿಲ್ಲೆಯಲ್ಲಿದೆ. ಈ ಮನೆತನದ ಮೂಲಪುರುಷರು ಅಯೋಧ್ಯೆಯಲ್ಲಿ ಬಹುಕಾಲ ಆಳುತ್ತಿದ್ದರೆಂದೂ, ಅಲ್ಲಿಂದ ಇವರು ದಕ್ಷಿಣದೇಶಕ್ಕೆ ಬಂದು ಕರ್ಣಾಟಕ ದೇಶದಲ್ಲಿ ರಾಜ್ಯಸ್ಥಾಪನೆ ಮಾಡಿದರೆಂದೂ ಐತಿಹ್ಯವುಂಟು. 'ಚಾಳುಕ್ಯ' ಎಂಬ ಹೆಸರನ್ನು ಕುರಿತೊಂದು ಕಥೆಯುಂಟು. ಬ್ರಹ್ಮನೊಂದು ದಿನ ಪ್ರಾತಃಕಾಲ ಸಂಧ್ಯಾವಂದನ ಮಾಡುತ್ತಿದ್ದ ಕಾಲಕ್ಕೆ ಸರಿಯಾಗಿ ಇಂದ್ರನಲ್ಲಿಗೆ ಬಂದು "ಮಹಾಪ್ರಭೋ! ಪ್ರಪಂಚವು ಪಾಪಭೂಯಿಷ್ಠವಾಗಿ ಹೋಯಿತು. ಯಜ್ಞಯಾಗಾದಿಗಳನ್ನು ಮಾಡಿ ದೇವತೆಗಳಿಗೆ ಹವ್ಯಕವ್ಯಾದಿಗಳನ್ನು ಕೊಡುವವರೇ ಇಲ್ಲ" ವೆಂದು ಮೊರೆಯಿಡಲು ಬ್ರಹ್ಮನು ಕೋಪಾವೇಶದಿಂದ ಚುಲಕ(ಆಪೋಶನಕ್ಕಾಗಿ ನೀರಿಡುವ ಅಂಗೈ ಗುಣಿ)ದ ಕಡೆಗೆ ನೋಡಲು ಅದರಲ್ಲಿ ವೀರನೊಬ್ಬನು ಜನಿಸಿದನಂತೆ. ಅವನೇ ಚಾಳುಕ್ಯವಂಶದ ಮೂಲಪುರುಷನು. ಇದೇ ವಂಶದಲ್ಲೇ ಹಾರೀತ, ಮಾನವ್ಯರೆಂಬಿಬ್ಬರು ಶೂರರು ಹುಟ್ಟಿ ಕುಲಕ್ಕೆ ಬಹು ಕೀರ್ತಿ

ಯನ್ನು ತಂದರು. ಸೋಮವಂಶೀಯರಿವರು. ಕಾರ್ತಿಕೇಯನೇ ಇವರ ಮನೆದೇವರು. ಪಾಳಿಧ್ವಜರಿವರು ; ವರಾಹಲಾಂಛನ.

**ಅರಸರು:**—ಜಯಸಿಂಹನೆಂಬುವನೇ ಚಾಳುಕ್ಯರಾಜ್ಯಸ್ಥಾಪಕನು. ಇವನು ಆಗ ಕರ್ಣಾಟಕದಲ್ಲಿ ಆಳುತ್ತಿದ್ದ ರಾಷ್ಟ್ರಕೂಟ ರಾಜನಾದ ಇಂದ್ರನನ್ನು ಸೋಲಿಸಿ ರಾಜ್ಯವನ್ನು ಸ್ಥಿರಪಡಿಸಿದನು. ಅವನಿಗೆ ಬುದ್ಧವರ್ಮನೆಂದೂ ರಣರಾಗನೆಂದೂ ಇಬ್ಬರು ಮಕ್ಕಳು. ಬುದ್ಧವರ್ಮನಿಗೆ ವಿಜಯವರ್ಮನೆಂಬೊಬ್ಬ ಮಗನಿದ್ದನು. ಅವನ ವಿಚಾರವೇನೂ ನಮಗೆ ಗೊತ್ತಿಲ್ಲ. ರಣರಾಗನ ಮಗನೇ ಮೊದಲನೆಯ ಪುಲಕೇಶಿ. ಇವನು ಕ್ರಿ. ಶ. ಸು. ೫೫೦ ರಲ್ಲಿ ಪಟ್ಟಕ್ಕೆ ಬಂದನು. ಇವನು ಅಶ್ವಮೇಧ ಯಾಗವನ್ನು ಮಾಡಿ 'ಸತ್ಯಾಶ್ರಯ ಶ್ರೀಪೃಥ್ವೀವಲ್ಲಭ' ನೆನಿಸಿಕೊಂಡನು. 'ರಣವಿಕ್ರಮ' ನೆಂದೂ ಇವನಿಗೆ ಬಿರುದಿತ್ತು. ಇಂದುಕಾಂತ (ಅಜಂತಾ)ವು ಮೊದಲಿವನ ರಾಜಧಾನಿಯಾಗಿತ್ತು. ಇವನು ರಾಜ್ಯವನ್ನು ವಿಸ್ತರಿಸುತ್ತ ಬಂದು ಬಾದಾಮಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು.

ಇವನಿಗೆ ಕೀರ್ತಿವರ್ಮನೆಂದೂ ಮಂಗಳೀಶನೆಂದೂ ಇಬ್ಬರು ಮಕ್ಕಳು ಹುಟ್ಟಿದರು. ಕೀರ್ತಿವರ್ಮನು ಯಾವಾಗ ಸಿಂಹಾಸನವನ್ನೇರಿದನೋ ತಿಳಿಯದು. ಇವನು ಮಹಾಶೂರನಾದುದರಿಂದ ನಳ, ಮೌರ್ಯ, ಕದಂಬರನ್ನು ಸೋಲಿಸಿ ರಾಜ್ಯವನ್ನು ವಿಸ್ತರಿಸಿದನು. ಇವನಿಗೆ 'ರಣಪರಾಕ್ರಮ' ನೆಂಬ ಬಿರುದಿತ್ತು. ಬಾದಾಮಿಯಲ್ಲಿ ಜಗನ್ಮೋಹನಾಕಾರಗಳಾಗಿರುವ ಗುಹಾಂತರ್ದೇವಾಲಯಗಳನ್ನು (ಕಲ್ಲನ್ನು) ಕಡಿಸಲು ಪ್ರಾರಂಭಿಸಿದ ಕಲಾಸಕ್ತನಿವನೆ. ಕ್ರಿ. ಶ. ಸು. ೫೯೭ ರಲ್ಲಿ ಇವನಾಳ್ವಿಕೆಯು ಕೊನೆಗಂಡಿತು.

ಕೀರ್ತಿವರ್ಮನಿಗೆ ಇಮ್ಮಡಿ ಪುಲಕೇಶಿ, ಕುಬ್ಜವಿಷ್ಣುವರ್ಧನ ಮತ್ತು ಇಮ್ಮಡಿ ಜಯಸಿಂಹ ಎಂಬ ಮೂವರು ಪುತ್ರರಿದ್ದರು. ತಂದೆಯು ಕಾಲವಾದಾಗ ಹಿರಿಯ ಮಗನಾದ ಪುಲಕೇಶಿಯು ಬಾಲಕನಾಗಿದ್ದುದರಿಂದ ಅವನ ಚಿಕ್ಕಪ್ಪನಾದ ಮಂಗಳೀಶನು ರಾಜ್ಯಸೂತ್ರ,

ಗಳನ್ನು ಹಿಡಿದು ಸುಮಾರು ೧೦-೧೨ ವರ್ಷಗಳಕಾಲ ಸಾಮ್ರಾಜ್ಯಭಾರವನ್ನು ನಡೆಸಿದನು. ಮಾತಂಗ, ಕಳಚುರ್ಯ ಮೊದಲಾದವರನ್ನು ಸೋಲಿಸಿ ಅವರ ದೇಶಗಳನ್ನು ಗೆದ್ದನು. ಪಶ್ಚಿಮ ಸಮುದ್ರದೊಳಗಣ ರೇವತೀ ದ್ವೀಪವನ್ನು ಸಾಧಿಸಿದನು. ಪುಲಕೇಶಿಯು ಪ್ರಾಪ್ತವಯಸ್ಕನಾಗುತ್ತ ಬರಲು ತಾನೇ ರಾಜ್ಯಾಧಿಕಾರ ಮಾಡಲು ಬಯಸಿದನು. ದೀರ್ಘಕಾಲ ಅಧಿಕಾರದ ರುಚಿಯನ್ನು ಕಂಡಿದ್ದ ಮಂಗಳೇಶನಿಗದು ಸರಿಬೀಳಲಿಲ್ಲ. ತನ್ನ ಅನಂತರ ತನ್ನ ಮಗನಾದ ಇಂದ್ರವರ್ಮನೇ ಸಾಮ್ರಾಜ್ಯ ಸಿಂಹಾಸನವನ್ನೇರಬೇಕೆಂದು ಯೋಚಿಸಿದನು. ಇದು ಪುಲಕೇಶಿಗೆ ಸರಿಬೀಳಲಿಲ್ಲ. ಕೂಡಲೇ ಇವರಿಬ್ಬರಿಗೂ ಯುದ್ಧವು ಮೊದಲಾಯಿತು. ಕ್ರಿ. ಶ. ೬೦೯-೧೦ ರಲ್ಲಿ ನಡೆದ ಒಂದು ಯುದ್ಧದಲ್ಲಿ ಮಂಗಳೇಶನು ಮೃತನಾದನು. ಪುಲಕೇಶಿಯ ಮಾರ್ಗವು ನಿರುಪಾಧಿಕವಾಯಿತು.

**ಇಮ್ಮಡಿ ಪುಲಕೇಶಿ** :—ಇವನೇ ಚಾಳುಕ್ಯರ ಕೀರ್ತಿಗಂಬದಮೇಲೆ ನಂದಾದೀಪವನ್ನು ಬೆಳಗಿಸಿದ ಜಗದ್ವಿಖ್ಯಾತಿಗೊಂಡ ಚಕ್ರವರ್ತಿಯು. ಕ್ರಿ. ಶ. ೬೦೯-೧೦ ರಲ್ಲಿ ಇವನಿಗೆ ರಾಜ್ಯಾಭಿಷೇಕವಾಯಿತು. ಇವನು ರಾಷ್ಟ್ರಕೂಟ, ಗಂಗ, ಕದಂಬ, ಆಳುಪ, ಮೌರ್ಯ, ಲಾಟ, ಗುರ್ಜರ ರಾಜರನ್ನು ಮಟ್ಟಹಾಕಿದುದು ಮಾತ್ರವೇ ಅಲ್ಲದೆ ದಂಡಯಾತ್ರೆಯನ್ನು ಕೈಗೊಂಡು ಕೋಸಲರು, ಕಳಿಂಗರು, ಪಲ್ಲವರು, ಚೋಳರು, ಕೇರಳರು, ಮತ್ತು ಪಾಂಡ್ಯರನ್ನು ಗೆದ್ದು 'ದಕ್ಷಿಣಾಪಥೇಶ್ವರ' ನೆಂಬ ಹೆಸರನ್ನು ಪಡೆದನು. ಉತ್ತರ ಹಿಂದೂಸ್ಥಾನದಲ್ಲೆಲ್ಲಾ ಪರಾಕ್ರಮಿಯೆನಿಸಿ ಕನ್ಯಾಕುಬ್ಜದಲ್ಲಾಳುತ್ತಿದ್ದ, ಗುಪ್ತಸಾರ್ವಭೌಮನಾದ ಹರ್ಷವರ್ಧನನನ್ನು ಸೋಲಿಸಿ 'ಪರಮೇಶ್ವರ' ನೆಂಬ ಕೀರ್ತಿಯನ್ನು ಪಡೆದುದೇ ಪುಲಕೇಶಿಯ ಪರಾಕ್ರಮ ಪ್ರಕರಣದಲ್ಲಿ ಸ್ವರ್ಣಾಕ್ಷರಗಳಿಂದ ಬರೆಯಲ್ಪಡತಕ್ಕ ಸಾಹಸಕಾರ್ಯ. ಅಶ್ವಮೇಧಾದಿಯಜ್ಞಾದಿಗಳನ್ನು ಮಾಡಿದ ಇವನಿಗೆ ಸತ್ಯಾಶ್ರಯನೆಂದೂ ಹೆಸರುಂಟು. ಇವನಿಗೆ ಆದಿತ್ಯವರ್ಮ, ಚಂದ್ರಾದಿತ್ಯ, ವಿಕ್ರಮಾದಿತ್ಯರೆಂಬ ಮೂವರು ಮಕ್ಕಳಿದ್ದರು.

ಇವನಾಳ್ವಿಕೆಯ ಕಾಲದಲ್ಲಿ ಚೈನಾ ಯಾತ್ರಿಕನಾದ ಹುಯೆನ್ ತ್ಸಾಂಗನು ಹಿಂದೂದೇಶದಲ್ಲಿ ಪ್ರವಾಸಮಾಡಿ, ಪುಲಕೇಶಿಯ ಸಾಮ್ರಾಜ್ಯವನ್ನೂ, ಅವನ ರಾಜಧಾನಿಯನ್ನೂ ಕುರಿತು ಬಗೆಬಗೆಯಾಗಿ ಬಣ್ಣಿಸಿರುವನು. "ಈ ಸಾಮ್ರಾಜ್ಯದ ನೆಲವು ಫಲವತ್ತಾದುದು. ಬೆಳೆಯು ಹುಲುಸಾಗಿ ಆಗುತ್ತದೆ; ಉಷ್ಣದೇಶ. ಜನರ ಆಚಾರ ವ್ಯವಹಾರಗಳು ಸಮರ್ಪಕಗಳಾಗಿವೆ. ಇಲ್ಲಿನ ನಿವಾಸಿಗಳು ಬಹು ದರ್ಪವುಳ್ಳವರು. ಸಹಾಯಕರಿಗೆ ಬಹುಕೃತಜ್ಞರು; ಕೆಡಕನ್ನೆಣಿಸಿದವರಿಗೆ ಕೇಡನ್ನು ಬಯಸದಿರರು. ಇವರು ಅವಮಾನವನ್ನು ಸಹಿಸರು. ಪರೋಪಕಾರಿಗಳು. ನ್ಯಾಯವಾಗಿ ಯುದ್ಧವನ್ನು ಮಾಡುತ್ತಾರೆ. ಶರಣಾಗತರಾದವರನ್ನು ಕೊಲ್ಲುವುದಿಲ್ಲ. ಅವರ ಸೇನಾನಾಯಕನು ಯುದ್ಧದಲ್ಲಿ ಸೋತು ಹಿಂದಿರುಗಿದರೆ ಅವನಿಗೆ ಸೀರೆಯನ್ನುಡಿಸಿ ಅವಮಾನಪಡಿಸುತ್ತಾರೆ. ರಾಜನಲ್ಲಿ ಅಪಾರವಾದ ಸೈನ್ಯವುಂಟು; ಆನೆಗಳುಂಟು. ಶತ್ರುಗಳಾರೂ ಇವನನ್ನು ಜಯಿಸಲಾಗದು. ಈ ದೇಶದರಸನಾದ ಪುಲಕೇಶಿಯು ಬಹು ದರ್ಪವುಳ್ಳವನು; ಕ್ಷತ್ರಿಯನು. ಬಹು ಧಾರ್ಮಿಕ, ದಯಾಳು. ಅವನ ಪ್ರಜೆಗಳಿಗೆ ಅವನಲ್ಲಿ ಬಹು ಪ್ರೀತಿ. ಜನರು ವಿದ್ಯಾಪ್ರಿಯರು. ರಾಜಧಾನಿಯಲ್ಲಿ ಅನೇಕ ಸ್ತೂಪಾರಾಮಗಳೂ, ದೇವಾಲಯಗಳೂ ಇವೆ." ಎಂಬದಾಗಿ ಹೇಳಿರುವನು.

ಪುಲಕೇಶಿಯ ಕೀರ್ತಿಯು ಹಿಂದೂಸ್ಥಾನದಲ್ಲಿ ಮಾತ್ರವೇ ಅಲ್ಲದೆ ದೂರದೇಶಗಳಲ್ಲೂ ಹರಡಿತ್ತು. ಪರ್ಷಿಯಾದೇಶದ ಚಕ್ರವರ್ತಿಯಾದ ಇಮ್ಮಡಿ ಖುಸ್ರುವಿಗೂ ಅವನಿಗೂ ರಾಯಭಾರವು ನಡೆಯಿತು. ಈ ಸಂದರ್ಭವನ್ನು ಸೂಚಿಸುವ ಚಿತ್ರವೊಂದನ್ನು ಅಜಂತಾ ಗುಹೆಯಲ್ಲಿ ಈಗಲೂ ನೋಡಬಹುದು.

ವಿಸ್ತಾರವಾದ ಸಾಮ್ರಾಜ್ಯವನ್ನು ವಿಚಕ್ಷಣೆಯಿಂದಲೂ, ಸಾಕಾದಷ್ಟು ದಕ್ಷತೆಯಿಂದಲೂ, ಆಳುವ ಉದ್ದೇಶ್ಯದಿಂದ ಪುಲಕೇಶಿಯು ರಾಜ್ಯವನ್ನು ವಿಭಾಗಿಸಿ, ಪೂರ್ವಭಾಗವಾದ ಆಂಧ್ರ (ವೆಂಗೀ) ದೇಶಕ್ಕೆ ತಮ್ಮನಾದ ಕುಬ್ಜವಿಷ್ಣುವರ್ಧನನನ್ನು (ಕ್ರಿ. ಶ. ೬೧೮

ಸುಮಾರಿನಲ್ಲಿ) ಸಾಮಂತರಾಜನನ್ನಾಗಿ ನೇಮಿಸಿದನು. ಮತ್ತೊಬ್ಬ ತಮ್ಮನಾದ ಜಯಸಿಂಹನನ್ನು ಲಾಟದೇಶಕ್ಕೆ ಕಳುಹಿಸಿದನು. ಅವನ ಸಂತತಿಯವರಿಗೆ ಗುಜರಾತ್ ಚಾಳುಕ್ಯರೆಂದು ಹೆಸರು. ಕೆಲವು ಕಾಲಾನಂತರ ಕುಬ್ಜವಿಷ್ಣುವರ್ಧನನು ಸ್ವತಂತ್ರನಾಗಿ ಆಂಧ್ರದೇಶಕ್ಕೆ ತಾನೇ ಅರಸನಾದನು. ಅವನ ಸಂತತಿಯವರಿಗೆ ಪೂರ್ವ ಚಾಳುಕ್ಯರೆಂದು ಹೆಸರು.

**ಪಲ್ಲವರೂ ಚಾಳುಕ್ಯರೂ** :—ಕರ್ಣಾಟಕ ರಾಜ್ಯವನ್ನು ಕ್ಷಾತ್ರತೇಜದಿಂದ ಪುಲಕೇಶಿಯು ವಿಸ್ತರಿಸಿ, ರಾಜಧಾನಿಯಾದ ವಾತಾಪಿಯನ್ನು ಸಿಂಗರಿಸಿ, ಧಾರ್ಮಿಕಾಚರಣೆಯಿಂದ ಪ್ರಜಾಸುಖವನ್ನೇ ಬಯಸಿ ರಾಜ್ಯಂಗೆಯ್ಯುತ್ತಿರಲು, ಜನ್ಮದ್ವೇಷಿಗಳಾದ ಪಲ್ಲವರು ಇದನ್ನು ನೋಡಿ ಸಹಿಸಲಾರದೆ ಹೋದರು. ನರಸಿಂಹವರ್ಮನೆಂಬ ಪಲ್ಲವ ಸಾಮ್ರಾಜ್ಯಧ್ವಜನಾದ ಪ್ರಖ್ಯಾತ ಚಕ್ರವರ್ತಿಯು, ಚೋಳ, ಪಾಂಡ್ಯ, ಕೇರಳ ರಾಜರ ಸಹಾಯವನ್ನು ಹೊಂದಿ, ಅಪಾರವಾದ ಸೈನ್ಯದಿಂದ ಕರ್ಣಾಟಕ ಸಾಮ್ರಾಜ್ಯವನ್ನು ಹೊಕ್ಕು, ವಾತಾಪಿಯನ್ನು ಮುತ್ತಿದನು. ಘೋರಸಂಗ್ರಾಮವಾಯಿತು. ಈ ಎರಡು ಪ್ರಬಲ ಸಾಮ್ರಾಜ್ಯಗಳ ಪ್ರಖ್ಯಾತ ಸಮ್ರಾಜರ ಹೋರಾಟವು ಅದ್ಭುತವೂ, ಮಹತ್ವವೂ ಆಗಿದ್ದಿತು. ವಿಜಯಶ್ರೀಯು ಪುಲಕೇಶಿಯ ಕೈಬಿಟ್ಟಳು. ರಣರಂಗದಲ್ಲಿ ಹೋರಾಡಿ ಪುಲಕೇಶಿಯು (ಕ್ರಿ. ಶ. ೬೪೨ರಲ್ಲಿ) ವೀರಸ್ವರ್ಗವನ್ನು ಸೇರಿದನು. ನರಸಿಂಹವರ್ಮನು ವಾತಾಪಿಯನ್ನು ಧ್ವಂಸಮಾಡಿದನು.

**ಮೊದಲನೆಯ ವಿಕ್ರಮಾದಿತ್ಯ** :—ಚಾಳುಕ್ಯ ಸಾಮ್ರಾಜ್ಯವು ಸಡಲಿತು. ೩೦–೩೫ ವರ್ಷಗಳು ಹೋರಾಡಿದನಂತರ ಪುಲಕೇಶಿಯ ಹಿರಿಯ ಮಗನಾದ ವಿಕ್ರಮಾದಿತ್ಯನು 'ಚಿತ್ರಕಂಠ' ನೆಂಬ ತನ್ನ ಕುದುರೆಯನ್ನೇರಿ, ಕೈಲಿ ಕತ್ತಿಯನ್ನು ಹಿಡಿದು, ರಣಾಂಗಣದಲ್ಲಿ ರಾಜಸಿಂಹನನ್ನು ಗೆದ್ದು, ಪಲ್ಲವರನ್ನು ಒಕ್ಕಲಿಕ್ಕಿ, ಕರ್ಣಾಟಕ ಸಾಮ್ರಾಜ್ಯಕ್ಕೆ ಬಂದೊದಗಿದ್ದ ಆಪತ್ತನ್ನು ಪರಿಹರಿಸಿ, ಅದಕ್ಕೆ ತನ್ನ ತಂದೆಯ ಕಾಲದಲ್ಲಿದ್ದ ಗೌರವವನ್ನೂ, ಸ್ಥಾನವನ್ನೂ, ಸಂಪಾದಿಸಿ

ದನು. ಇವನು ಶತ್ರುಗಳನ್ನು ಹಿಂದಟ್ಟಿಬಂದು ಪಲ್ಲವರ ರಾಜಧಾನಿ ಯಾದ ಕಾಂಚೀನಗರವನ್ನು ಹೊಕ್ಕು ರಾಜಸಿಂಹೇಶ್ವರದೇವಾಲಯ ವನ್ನು ಕಂಡು, ಸಂತೋಷಿಸಿ, ರಾಜಸಿಂಹೇಶ್ವರಕ್ಕೆ ಧನವನ್ನು ಕೊಟ್ಟನು. "ಪಲ್ಲವ ಚಾಳುಕ್ಯರು ಜನ್ಮ ಶತ್ರುಗಳು. ಆದರೂ ಶತ್ರು ಮಿತ್ರರಿಗೆ ಸಮಾನವಾದ ದೇವತಾ ಪೂಜೆಯಲ್ಲಿ ಎಷ್ಟು ಸಂಭ್ರಮ ! ಎಷ್ಟು ಶಾಂತಿ !" ಅಲ್ಲದೆ ಇವನು ಪಲ್ಲವರಿಗೆ ಸಹಾಯ ಮಾಡಿದ ಪಾಂಡ್ಯ ಚೋಳ ಕೇರಳರಿಗೆ ಬುದ್ಧಿಗಲಿಸಿದನು ಈ ವಿಕ್ರಮಾದಿತ್ಯನ ಆಳ್ವಿಕೆಯು ಕ್ರಿ. ಶ ೬೮೦ ರಲ್ಲಿ ಕೊನೆಗಂಡಿತು.

ಅದೇ ವರ್ಷದಲ್ಲೇ ಅವನ ಮಗನಾದ ವಿನಯಾದಿತ್ಯನು ಸಿಂಹಾ ಸನವನ್ನೇರಿದನು. ಇವನೂ ತಂದೆಯಂತೆಯೇ ಶೂರನು. ಪಟ್ಟಕ್ಕೆ ಬಂದ ೧೦-೧೨ ವರ್ಷಗಳಲ್ಲೇ ಮತ್ತೆ ಪಲ್ಲವರು ತಲೆಯೆತ್ತಿದರು. ಆದರೇನು ಅಲ್ಪಕಾಲದಲ್ಲೇ ವಿನಯಾದಿತ್ಯನು ದಂಡಯಾತ್ರೆ ಹೊರಟು ಪಲ್ಲವರನ್ನೂ, ಅವರ ಸಹಾಯಕರನ್ನೂ ಸದೆಬಡಿದು, ಆಳುಪ, ಗಂಗ ರೇ ಮೊದಲಾದವರನ್ನು ಸಾಮಂತರನ್ನಾಗಿ ಮಾಡಿ, ಸಾಮ್ರಾಜ್ಯಕ್ಕೆ ಶತ್ರುಬಾಧೆಯಿಲ್ಲದಂತೆ ಮಾಡಿ ಕ್ರಿ. ಶ. ೬೯೬ ರಲ್ಲಿ ಸ್ವರ್ಗಸ್ಥನಾದನು.

ಇವನ ಮಗನಾದ ವಿಜಯಾದಿತ್ಯನು ಸುಮಾರು ೩೭ ವರ್ಷಗಳ ಕಾಲ ನಿರುಪಾಧಿಕವಾಗಿ ರಾಜ್ಯಭಾರಮಾಡಿದನು. ಇವನ ಕಾಲ ದಲ್ಲೇ ವಾತಾಪಿಯ ಹರಿಹರಾಲಯಗಳೂ, ಸಂಗಮೇಶ್ವರದ ದೇವಾ ಲಯವೂ ಕಟ್ಟಲ್ಪಟ್ಟವು. ಆದರೂ ಪಲ್ಲವರ ಹಾವಳಿಯು ಇವನ ಕಾಲದಲ್ಲೂ ತಪ್ಪಲಿಲ್ಲ. ಒಮ್ಮೆ ವಿಜಯಾದಿತ್ಯನು ಪಲ್ಲವರ ಸೆರೆಯಾ ಳಾಗಿ ಕಾಂಚಿಯಲ್ಲಿದ್ದನು. ಅಲ್ಪಕಾಲದಲ್ಲೇ ಅಲ್ಲಿಂದ ತಪ್ಪಿಸಿಕೊಂಡು ಬಂದನು.

ಕ್ರಿ. ಶ. ೭೩೩ ರಲ್ಲಿ ಪಟ್ಟಾಭಿಷಿಕ್ತನಾದ ಇಮ್ಮಡಿ ವಿಕ್ರಮಾದಿ ತ್ಯನು ವಿಜಯಾದಿತ್ಯನ ಹಿರಿಯಮಗನು. ಇವನು ೧೩ ವರ್ಷಗಳಕಾಲ ಬಹು ವೈಭವದಿಂದ ರಾಜ್ಯವಾಳಿದನು. ಇವನೂ ಪಲ್ಲವರ ಮೇಲೆ ದಂಡೆತ್ತಿಹೋಗಿ, ನಂದಿಪೋತವರ್ಮನನ್ನು ಯುದ್ಧದಲ್ಲಿ ಕೊಂದು.

ರಾಜಧಾನಿಯಾದ ಕಾಂಚಿಯನ್ನು ಹಿಡಿದನು. ಚೋಳ ಪಾಂಡ್ಯರನ್ನೂ ಸೋಲಿಸಿ ದಕ್ಷಿಣ ಸಮುದ್ರತೀರದಲ್ಲಿ ಜಯ ಸ್ತಂಭವನ್ನು ನಟ್ಟನು. ಇವನಿಗೆ ಹೈಹಯ ವಂಶೀಯ ಸೋದರಿಯರಿಬ್ಬರು ರಾಣಿಗಳಾಗಿದ್ದರು.



**ಕಡೆಗಾಲ**:—ಇವನ ಮರಣಾನಂತರ ಮಗನಾದ ಇಮ್ಮಡಿ ಕೀರ್ತಿವರ್ಮನು ಸಿಂಹಾಸನವನ್ನೇರಿದನು. ಇವನು ಹಿಂದಿನವರಷ್ಟು ಅದೃಷ್ಟವಂತನಲ್ಲ. ಉತ್ತರದಲ್ಲಿ ರಾಷ್ಟ್ರಕೂಟರೂ, ದಕ್ಷಿಣದಲ್ಲಿ ಪಲ್ಲವರೂ ಯುದ್ಧಕ್ಕಾರಂಭಿಸಿದರು. ಅಲ್ಲದೆ ಸಾಮಂತರನೇಕರು ಸ್ವತಂತ್ರರಾಗಲೆತ್ನಿಸಿದರು. ಸುಮಾರು ೧೦ ವರ್ಷಗಳಕಾಲ ಶತ್ರುಗಳೊಂದಿಗೆ ಹೋರಾಡಿ, ಕೆಲಕಾಲ ಪಲ್ಲವರ ಸೆರೆಯಾಳಾಗಿದ್ದು, ಅಲ್ಲಿಂದ ತಪ್ಪಿಸಿಕೊಂಡು ಬಂದು, ಮಕ್ಕಳಿಲ್ಲದೆ ಕೀರ್ತಿವರ್ಮನು ಮೃತ್ಯುವಶನಾದನು. ಇವನ ಅನಂತರ ವಿಜಯಾದಿತ್ಯನ ಮಗನಾದ ಭೀಮನು ಪಟ್ಟಕ್ಕೆ ಬಂದನು. ಇಮ್ಮಡಿ ಕೀರ್ತಿವರ್ಮನ ಅನಂತರ ಚಾಳುಕ್ಯರ ಬಲವು ಕುಗ್ಗಿತು. ಅವರ ಸ್ವಾತಂತ್ರ್ಯವು ಮಾಯವಾಯಿತು. ಸಾಮ್ರಾಜ್ಯಸ್ಥಾನವನ್ನು, ಸಮಯಕಾಯುತ್ತಿದ್ದ ರಾಷ್ಟ್ರಕೂಟರು ಆಕ್ರಮಿಸಿದರು.

ಬಾದಾಮಿಯ ಚಾಳುಕ್ಯರು ಸುಮಾರು ಎರಡು ಶತಮಾನಗಳ ಕಾಲ ಸಾಮ್ರಾಜ್ಯ ಸೂತ್ರಗಳನ್ನು ಹಿಡಿದು ಕರ್ಣಾಟಕಕ್ಕೆ ಒಂದು ರೂಪವನ್ನು ಕೊಟ್ಟರು. ಅರಸರೆಲ್ಲರೂ ಶೂರರು, ಮೇಧಾವಿಗಳು. ವೈದಿಕ ಮತೋದ್ಧಾರಕ್ಕಾಗಿ ಇವರು ಬಹು ಪ್ರಯತ್ನಪಟ್ಟರು. ಎರಡನೆಯ ವಿಕ್ರಮಾದಿತ್ಯನ ಕಾಲದಲ್ಲಿ ಜೈನಮತವು ಕೊಂಚ ತಲೆಯೆತ್ತಿತ್ತು. ಚಾಳುಕ್ಯರ ಕಾಲದಲ್ಲಿ ವಾಸ್ತು, ಶಿಲ್ಪ, ಚಿತ್ರಕಲೇತ್ಯಾದಿ ಲಲಿತ ಕಲೆಗಳಿಗೆ ಪೂರ್ಣ ಪ್ರೋತ್ಸಾಹವಿತ್ತು. ಲೋಕವಿಖ್ಯಾತವಾದ ಅಜಂತದ ಚಿತ್ರಕೆಲಸವು ಇಮ್ಮಡಿ ಪುಲಕೇಶಿಯ ಕಾಲದಲ್ಲೇ ಪೂರೈಸಲ್ಪಟ್ಟಿತು. ಈ ಕಾಲದಲ್ಲೇ ದೇಶಭಾಷೆಯಾದ ಕನ್ನಡವು ಒಂದು ವ್ಯಕ್ತಿತ್ವವನ್ನು ಹೊಂದಲಾರಂಭಿಸಿದುದು. ಅನೇಕ ಶಿಲಾಶಾಸನಗಳು ಕನ್ನಡ ಭಾಷೆಯಲ್ಲೇ ಬರೆದಿವೆ. ದೊಡ್ಡ ದೊಡ್ಡ ವರ್ತಕರು

ಹಡಗು ವ್ಯಾಪಾರವನ್ನು ಮಾಡುತ್ತಿದ್ದರು. ದೇಶಾಡಳಿತವು ಅನೇಕ ಸಾಮಂತರ ಕೈಲಿತ್ತು. ರಾಜಪುತ್ರರೂ, ರಾಜವಂಶೀಯರೂ ಸಾಮಾನ್ಯವಾಗಿ ಸಾಮಂತರಾಗಿದ್ದರು. ಹೆಚ್ಚೇಕೆ ಶಾಂತಿ ಮತ್ತು ಸುವ್ಯಾಪ್ತಿಯೇ ರಾಜ್ಯಾಂಗ ವ್ಯವಸ್ಥೆಯ ಮುಖ್ಯ ಧ್ಯೇಯವಾಗಿತ್ತು.

---

## ೨ ತಲಕಾಡಿನ ಗಂಗರಸರು

**ಪೂರ್ವ ವೃತ್ತಾಂತ**:—ಗಂಗರಸರ ಹೆಸರನ್ನು ಹಿಂದೆಯೇ ಕೇಳಿದೆವು. ಇವರು ಇಕ್ಷ್ವಾಕು ವಂಶೀಯರು. ಈ ವಂಶೀಯರು ಉತ್ತರದೇಶದಲ್ಲಿ ಅಯೋಧ್ಯೆಯಲ್ಲಿ ಆಳುತ್ತಿದ್ದರು. ಈ ಕುಲದಲ್ಲಿ ಭರತನೆಂಬುವನು ಹುಟ್ಟಿದನು. ಅವನ ಹೆಂಡತಿಯಾದ ರೋಹಿಣೀ ದೇವಿಯು ಗರ್ಭವತಿಯಾಗಿದ್ದಾಗ ಗಂಗಾಸ್ನಾನಮಾಡಿದಳಾಗಿ, ಹುಟ್ಟಿದ ಶಿಶುವಿಗೆ ಗಂಗಾದತ್ತನೆಂಬ ಹೆಸರು ಬಂತು. ಅಂದಿನಿಂದ ಈ ಮನೆತನಕ್ಕೆ ಗಂಗರೆಂದು ಹೆಸರಾಯಿತು. ಈ ವಂಶದಲ್ಲೇ ಪದ್ಮನಾಭನೆಂಬುವನು ಹುಟ್ಟಿದನು. ಅವನಿಗೆ ದಡಿಗ ಮಾಧವರೆಂಬಿಬ್ಬರು ಸುತರಾದರು.

ರಾಜಕೀಯ ಕಲಹಕಾರಣದಿಂದ ತನ್ನಿಬ್ಬರು ಮಕ್ಕಳು, ಮಗಳು, ಸೋದರಿ ಮತ್ತು ಕೆಲ ಮಂದಿ ಬ್ರಾಹ್ಮಣ ಅನುಯಾಯಿಗಳಿಂದೊಡಗೂಡಿ ಪದ್ಮನಾಭನು ದಕ್ಷಿಣದೇಶಕ್ಕೆ ಬಂದನು. ಬಂದು ಪೆರೂರ ಬಳಿ (ಕಡಪಾ ಜಿಲ್ಲೆಯೊಳಗಿದೆ) ಕಾಣೂರ್ಗಣದ ಜೈನಾಚಾರ್ಯನಾದ ಸಿಂಹನಂದಿ ಮುನಿಯನ್ನು ಸೇವಿಸಿ, ತನ್ನ ವೃತ್ತಾಂತವೆಲ್ಲವನ್ನೂ ತಿಳಿಸಿದನು. ಸಿಂಹನಂದಿಯು ಪದ್ಮಾವತೀದೇವಿಯ ವರಪ್ರಸಾದದಿಂದ ಇವನಿಗೆ ರಾಜ್ಯಲಾಭವನ್ನುಂಟು ಮಾಡಲು ಕೃಪೆಮಾಡಿ, ಮಾಧವನ ಕೈಗೊಂದು ಕರವಾಲವನ್ನಿತ್ತನು. ಕೂಡಲೇ ಮಾಧವನು ಎದುರಿನಲ್ಲಿ ನಿಂತಿದ್ದ ಕಲ್ಲುಕಂಬ ಸ್ತಂಭವನ್ನು ಒಂದೇ ಪೆಟ್ಟಿನಿಂದ ಕತ್ತರಿಸಿದನು. ಸಿಂಹನಂದಿಯು ಆಶ್ಚರ್ಯಚಕಿತನಾಗಿ ಕರ್ಣಿಕಾರ ಹೂಗಳಿಂದ ಕಿರೀಟವನ್ನು ಮಾಡಿ ಮಾಧವನಿಗಿಟ್ಟು

ಅವನಿಗೆ ರಾಜ್ಯಾಭಿಷೇಕ ಮಾಡಿದನು. ಇದು ತಲಕಾಡು ಗಂಗರಸರನ್ನು ಕುರಿತ ಐತಿಹ್ಯ.

ಇದರಲ್ಲಿ ಪಶ್ಚಿಮ ಗಂಗರು ಅಥವಾ ತಲಕಾಡು ಗಂಗರೆಂದೂ, ಪೂರ್ವ ಗಂಗರು ಅಥವಾ ಕಳಿಂಗ ಗಂಗರೆಂದೂ ಎರಡು ಮನೆತನಗಳುಂಟು. ಕಳಿಂಗ ಗಂಗರು ತಲಕಾಡು ಗಂಗ ವಂಶೀಯರೇ ಎಂದು ಅವರ ಶಾಸನಗಳಲ್ಲೇ ಹೇಳಿದೆ. ಈ ಕಳಿಂಗ ಗಂಗರ ಪೂರ್ವೇತಿಹಾಸದಲ್ಲಿ ಯಯಾತಿಯ ಮಗನಾದ ತುರ್ವಸುಗೆ ಮಕ್ಕಳಿಲ್ಲದಿರಲು, ಗಂಗಾದೇವಿಯನ್ನಾರಾಧಿಸಲು ಒಬ್ಬ ಪುತ್ರನು ಹುಟ್ಟಿದನೆಂದೂ, ಅವನಿಗೆ ಗಾಂಗೇಯನೆಂದು ಹೆಸರಿಟ್ಟರೆಂದೂ ಹೇಳಿದೆ. ಅಂದರೆ ಕಳಿಂಗ ಗಂಗರು ಯಾದವ ವಂಶದವರೆಂದ ಹಾಗಾಯಿತು.

**ರಾಜ್ಯಸ್ಥಾಪನೆ** :—ಬಹು ಪುರಾತನ ಕಾಲದಿಂದಲೂ ಗಂಗರಸರು ದಕ್ಷಿಣ ದೇಶದಲ್ಲಿ ರಾಜ್ಯಭಾರ ಮಾಡುತ್ತಿದ್ದರೆಂಬುದಕ್ಕೆ ಟೋಲೆಮಿ, ವರ್ಜಿಲ್, ವೆಲೇರಿಯಸ್, ಫ್ಲಾಕಸ್, ಪ್ಲಿನೀ ಮುಂತಾದ ಪಾಶ್ಚಾತ್ಯಪ್ರವಾಸ ಲೇಖಕರ ಹೇಳಿಕೆಗಳೇ ಸಾಕ್ಷಿಯಾಗಿವೆ. ಕ್ರಿ. ಶ. ಸುಮಾರು ೩ ನೆಯ ಶತಮಾನದಿಂದ ೧೧ ನೆಯ ಶತಮಾನದವರೆಗೆ ಕರ್ಣಾಟಕದ ಯಶೋದುಂದುಭಿಯನ್ನು ಮೊಳಗಿಸಿ ದಕ್ಷಿಣ ದೇಶದಲ್ಲೆಲ್ಲಾ ಖ್ಯಾತಿಹೊಂದಿದ ಪ್ರಮುಖ ಸಮ್ರಾಜರೀ ಗಂಗರಸರು. ಅವರಾಳುತ್ತಿದ್ದ ದೇಶಕ್ಕೆ ಗಂಗವಾಡಿ ೯೬,೦೦೦ ವೆಂದು ಹೆಸರು. ಕುವಳಾಲಪುರವೇ (ಕೋಲಾರ) ಅವರ ಪುರದುರ್ಗ; ನಂದಿಗಿರಿಯೇ (ನಂದೀಬೆಟ್ಟ) ಅವರ ಗಿರಿದುರ್ಗ. ಕುವಳಾಲಪುರದಿಂದಿವರು ತಳವನಪುರ(ತಲಕಾಡು)ಕ್ಕೆ ರಾಜಧಾನಿಯನ್ನು ಯಾವಾಗ ಬದಲಾಯಿಸಿದರೋ ಗೊತ್ತಿಲ್ಲ. ಕ್ರಿ. ಶ. ೮ ನೆಯ ಶತಮಾನದಲ್ಲಿ, ಗಂಗಸಾಮ್ರಾಜ್ಯವು ಕೇವಲ ಉಛ್ರಾಯ ಸ್ಥಿತಿಯಲ್ಲಿದ್ದಾಗ, ಸಮ್ರಾಜ ಶ್ರೀಪುರುಷನು ಮಾನ್ಯಪುರವನ್ನು (ನೆಲಮಂಗಲ ತಾಲ್ಲೂಕಿನಲ್ಲಿರುವ ಮಣ್ಣೆಯೆಂಬ ಗ್ರಾಮ) ಸಾಮ್ರಾಜ್ಯಕೇಂದ್ರಸ್ಥಾನವೆಂದೆಣಿಸಿ ಅದನ್ನು ರಾಜನಗರಿಯನ್ನಾಗಿ ಮಾಡಿದನು. ಜಾಹ್ನವೇಯ ಕುಲದವರಿವರು; ಇವರದು ಕಾಣ್ವಾಯನ ಗೋತ್ರ. ಮದಗಜ

ಲಾಂಛನದವರು. ಪಿಂಛಧ್ವಜದವರು. ಅರಸರೆಲ್ಲರಿಗೂ ಸಾಧಾರಣವಾಗಿ 'ಕೊಂಗುಣಿವರ್ಮಧರ್ಮ ಮಹಾರಾಜಾಧಿರಾಜ' ರೆಂದು ಹೆಸರು. ಮನೆತನದ ಕಡೆಕಡೆಯರಸರಲ್ಲಿ ಒಬ್ಬನಿಗೆ 'ಸತ್ಯವಾಕ್ಯ' ನೆಂಬ ಹೆಸರಿದ್ದರೆ ಇನ್ನೊಬ್ಬನಿಗೆ 'ನೀತಿವಾಕ್ಯ' ನೆಂಬ ಹೆಸರಿತ್ತು.

ಗಂಗರಸರು ಶುದ್ಧ ಇತಿಹಾಸ ದೃಷ್ಟಿಯಿಂದ ನೋಡಿದರೆ ಕ್ಷತ್ರಿಯರಲ್ಲ; ದಕ್ಷಿಣ ದೇಶದವರೆ. ಇವರು ಯಾದವವಂಶಕ್ಕೆ ಸೇರಿದವರು. ಈ ವಂಶದ ಮಾಧವನೆಂಬುವನು. ಕ್ರಿ. ಶ. ಸು. ೨ನೆಯ ಶತಮಾನಾಂತ್ಯದಲ್ಲಿ ಜೈನಾಚಾರ್ಯನಾದ ಸಿಂಹನಂದಿಯ ಆಶೀರ್ವಾದ ಬಲದಿಂದ ಗಂಗವಾಡಿ ರಾಜ್ಯವನ್ನು ಸ್ಥಾಪಿಸಿದನೆಂದು ಕಂಡು ಬರುತ್ತದೆ. ಇವರು ದಕ್ಷಿಣ ದೇಶದಲ್ಲಿ ಆಳುತ್ತಿದ್ದ ಕದಂಬ, ಚಾಳುಕ್ಯ, ರಾಷ್ಟ್ರಕೂಟ, ನೊಳಂಬ ಮತ್ತು ಪೃಸ್ನಟ ರಾಜರೊಂದಿಗೆ ವಿವಾಹ ಬಾಂಧವ್ಯವನ್ನು ಕಲ್ಪಿಸಿಕೊಂಡು, ಮನೆತನಕ್ಕೆ ಮೇಲ್ಮೆಯನ್ನು ಸಂಪಾದಿಸಿಕೊಂಡದ್ದೇ ಅಲ್ಲದೆ ಸಾಮ್ರಾಜ್ಯಕ್ಕೆ ಗೌರವವನ್ನೂ ಉಂಟುಮಾಡಿದರು.

**ಅರಸರು** :—ಮಾಧವನೇ ಈ ವಂಶದ ಮೂಲಪುರುಷನು. ಇವನಿಗೆ ಕೊಂಗುಣಿವರ್ಮನೆಂದೂ ಹೆಸರುಂಟು. ಸಿಂಹನಂದಿಯು ಕೊಟ್ಟ ಕರವಾಲದಿಂದ ಕಂಭವನ್ನು ಕತ್ತರಿಸಿದ ಪರಾಕ್ರಮ ವಿಚಾರವನ್ನಾಗಲೇ ತಿಳಿಸಿದ್ದಾಯಿತು. ಇವನಿಗೆ 'ಜಯಭೂಷಣ' ನೆಂದೂ ಹೆಸರಿತ್ತು. ಇವನ ಮಗನೇ ಇಮ್ಮಡಿ ಮಾಧವನು. ಮಹಾಕವಿಯೆಂದೂ, ನೀತಿಶಾಸ್ತ್ರವಿಶಾರದನೆಂದೂ ತಿಳಿಯ ಬರುತ್ತದೆ. ಇವನ ಮಗನೇ ಹರಿವರ್ಮ ಮಹಾಧಿರಾಜನು. ಇವನ ಕಾಲದಲ್ಲೇ ತಲಕಾಡು ರಾಜಧಾನಿಯಾದುದು. ಇವನಿಗೆ ವಿಷ್ಣುಗೋಪ ಮಹಾರಾಜಾಧಿರಾಜನುದಯಿಸಿ ದೀರ್ಘಕಾಲ ರಾಜ್ಯವಾಳಿದನು. ಇವನ ಮಗನಾದ ತಡಂಗಾಲ ಮಾಧವನು ಕದಂಬ ಕೃಷ್ಣವರ್ಮನ ಮಗಳನ್ನು ಮದುವೆಯಾದನು. ಈ ಕಾಲದಲ್ಲೇ ಗಂಗರಿಗೂ ಪಲ್ಲವರಿಗೂ ಅಂತಃಕಲಹಗಳಿದ್ದಂತೆ ತೋರಬರುತ್ತದೆ.

ಈ ತಡಂಗಾಲ ಮಾಧವನು ಸಾಯುವಾಗ, ಇವನ ಮಗನಾದ ಅವಿನೀತನು ಕೇವಲ ಬಾಲಕನಾಗಿದ್ದನು. ತಾಯ್ಮೊಲೆಯನೂಡುತ್ತಿಪ್ಪಾಗಲೇ ಇವನಿಗೆ ರಾಜ್ಯಾಭಿಷೇಕವಾಯಿತು. ಪ್ರಾಪ್ತವಯಸ್ಕನಾದ ಮೇಲಿವನು ಹಿಂದೆ ತಿಳಿಸಿದಂತೆ ಪುನ್ನಟರಾಜನಾದ ಸ್ಕಂದವರ್ಮನ ಪುತ್ರಿಯನ್ನು ಮದುವೆಯಾದನು. ಇವನೂ ಇವನ ಮಗನಾದ ದುರ್ವಿನೀತನೂ 'ವರ್ಣಾಶ್ರಮಾಚಾರ' ಸಂರಕ್ಷಕರೆಂದು ಹೆಸರನ್ನು ಪಡೆದರು. ಅವಿನೀತನಾಳ್ವಿಕೆಯು ಸು.ಕ್ರಿ.ಶ. ೬೦೫ಕ್ಕೆ ಕೊನೆಗಂಡಿತು. ಅವನ ಅನಂತರ ದುರ್ವಿನೀತನ ಆಳ್ವಿಕೆಯಾರಂಭವಾಯಿತು. ಶಬ್ದಾವತಾರ ಗ್ರಂಥಕಾರನಾದ ಪೂಜ್ಯಪಾದನೇ ಇವನ ರಾಜಗುರು. ಇವನ ಕಾಲದಲ್ಲಿ ಗಂಗ ಸಾಮ್ರಾಜ್ಯವು ಬಹಳವಾಗಿ ವಿಸ್ತರಿಸಲ್ಪಟ್ಟಿತು. ಕೋಯಂಮುತ್ತೂರು. ಸೇಲಂ ಜಿಲ್ಲೆಯ ಹಲವು ಭಾಗಗಳನ್ನು ಆಕ್ರಮಿಸಿದನು; ಪುನ್ನಟರಾಜರಿವನಿಗೆ ಸಾಮಂತರಾದರು ; ಕಾಂಚಿಯರಸನಾದ ಜಯಸಿಂಹನನ್ನು ಸೋಲಿಸಿ ಅವನಿಂದ ಕಾಡುವೆಟ್ಟಿ (ಉತ್ತರ ಆರ್ಕಾಟು ಜಿಲ್ಲೆಯೊಳಗಣ ಕಾರವೇಟಿ ನಗರ)ಯನ್ನು ಸಂಪಾದಿಸಿ ಸೋದರಳಿಯನನ್ನೇ ಅದರಾಡಳಿತಕ್ಕೆ ನೇಮಿಸಿದನು. ಕ್ರಿ. ಶ. ಸು. ೬೫೦ ರವರೆಗೂ ಇವನು ರಾಜ್ಯಭಾರ ಮಾಡಿದಂತೆ ತಿಳಿಯ ಬರುತ್ತದೆ.

ಇವನಿಗೆ ಮುಷ್ಕರನೆಂಬವನು ಹುಟ್ಟಿದನು. ಅವನ ಮಗನೇ ಶ್ರೀವಿಕ್ರಮನು. ಇವನಿಗೆ ಭೂವಿಕ್ರಮ ಶಿವಮಾರರೆಂಬಿಬ್ಬರು ಮಕ್ಕಳಾದರು. ಭೂವಿಕ್ರಮನು ತನ್ನಾಳ್ವಿಕೆಯಲ್ಲಿ ಪಲ್ಲವ ರಾಜನಾದ ಇಮ್ಮಡಿ ನರಸಿಂಹ ಪೋತವರ್ಮನನ್ನು ವಿಳಂದವೆಂಬಲ್ಲಿ ಸೋಲಿಸಿ, ಅವನನ್ನು ಸೆರೆಹಿಡಿದು ಪಲ್ಲವರಾಜ್ಯವನ್ನಾಕ್ರಮಿಸಿ 'ಶ್ರೀವಲ್ಲಭ' ನೆಂಬ ಹೆಸರನ್ನು ಪಡೆದನು. ಕಿರಿಯವನಾದ ಮೊದಲನೆಯ ಶಿವಮಾರನು 'ಶಿಷ್ಟಪ್ರಿಯ' ನೆಂದು ಬಿರುದವನ್ನು ಹಾಕುತ್ತಿದ್ದನು. ನವಕಾಮನೆಂದೂ ಇವನಿಗೆ ಹೆಸರಿತ್ತು. ಇವನಿರುವಾಗಲೇ ಬಹುತರ ಇವನ ಮಗನು ಕಾಲವಾದಂತೆ ತೋರುತ್ತದೆ. ಆದಕಾರಣ ಇವನ ಅನಂ

ತ್ರರ ಮೊಮ್ಮಗನಾದ ಶ್ರೀಪುರುಷನು ಕ್ರಿ. ಶ. ೭೮೦ ಸುಮಾರಿನಲ್ಲಿ ಸಿಂಹಾಸನವನ್ನೇರಿದನು.

**ಶ್ರೀಪುರುಷ** :—ಭೀಮಕೋಪ, ಲೋಕಧೂರ್ತ, ರಾಜಕೇಸರಿ ಯೆಂದಿವನಿಗೆ ಅನೇಕ ಬಿರುದುಗಳಿದ್ದುವು. ಇವನ ಕಾಲದಲ್ಲಿ ಗಂಗಸಾಮ್ರಾಜ್ಯಕ್ಕೆ 'ಶ್ರೀರಾಜ್ಯ' ವೆಂಬ ಹೆಸರಿತ್ತು. ಇವನೇ ಅರಮನೆಯನ್ನು ತಲಕಾಡಿನಿಂದ ಮಣ್ಣೆಗೆ ಬದಲಾಯಿಸಿದವನು. ಗಂಗರಸರಲ್ಲಿ ಇವನು ಮಹಾ ಖ್ಯಾತಿಪುರುಷನು. ಇವನು ಪಲ್ಲವರನ್ನು ಸಂಪೂರ್ಣವಾಗಿ ಸೋಲಿಸಿ, ಅವರ ರಾಜ್ಯಾತಪತ್ರವನ್ನು ಕಿತ್ತುಕೊಂಡದ್ದಲ್ಲದೆ 'ಪೆರ್ಮನಡಿ' ಎಂಬ ಪಲ್ಲವ ಬಿರುದನ್ನು ಕಸುಕೊಂಡನು. ಅವರರಸನಾದ ಹಸ್ತಿಮಲ್ಲನು ಶ್ರೀಪುರುಷನ ಸಾಮಂತನೆಂದೇ ಹೇಳಬೇಕು. ಇವನನ್ನು ಎದುರಿಸುವ ರಾಜರೊಬ್ಬರೂ ದಕ್ಷಿಣದೇಶದಲ್ಲಿರಲಿಲ್ಲ. ಇವನ ಮಕ್ಕಳಾದ ಶಿವಮಾರ, ವಿಜಯಾದಿತ್ಯರು ಸಾಮ್ರಾಜ್ಯದ ಹಲವು ಭಾಗಗಳನ್ನು ಆಳುತ್ತಿದ್ದರು.

**ಗಂಗರಸರೂ ರಾಷ್ಟ್ರಕೂಟರೂ** :—ಇಮ್ಮಡಿ ಶಿವಮಾರನು ಸಿಂಹಾಸನಕ್ಕೆ ಬಂದಾಗ ಮಾನ್ಯಖೇಟದ ರಾಷ್ಟ್ರಕೂಟರು ಬಹು ಪ್ರಬಲರಾಗಿ ದಕ್ಷಿಣದೇಶದ ಸಾಮ್ರಾಜ್ಯಕ್ಕಾಗಿ ಸಾಹಸಪಡುತ್ತಿದ್ದರು. ಶ್ರೀಪುರುಷನ ಅನಂತರ ರಾಷ್ಟ್ರಕೂಟರಾಜನಾದ (ನಿರುಪಮ ಅಥವಾ ಧಾರಾವರ್ಷನು) ಧ್ರುವನು ಗಂಗವಾಡಿಯ ಮೇಲೆ ಧಾಳಿಯಿಟ್ಟು, ಗಂಗರಾಜನನ್ನು, ರಣಾಂಗಣದಲ್ಲಿ ಸೋಲಿಸಿ ಸೆರೆಹಿಡಿದು, ಗಂಗವಾಡಿಯನ್ನಾಕ್ರಮಿಸಿದನು. ಇವನ ಅನಂತರ ಕ್ರಿ. ಶ. ೭೯೩ ರಲ್ಲಿ ರಾಷ್ಟ್ರಕೂಟ ಸಿಂಹಾಸನವನ್ನೇರಿದ ಮುಮ್ಮಡಿ ಗೋವಿಂದನು ಸೆರೆಯಾಳಾಗಿದ್ದ ಗಂಗ ಶಿವಮಾರನನ್ನು ಬಿಡುಗಡೆ ಮಾಡಿದನಾದರೂ, ಇವನು ಮತ್ತೆ ಶತ್ರುತ್ವವನ್ನು ತೋರಿಸಿ, ಎದುರಿಸಲು, ಗೋವಿಂದನು ಚಾಳುಕ್ಯ, ಕಳಚುರ್ಯ ಮುಂತಾದವರ ಸಹಾಯದಿಂದ, ಮುರುಗುಂದದ ಬಳಿಯ ಮಂಚದ ತಾಲ್ಲೂಕಿನಲ್ಲಿರುವ



ಎಲ್ಲೋರದ ಕೈಲಾಸದೇವಾಲಯ [ಕರ್ನಾಟಕದ ಕೈಪಿಡಿ ಪುಟ ೬೦

ಮುದುಗುಂದೂರು) ಬಳಿ, ಯುದ್ಧಮಾಡಿ ಮತ್ತೆ ಅವನನ್ನು ನಿರ್ಬಂಧದಲ್ಲಿಡಬೇಕಾಯಿತು. ಆಗ ಗಂಗವಾಡಿಯು ರಾಷ್ಟ್ರಕೂಟ ಮಾಂಡಲಿಕರಿಂದ ಆಳಲ್ಪಡುತ್ತಿತ್ತು. ಕ್ರಿ. ಶ. ೮೦೨ ಸುಮಾರಿನಲ್ಲಿ ಧಾರಾವರ್ಷನ ಮಗನಾದ ಕಂಭ ಅಥವಾ ರಣಾವಲೋಕನು ಗಂಗವಾಡಿಯಲ್ಲಿ ಆಳುತ್ತಿದ್ದನು. ಕ್ರಿ. ಶ. ೮೧೩ ಸುಮಾರಿನಲ್ಲಿ ಚಾಕಿರಾಜನೆಂಬುವನಾಳುತ್ತಿದ್ದನು.

ಕ್ಷಿಪ್ರದಲ್ಲೇ ಈ ಬಗೆಯ ಅವ್ಯವಸ್ಥೆಯು ಕೊನೆಗಂಡಿತು. ಗಂಗರು ರಾಷ್ಟ್ರಕೂಟರೊಂದಿಗೆ ಸಮಾಧಾನವನ್ನು ಮಾಡಿಕೊಂಡು ತಮ್ಮ ರಾಜ್ಯಾಧಿಕಾರವನ್ನು ತಾವೇ ವಹಿಸಿದರು. ರಾಷ್ಟ್ರಕೂಟರೊಂದಿಗೆ ಸೇರಿ ಪೂರ್ವಚಾಳುಕ್ಯರನ್ನು ಮಟ್ಟಹಾಕಿದರು. ಶಿವಮಾರನ ತರುವಾಯ, ಅವನ ತಮ್ಮನಾದ ವಿಜಯಾದಿತ್ಯನು ಪಟ್ಟಕ್ಕೆ ಬಂದನು.

ವಿಜಯಾದಿತ್ಯನ ಮಗನಾದ ಮೊದಲನೆಯ ರಾಚಮಲ್ಲನು ರಾಜ್ಯಸೂತ್ರಗಳನ್ನು ವಹಿಸಿದಂದಿನಿಂದ ಗಂಗರಸರು ಪ್ರಬಲರಾದರು; ರಾಷ್ಟ್ರಕೂಟರ ಬಂಧನಗಳಿಂದ ಕೊಂಚ ಮಟ್ಟಿಗೆ ಮುಕ್ತರಾದರು. ರಾಚಮಲ್ಲನ ಮರಣಾನಂತರ ಅವನ ಪುತ್ರನಾದ ಎರೆಗಂಗದೇವನು ಅರಸನಾದನು. ಇವನಿಗೆ ನೀತಿಮಾರ್ಗನೆಂದೂ ಹೆಸರುಂಟು. ಇವನ ಸೋದರಿಯನ್ನು ನೊಳಂಬಾಧಿರಾಜನು ಮದುವೆಯಾಗಿದ್ದನು. ನೀತಿಮಾರ್ಗನಿಗೆ ಇಮ್ಮಡಿ ರಾಚಮಲ್ಲನೆಂದೂ ಮೊದಲನೆಯ ಬೂತುಗನೆಂದೂ ಇಬ್ಬರು ಮಕ್ಕಳಿದ್ದರು. ಬಹುತರ ಇವರಿಬ್ಬರೂ ಭಿನ್ನೋದರರು. ನ್ಯಾಯವಾಗಿ ಹಿರಿಯವನಾದ ರಾಚಮಲ್ಲನೆ ರಾಜ್ಯಕ್ಕೆ ಅಧಿಕಾರಿಯು. ಆದರೆ ಬೂತುಗನು ಅಣ್ಣನನ್ನು ಯುದ್ಧದಲ್ಲಿ ಕೊಂದು ತಾನೇ ಸಿಂಹಾಸನವನ್ನೇರಿದನು. ಇವನು ರಾಷ್ಟ್ರಕೂಟರಾಜನಾದ ವದ್ದಿಗ ಅಥವಾ ಅಮೋಘವರ್ಷನ (ಕ್ರಿ. ಶ. ಸು. ೯೩೫-೯೪೦) ಮಗಳಾದ ಕುಂದಕದೇವಿಯನ್ನು ಮದುವೆಯಾದನು. ರಾಷ್ಟ್ರಕೂಟರಿಂದ ಬಳುವಳಿಯಾಗಿ ಇವನಿಗೆ

ಪುಲಿಗೆರೆ ೩೦೦, ಬೆಳುವೊಲ ೩೦೦, ಕಿಸುಕಾಡು ೭೦, ಮತ್ತು ಬಾಗೆನಾಡು ೭೦ ಮುಂತಾದ ಪ್ರದೇಶಗಳು ದೊರೆತವು.

ರಾಷ್ಟ್ರಕೂಟರಿಗೂ ಚೋಳರಿಗೂ ಯುದ್ಧಪ್ರಸಂಗವು ಬಂದೊದಗಲು ಬೂತುಗನು ತನ್ನ ಭಾವನೈದುನನಾದ ಮುಮ್ಮಡಿ ಕೃಷ್ಣನಿಗೆ ಬಲಗೈಯಾಗಿದ್ದು, ತಕ್ಕೋಲದಲ್ಲಿ ನಡೆದ ಯುದ್ಧದಲ್ಲಿ ಚೋಳ ರಾಜನಾದ ರಾಜಾದಿತ್ಯನನ್ನು ತಾನೇ ಕೊಂದನು. ಚೋಳರಾಜಧಾನಿಯಾದ ತಂಜಾವೂರನ್ನು ಆಕ್ರಮಿಸಿದನು. ಇದಕ್ಕೆ ಪ್ರತಿಯಾಗಿ ಕೃಷ್ಣನು ಬೂತುಗನಿಗೆ ಬನವಾಸಿ ೧೨,೦೦೦ ದ ಮಾಂಡಲಿಕತನವನ್ನು ಕೊಟ್ಟನು. ಇವನಿಗೆ ಮರುಳ, ಮಾರಸಿಂಹರೆಂಬಿಬ್ಬರು ಮಕ್ಕಳಿದ್ದರು.

**ಗಂಗರಸರೂ ಚೋಳರೂ** :—ಮುಮ್ಮಡಿ ಕೃಷ್ಣನ ಮಗಳನ್ನು ಮರುಳನು ಮದುವೆಯಾದನು. ಮರುಳನ ತರುವಾಯ ಇವನ ತಮ್ಮನಾದ ಮಾರಸಿಂಹನು ಪಟ್ಟಕ್ಕೆ ಬಂದನು. ಈ ಕಾಲಕ್ಕೆ ಚಾಳುಕ್ಯರ ಹೊಡೆತದಿಂದ ರಾಷ್ಟ್ರಕೂಟರು ಬಲಹೀನರಾಗುತ್ತಿದ್ದರು. ಚೋಳರು ಗಂಗರಸರ ಮೇಲೆ ದ್ವೇಷವನ್ನು ಸಾಧಿಸಲೆಂದು ಸಂಧಿಯನ್ನು ಕಾಯುತ್ತಿದ್ದರು. ಮಾರಸಿಂಹನ ತರುವಾಯ ರಾಚಮಲ್ಲನು ರಾಜನಾದನು. ಇವನ ದಂಡನಾಯಕನಾದ ಚಾಮುಂಡರಾಯನೇ ಶ್ರವಣಬೆಳ್ಗೊಳದಲ್ಲಿ ಗೋಮಟೇಶ್ವರ ಸ್ವಾಮಿಯನ್ನು ಪ್ರತಿಷ್ಠೆಮಾಡಿದವನು. ರಾಚಮಲ್ಲನ ತಮ್ಮನಾದ ರಕ್ಕಸಗಂಗನು ಕೊಡಗಿನ ಆಡಳಿತವನ್ನು ನಡೆಸುತ್ತಿದ್ದು ಅಣ್ಣನ ಮರಣಾನಂತರ ಅವನೇ ರಾಜನಾದನು. ಆದರೇನು. ಇವನ ಹಿರಿಯರಂತಿವನು ಅದೃಷ್ಟಶಾಲಿಯಲ್ಲ. ಚೋಳರು ಗಂಗವಾಡಿಯನ್ನು ಹೊಕ್ಕರು. ಚೋಳ ಚಕ್ರವರ್ತಿ ರಾಜರಾಜನ ಮಗನಾದ ರಾಜೇಂದ್ರ ಚೋಳನು ಗಂಗ ರಾಜಧಾನಿಯಾದ ತಲಕಾಡನ್ನು ಕ್ರಿ. ಶ. ಸು. ೧೦೦೪ ರಲ್ಲಿ ಮುತ್ತಿದನು. ನಿರ್ವೀರ್ಯನಾದ ಗಂಗರಾಜನು ಪ್ರಾಣಭೀತಿಯಿಂದ, ರಾಜ್ಯಭ್ರಷ್ಟನಾಗಿ ಓಡಿ ಚಾಳುಕ್ಯರ ಮತ್ತು ಹೊಯ್ಸಳರ ಆಶ್ರಯವನ್ನು ಸೇರಿದನು.

ಚಾಳುಕ್ಯರೇ ಗಂಗವಾಡಿಗೆ ಹೇಗೆ ಅರಸರಾದರೆಂಬುದನ್ನು ಮುಂದೆ ತಿಳಿಯುವೆವು. ಗಂಗರಸರು ಆಗ ಅವರ ಸಾಮಂತರಾಗಿದ್ದು ಕೊಂಡು ಅಲ್ಲಲ್ಲಿ ಆಳುತ್ತಿದ್ದರು.

---

## ೩ ಮಾನ್ಯಖೇಟದ ರಾಷ್ಟ್ರಕೂಟರು

ಚಾಳುಕ್ಯರಾಜ್ಯಸ್ಥಾಪನಾ ವಿಚಾರ ಕಾಲದಲ್ಲಿ ಈ ರಾಷ್ಟ್ರಕೂಟರ ಪ್ರಸಂಗವು ಬಂದಿತ್ತು. ಇವರ ಪ್ರಾಚೀನತೆಯನ್ನು ಕುರಿತು ಹಿಂದೆಯೇ ಕೊಂಚ ತಿಳಿಸಿದೆವು. ಇವರಾಳುತ್ತಿದ್ದ ದೇಶಕ್ಕೆ ಸಾಧಾರಣವಾಗಿ 'ರಟ್ಟಪಾಡಿ'ಯೆಂದೂ, ಈ ಅರಸರಿಗೆ ರೂಢಿಯಾಗಿ 'ವಲ್ಲಭ' ಅಥವಾ 'ಬಲ್ಲಹ'ರೆಂದೂ ಹೆಸರಿತ್ತು. ಮೊಟ್ಟಮೊದಲಿವರ ರಾಜಧಾನಿಯು ನಾಸಿಕ್ ಜಿಲ್ಲೆಯೊಳಗಿನ ಮಯೂರಖಂಡಿ. ೯ನೆಯ ಶತಮಾನದಿಂದ ನಿಜಾಂ ಸರಕಾರದೊಳಗಿರುವ ಮಾನ್ಯಖೇಟವು ಅವರ ಸ್ಥಿರವಾದ ರಾಜಧಾನಿಯಾಯಿತು. ಬಾದಾಮಿಯ ಚಾಳುಕ್ಯರಿಂದ ಪೆಟ್ಟುತಿಂದ ಇವರು ಸ್ವಂತ್ರರಾಗಲು ಸಮಯಕಾಯುತ್ತಿದ್ದರು. ಇಮ್ಮಡಿ ಪುಲಕೇಶಿಯನ್ನು ಪಲ್ಲವ ನರಸಿಂಹವರ್ಮನು ಎದುರಿಸಿದಾಗ ಇವರು ಪಟ್ಟ ಪ್ರಯತ್ನಗಳು ಸಫಲವಾಗಲಿಲ್ಲ. ಇಮ್ಮಡಿ ಕೀರ್ತಿವರ್ಮನ ಕಾಲದಲ್ಲಿ (ಸು. ಕ್ರಿ. ಶ. ೭೫೩-೭೫೮ ರಲ್ಲಿ) ರಾಷ್ಟ್ರಕೂಟರಾಜನಾದ ಇಮ್ಮಡಿ ದಂತಿದುರ್ಗ ಅಥವಾ ದಂತಿವರ್ಮನು, ಚಾಳುಕ್ಯರನ್ನು ಹೊಡೆದೋಡಿಸಿ 'ಪೃಥ್ವೀವಲ್ಲಭ'ನೆಂಬ ಬಿರುದನ್ನು ಪಡೆದನು. ಅಂದಿನಿಂದ ಮೊದಲಾದ ರಾಷ್ಟ್ರಕೂಟ ಕೀರ್ತಿಯು ಗಂಗರನ್ನು, ಚೋಳರನ್ನು, ಜಯಿಸುವುದರಲ್ಲಿ ವಿಸ್ತಾರವಾಯಿತು.

**ಅರಸರು** :—ದಂತಿವರ್ಮನ ತರುವಾಯ ಅವನ ಚಿಕ್ಕಪ್ಪನಾದ ಮೊದಲನೆಯ ಕೃಷ್ಣನು ಪಟ್ಟಕ್ಕೆ ಬಂದನು. ರಾಜ್ಯವನ್ನು ಸ್ಥಿರಪಡಿಸಲು ಇವನು ಚಾಳುಕ್ಯರೊಂದಿಗೆ ಹೋರಾಡಬೇಕಾಗಿ

ಬಂತು. ಜಯಲಕ್ಷ್ಮಿಯು ಚಾಳುಕ್ಯರ ಕೈಬಿಟ್ಟಳಾಗಿ ಕೃಷ್ಣನೇ ಜಯಶೀಲನಾದನು. ಇವನಿಗೆ ಅಕಾಲವರ್ಷನೆಂದೂ, ಶುಭತುಂಗನೆಂದೂ ಹೆಸರಿತ್ತು. ಲೋಕವಿಖ್ಯಾತವಾದ ಎಲ್ಲೋರದ ಕೈಲಾಸ ದೇವಾಲಯವನ್ನು ಕಟ್ಟಿಸಿದವನಿವನೆ. ಕೃಷ್ಣನಿಗೆ ಗೋವಿಂದನೆಂದೂ ಧ್ರುವನೆಂದೂ ಇಬ್ಬರು ಮಕ್ಕಳಿದ್ದರು. ತಂದೆಯ ತರುವಾಯ ಹಿರಿಯವನು ಇಮ್ಮಡಿ ಗೋವಿಂದನೆಂಬ ಹೆಸರಿನಿಂದ ಸಿಂಹಾಸನವನ್ನೇರಿದನು. ಅತ್ಯಲ್ಪ ಕಾಲದಲ್ಲೇ ಸೋದರರಿಬ್ಬರಿಗೂ ಮನಸ್ತಾಪವುಂಟಾಗಿ ಯುದ್ಧವಾಯಿತು. ಅವರಲ್ಲಿ ಕಿರಿಯವನಾದ ಧ್ರುವನೇ ವಿಜಯಿಯಾಗಿ ಅಣ್ಣನನ್ನು ಸಿಂಹಾಸನದಿಂದ ತಳ್ಳಿ ತಾನೇ ಪಟ್ಟಕ್ಕೆ ಬಂದನು. ಇವನಿಗೆ ಮೊದಲನೆಯ ನಿರುಪಮನೆಂದೂ ಅಲ್ಲದೆ ಧೋರ, ಇದ್ಧತೇಜ, ಧಾರಾವರ್ಷ, ಕಲಿವಲ್ಲಭನೆಂದೂ ಅನೇಕ ಹೆಸರುಗಳಿದ್ದುವು. ಇವನು ಗಂಗರನ್ನು ಸೋಲಿಸಿ, ಅವರರಸರನ್ನು ಸೆರೆಯಲ್ಲಿಟ್ಟನು, ಪಲ್ಲವರನ್ನೂ ಯುದ್ಧದಲ್ಲಿ ಸೋಲಿಸಿದನು.

ಧ್ರುವನಿಗೆ ಗೋವಿಂದ, ಇಂದ್ರರೆಂಬಿಬ್ಬರು ಮಕ್ಕಳಿದ್ದರು. ಧ್ರುವನ ತರುವಾಯ ಮೂರನೆಯ ಗೋವಿಂದನೆಂಬ ಹೆಸರಿನಿಂದ ಜ್ಯೇಷ್ಠಪುತ್ರನೇ ಕ್ರಿ. ಶ. ಸು. ೭೯೪ ರಲ್ಲಿ ಗದ್ದುಗೆಯನ್ನೇರಿದನು. ಇವನು ಪ್ರಭೂತವರ್ಷ, ಜಗತ್ತುಂಗ, ವಲ್ಲಭನರೇಂದ್ರ ಎಂಬನೇಕ ಬಿರುದ ಪ್ರಖ್ಯಾತನಾಗಿದ್ದನು. ಇವನಿಗೆ ಚಾಮುಂಡಬ್ಬೆಯೆಂಬ ಪಟ್ಟದರಸಿಯಿದ್ದಳು. ಇದರಿಂದ ಇವನು ಗಂಗರೊಂದಿಗೆ ಬಾಂಧವ್ಯವನ್ನು ಬೆಳೆಸಿ ರಟ್ಟಪಾಡಿ ಗಂಗವಾಡಿಯೆಂಬ ಎರಡು ಕರ್ನಾಟಕ ರಾಜ್ಯಗಳಿಗೂ ಹೆಚ್ಚು ಸಾಮೀಪ್ಯಸಂಬಂಧವನ್ನು ಉಂಟುಮಾಡಿದನು. ಇವನು ಪಟ್ಟಕ್ಕೆ ಬಂದ ಹೊಸದರಲ್ಲಿ ಗುಜರಾತು ಮತ್ತು ಮಧ್ಯಪ್ರಾಂತಗಳಲ್ಲಿ ಶತ್ರುಗಳನ್ನು ಎದುರಿಸಬೇಕಾಗಿ ಬಂತು. ಅನಂತರ ಪೂರ್ವದಲ್ಲಿ ವೆಂಗೀ ಚಾಳುಕ್ಯರನ್ನೂ, ದಕ್ಷಿಣದಲ್ಲಿ ಪಲ್ಲವರನ್ನೂ ಎದುರಿಸಿದನು. ಪಲ್ಲವರಿಂದ ಕಪ್ಪವನ್ನು ತೆಗೆದುಕೊಂಡನು. ಏಸಿಲ್ಲವೆಂದರೂ ಇವನ ರಾಜ್ಯವು ಪೂರ್ವ ಸಮುದ್ರದಿಂದ ಪಶ್ಚಿಮ ಸಮುದ್ರದವರೆಗೂ, ವಿಂಧ್ಯದಿಂದ ತುಂಗಭದ್ರೆಯವರೆಗೂ ಹಬ್ಬಿತ್ತು.

ಇವನ ಕಾಲದಲ್ಲಿ ರಾಜ್ಯವು ವಿಭಾಗಿಸಲ್ಪಟ್ಟು, ತಮ್ಮನಾದ ಇಂದ್ರನು ಲಾಟ ದೇಶಾಧಿಪನಾಗಿ ಕಳುಹಿಸಲ್ಪಟ್ಟನು.

**ಚಾಳುಕ್ಯರ ಸ್ವಾತಂತ್ರ್ಯೋದ್ಯಮ** :—ಗೋವಿಂದನ ತರುವಾಯ ಕ್ರಿ. ಶ. ಸು. ೮೧೫ ರಲ್ಲಿ ಅವನ ಮಗನಾದ ಮೊದಲನೆಯ ಅಮೋಘವರ್ಷನು ಸಿಂಹಾಸನವನ್ನೇರಿದನು. ಇವನಿಗೆ ನೃಪತುಂಗನೆಂದೂ ಹೆಸರುಂಟು. ಇವನ ಕಾಲದಲ್ಲಿ ಚಾಳುಕ್ಯರು ಕಳೆದುಕೊಂಡ ರಾಜ್ಯವನ್ನು ಸಂಪಾದಿಸಲು ಪ್ರಯತ್ನಿಸಿದರು. ವಿಂಗವಳ್ಳಿಯೆಂಬಲ್ಲಿ ಇವರೀರ್ವರಿಗೂ ಯುದ್ಧವಾಗಿ, ಅದರಲ್ಲಿ ಚಾಳುಕ್ಯರು ಸೋತರು. ಅನಂತರ ನೃಪತುಂಗನೊಂದಿಗೆ ಸಂಧಿಯನ್ನು ಮಾಡಿಕೊಂಡರು.

**ನೃಪತುಂಗ** :—ಇವನಿಗೆ ಮಹಾರಾಜಶರ್ವ, ಅತಿಶಯಧವಳ, ಶ್ರೀಪೃಥ್ವೀವಲ್ಲಭ ಎಂಬನೇಕ ಹೆಸರುಗಳಿದ್ದುವು. ಇವನು ರಾಜ್ಯಾಡಳಿತವನ್ನು ಕೈಕೊಳ್ಳುವಾಗ ರಾಜ್ಯಕ್ಷೇಮಕ್ಕೆ ಹಲವು ಅಭ್ಯಂತರಗಳಿದ್ದುವು. ಇವನವುಗಳನ್ನು ತನ್ನ ಬಲದಿಂದ ನಿವಾರಿಸಿದನು. ಮಾನ್ಯಖೇಟವನ್ನು ರಾಜಧಾನಿಯನ್ನಾಗಿ ಮಾಡಿದನು. ರಾಜ್ಯವನ್ನು ಕೊಂಕಣ, ಮಂತ್ರವಾಡಿ, ಬನವಾಸಿ, ಬಾಗಳಿ, ಕುಂದರಗೆ, ಪುರಿಗೆರೆ ಮೊದಲಾಗಿ ವಿಭಾಗಿಸಿ ಅಲ್ಲಲ್ಲಿಸಾಮಂತ ಪ್ರಭುಗಳನ್ನು ನೇಮಿಸಿ ಬಹು ವಿಚಕ್ಷಣೆಯಿಂದ ರಾಜ್ಯಭಾರ ಮಾಡುತ್ತಿದ್ದನು. ತನ್ನ ಮಗನಾದ ಕೃಷ್ಣನೂ ಕೂಡ ಯುವರಾಜನಾಗಿ ದೇಶಾಡಳಿತದಲ್ಲಿ ಹೆಚ್ಚು ಆಸಕ್ತಿಯಿಂದ ಕೆಲಸ ಮಾಡುತ್ತಿದ್ದನು. ಇವನು ತನ್ನ ಹಿರಿಯರಂತೆ ಗಂಗರನ್ನು ದ್ವೇಷಿಸದೆ ಅವರೊಂದಿಗೆ ಮೈತ್ರಿಯನ್ನು ಬೆಳೆಸಿದನು.

ಅಮೋಘವರ್ಷನು ವಿದ್ಯಾಪಕ್ಷಪಾತಿ. ಇವನ ಆಸ್ಥಾನದಲ್ಲಿ ಅನೇಕ ಕವಿಗಳಿದ್ದರು. ಇವನೇ ಸ್ವಯಂ ಕವಿಯಾಗಿದ್ದನು. ಕನ್ನಡದಲ್ಲಿ ಕವಿರಾಜ ಮಾರ್ಗವನ್ನು ಬರೆದು ಕರ್ಣಾಟಕಲಕ್ಷಣ ಗ್ರಂಥಕರ್ತರಿಗೆ ಆಚಾರ್ಯನಾಗಿರುವನು. ಕನ್ನಡದಲ್ಲಿ ಮಾತ್ರವೇ ಅಲ್ಲದೆ ಇವನು ಸಂಸ್ಕೃತದಲ್ಲಿ ರತ್ನಮಾಲಿಕಾ ಅಥವಾ ಪ್ರಶ್ನೋತ್ತರಮಾಲಾ ಎಂಬ

ಗ್ರಂಥವನ್ನು ಬರೆದು 'ಸರಸ್ವತೀ ತೀರ್ಥಾವತಾರ' ನೆಂಬ ಹೆಸರನ್ನು ಪಡೆದನು. ಈ ರಾಜರ್ಷಿಯು ಸುಮಾರು ೬೪ ವರ್ಷಗಳವರೆಗೆ ರಾಜ್ಯಂಗೆಯ್ದು, ತನ್ನವೃದ್ಧಾಪ್ಯದಲ್ಲಿ, ಮಗನಾದ ಕೃಷ್ಣನಿಗೆ ರಾಜಾಭಿಷೇಕವನ್ನು ಮಾಡಿ ತಾನು ವಾನಪ್ರಸ್ಥವನ್ನು ಸ್ವೀಕರಿಸಿದನು.

ಇಮ್ಮಡಿ ಕೃಷ್ಣನು ಕ್ರಿ. ಶ. ಸು. ೮೭೮ ರಲ್ಲೇ ಪಟ್ಟಕ್ಕೆ ಬಂದನು. ಇವನು ತನ್ನ ತಂದೆಯಂತೆಯೇ ಕವಿಜನಾಶ್ರಯನೂ. ವಾಙ್ಮಯ ಪ್ರಚಾರಕನೂ ಆಗಿದ್ದನು.

**ರಾಷ್ಟ್ರಕೂಟರೂ ಪೂರ್ವಚಾಲುಕ್ಯರೂ:**—ಇವನ ಕಾಲದಲ್ಲೂ ವೆಂಗೀ ಚಾಳುಕ್ಯರೊಂದಿಗೆ ಕಲಹವು ನಡೆಯುತ್ತಲೇ ಇತ್ತು. ವೆಂಗೀ ಚಾಳುಕ್ಯರಾಜನಾದ ಮುಮ್ಮಡಿ ಗುಣಕ ವಿಜಯಾದಿತ್ಯನು ಕೃಷ್ಣನನ್ನು ಹೆದರಿಸಿ, ಮಾನ್ಯಖೇಟವನ್ನು ಸುಟ್ಟನೆಂದು ಹೇಳಿಕೊಂಡಿರುವನು. ಕೃಷ್ಣನು ಚೇದಿ ಅಥವಾ ಕಾಲಚುರ್ಯ ರಾಜನಾದ ಕಕ್ಕಲನ ಮಗಳನ್ನು ಮದುವೆಯಾಗಿ, ಕಕ್ಕಲನ ಸಹಾಯದಿಂದ (ವೆಂಗೀ) ಪೂರ್ವ ಚಾಳುಕ್ಯರನ್ನು ಸೋಲಿಸಿ, ಅವರ ರಾಜ್ಯವನ್ನಾಕ್ರಮಿಸಿದನು. ಕ್ರಿ. ಶ. ೯೧೪ ಸುಮಾರಿನಲ್ಲಿ ಇಮ್ಮಡಿ ಕೃಷ್ಣನ ಆಳ್ವಿಕೆಯು ಕೊನೆಗಂಡಿತು. ಇವನಿಗೆ ಜಗತ್ತುಂಗನೆಂಬ ಬಿರುದುಳ್ಳ ಮಗನೊಬ್ಬನಿದ್ದನು. ಇವನು ಸಿಂಹಾಸನದ ಮೇಲೆ ಕೂತಂತೆ ಕಾಣಬರುವುದಿಲ್ಲ. ಜಗತ್ತುಂಗನ ಹಿರಿಯ ಮಗನಾದ ಮುಮ್ಮಡಿ ಇಂದ್ರನು ಕ್ರಿ. ಶ. ೯೧೫ ಸುಮಾರಿನಲ್ಲಿ ರಾಜ್ಯಭಾರವನ್ನು ವಹಿಸಿದನು. ಇವನಿಗೆ ನಿತ್ಯವರ್ಷನೆಂದೂ ಹೆಸರುಂಟು. ಇವನಿಗೂ ವಿಜಾಂಬಾ ಎಂಬ ಕಲಚುರಿರಾಜ ಪುತ್ರಿಯೇ ಪಟ್ಟದರಸಿಯಾಗಿದ್ದಳು. ಇವನಿಗೆ ಇಬ್ಬರು ಮಕ್ಕಳಾದರು. ಅವರಲ್ಲಿ ಕಿರಿಯವನಾದ ನಾಲ್ವಡಿ ಗೋವಿಂದನು ಅಣ್ಣನಾದ ಇಮ್ಮಡಿ ಅಮೋಘವರ್ಷನನ್ನು ಓಡಿಸಿ, ಸುವರ್ಣವರ್ಷ, ವಲ್ಲಭನರೇಂದ್ರ ಎಂಬ ಬಿರುದುಗಳನ್ನು ವಹಿಸಿ ತಾನೇ ಪಟ್ಟಕ್ಕೆ ಬಂದನು. ಇವನಿಗೆ ಗೊಜ್ಜಿಗನೆಂದೂ ಹೆಸರುಂಟು. ಇವನಿಗೂ ಪೂರ್ವಚಾಳುಕ್ಯರಾಜರಾದ ಮೊದಲನೆಯ ಅಮ್ಮ, ಇಮ್ಮಡಿ ಚಾಳುಕ್ಯಭೀಮ ಮೊದಲಾದವರಿಗೂ ಅನೇಕ ಯುದ್ಧಗಳು ನಡೆ

ದುವು. ಅಲ್ಲದೆ ಪಶ್ಚಿಮ ಚಾಳುಕ್ಯರ ಒಂದೆರಡು ಸುಸೆತನಗಳೂ ಇವನನ್ನು ಎದುರಿಸಿದವು. ಆದರೇನು ಇವನು ಶತ್ರುಗಳೆಲ್ಲರನ್ನೂ ನಿಗ್ರಹಿಸಿ 'ವೀರನಾರಾಯಣ', 'ನೃಪತಿ ತ್ರಿಣೇತ್ರ', 'ಸಾಹಸಾಂಕ' ಎಂಬನೇಕ ಬಿರುದುಗಳನ್ನು ಪಡೆದನು. ಇವನಾಳ್ವಿಕೆಯ ಕಡೆಕಡೆಗೆ ಗೊಜ್ಜಿಗನು ಪ್ರಜೆಗಳ ಪ್ರೀತಿ ವಿಶ್ವಾಸಗಳನ್ನು ಹೋಗಲಾಡಿಸಿಕ್ಕೊಂಡನು ; ರಾಜ್ಯವ್ಯವಸ್ಥೆಯ ಬಿಂಕವು ತಪ್ಪಿತು ; ತಾನೂ ದುರಾಚಾರಗಳಿಗೆ ಬಿದ್ದು ಮಕ್ಕಳಿಲ್ಲದೆ ಮೃತ್ಯುವಶನಾದನು.

ರಾಜ್ಯವು ಗೋವಿಂದನ ಚಿಕ್ಕಪ್ಪನ (ಇಮ್ಮಡಿ ಜಗತ್ತುಂಗ) ಮಗನಾದ ವಡ್ಡಿಗನ ವಶವಾಯಿತು. ಇವನು ಕಲಚುರಿ ಯುವರಾಜನ ಮಗಳಾದ ಕುಂದಕದೇವಿಯನ್ನು ಮದುವೆಯಾದನು. ಇವನ ಮಗಳೊಬ್ಬಳನ್ನು ಗಂಗರಾಜನಾದ (ಸತ್ಯವಾಕ್ಯ ಕೊಂಗುಣಿವರ್ಮ ಪೆರ್ಮನಡಿ) ಬೂತುಗನಿಗೆ ಕೊಟ್ಟು ವಿವಾಹಮಾಡಿದನೆಂದು ಹಿಂದೆಯೇ ತಿಳಿಸಿದ್ದಾಯಿತು. ಆ ಸಂದರ್ಭದಲ್ಲಿ ವಡ್ಡಿಗನು ಮಗಳಿಗೆ ಪುರಿಗೆರೆ ೩೦೦, ಬೆಳ್ವೊಲ ೩೦೦, ಕಿಸುಕಾಡು ೭೦, ಬಾಗೆನಾಡು ೭೦ ಇವನ್ನು ಬಳುವಳಿಯಾಗಿ ಕೊಟ್ಟನು.

**ಮುಮ್ಮಡಿ ಕೃಷ್ಣ** :—ಕೃಷ್ಣನು ಕ್ರಿ. ಶ. ಸು. ೯೪೦ ರಲ್ಲಿ ರಾಜ್ಯಾಭಿಷೇಕವನ್ನು ಹೊಂದಿದಂತೆ ಕಾಣಬರುತ್ತದೆ. ಇವನ ಕಾಲದಲ್ಲಿ ಕರ್ಣಾಟಕ ರಾಜ್ಯವು ಸಕಲ ಸಾಮ್ರಾಜ್ಯ ವೈಭವದ ಉಚ್ಛಸ್ಥಾನವನ್ನು ಹೊಂದಿತು. ಕೃಷ್ಣನು ದರ್ಪದಿಂದಲೂ, ರಾಜನೀತಿ ನೈಪುಣ್ಯದಿಂದಲೂ ಸುಮಾರು ೩೦ ವರ್ಷಗಳ ಕಾಲವಾಳಿ ದಕ್ಷಿಣ ಹಿಂದೂಸ್ಥಾನದಲ್ಲೆಲ್ಲ ಕರ್ಣಾಟಕಕ್ಕೊಂದು ವಿಶೇಷ ಗೌರವಸ್ಥಾನವನ್ನು ಕಲ್ಪಿಸಿದನು. ಕೀರ್ತಿಮಾರ್ತಂಡೇತ್ಯಾದಿ ಬಿರುದುಗಳಿಂದ ವನ ಕ್ಷಾತ್ರವೀರ್ಯವೂ, ಪರಮಮಾಹೇಶ್ವರೇತ್ಯಾದಿ ಬಿರುದುಗಳಿಂದಿವನ ಧರ್ಮನಿಷ್ಠೆಯೂ, ಕಬ್ಬಿಗೇತ್ಯಾದಿ ಬಿರುದುಗಳಿಂದಿವನ ವಿದ್ಯಾಪಕ್ಷಪಾತಿತ್ವವೂ ಸ್ಪಷ್ಟವಾಗುತ್ತದೆ. ವಿಜಯಶ್ರೀಯು ಇವನನ್ನು ಹೇಗೆ ಒಲಿದಿದ್ದಳೋ ವಿದ್ಯಾಶ್ರೀಯೂ ಇವನನ್ನು ಹಾಗೆಯೇ ಒಲಿದಿದ್ದಳು.

ಕವಿ ಪೊನ್ನನಿಗಿವನು 'ಕವಿಚಕ್ರವರ್ತಿ' ಯೆಂಬ ಬಿರುದನ್ನು ಕೊಟ್ಟನು.

ಕೃಷ್ಣನು ಉತ್ತರದೇಶಕ್ಕೆ (ಮಧ್ಯಪ್ರಾಂತ್ಯ) ದಂಡಯಾತ್ರೆ ಹೊರಟು ತನ್ನ ಬಂಧುವಾದ, ಕಲಚುರ್ಯ ಹಿಂಸಕನಾದ ಗುರ್ಜರ ರಾಜನನ್ನು ಹೊಡೆದು ಹಿಡಿದು ದಂಡಿಸಿದನೆಂಬುದು ಮನ್ನೆಮನ್ನೆ ಮೈಹಾರದಲ್ಲಿ ದೊರೆತ ಅವನ ಪ್ರಶಸ್ತಿಶಾಸನದಿಂದ ವಿಶದವಾಗುತ್ತದೆ. ದಕ್ಷಿಣದಲ್ಲಿ ಪ್ರತಿಘಟಿಸಿದ ಗಂಗರನ್ನು ಮಟ್ಟಹಾಕಿದನೆಂದು ಹಿಂದೆಯೇ ತಿಳಿದೆವು. ಇವನು ಪಲ್ಲವನನ್ನು ಕೈಸೆರೆಹಿಡಿದನು, ಅವರ ರಾಜನಗರಿಯಾದ ಕಾಂಚೀಪುರವನ್ನು ಆಕ್ರಮಿಸಿದನು.

**ರಾಷ್ಟ್ರಕೂಟರೂ ಚೋಳರೂ**:—ಕ್ರಿ. ಶ. ೧೦ನೆಯ ಶತಮಾನದಲ್ಲಿ ರಾಷ್ಟ್ರಕೂಟರೂ, ಚೋಳರೂ ದಕ್ಷಿಣದೇಶದ ಸಾಮ್ರಾಜ್ಯಕ್ಕಾಗಿ ಬಹುಕಾಲ ಹೋರಾಡಿದರು. ಮುಮ್ಮಡಿ ಗೋವಿಂದನು ಪಲ್ಲವರಾಜನಾದ ಅಣ್ಣಿಗನಿಂದ ಕಪ್ಪವನ್ನೊಪ್ಪಿಸಿಕೊಂಡನು. ಮೊದಲನೆಯ ಅಮೋಘವರ್ಷನು ಚೋಳಪರಾಂತಕನ ಸಾಮಂತನಾಗಿದ್ದ ಗಂಗರಾಜನಾದ ಇಮ್ಮಡಿ ಪೃಥ್ವೀಪತಿಯ ರಾಜ್ಯವನ್ನು ವಶಮಾಡಿಕೊಂಡನು. ಆದರೆ ಮುಮ್ಮಡಿ ಕೃಷ್ಣನು ಪಾಂಡ್ಯರ ಮೇಲೆ ವಿಜಯಧ್ವಜವನ್ನು ಹೂಡಿ, ಸಿಂಹಳ ದೇಶೀಯರನ್ನೂ ಸಹ ದಂಡಿಸಿ, ದಕ್ಷಿಣದೇಶದಲ್ಲಿ ಎಲ್ಲೆಲ್ಲೂ ಪ್ರಬಲರಾಗಿದ್ದ ಚೋಳರನ್ನು ಜಯಿಸಿ, ಅವರ ರಾಜ್ಯವನ್ನು ತನ್ನ ಸಾಮಂತರಿಗೆ ಹಂಚಿದನು. ರಾಮೇಶ್ವರದ ಬಳಿಯೊಂದು ರಣಗಂಬವನ್ನು ನೆಡಿಸಿದನು.

ಕೃಷ್ಣನಿಗೂ ಚೋಳರಿಗೂ ನಡೆದ ಯುದ್ಧಗಳಲ್ಲೆಲ್ಲ ಕ್ರಿ. ಶ. ೯೪೯–೫೦ನ ಸುಮಾರಿನಲ್ಲಿ ತಕ್ಕೋಲವೆಂಬ ಸ್ಥಳದಲ್ಲಿ ನಡೆದ ಘೋರ ಯುದ್ಧವು ಪ್ರಸಿದ್ಧವೂ, ದಕ್ಷಿಣ ಇತಿಹಾಸದಲ್ಲಿ ನೂತನ ಯುಗಾರಂಭ ಕಾರಣವೂ ಆದುದು. ಇದರಲ್ಲಿ ಚೋಳ ಪರಾಂತಕನ ಮಗನಾದ ರಾಜಾದಿತ್ಯನನ್ನು ಸಾಮಂತನಾದ ಗಂಗರಾಜನೂ, ತನ್ನ ಭಾವಮೈದುನನೂ ಆದ ಬೂತುಗನ ಸಹಾಯದಿಂದ ಕೊಂದನು. ಈ ವಿಜಯದಿಂದ ಚೋಳಸಾಮ್ರಾಜ್ಯದ ಉತ್ತರಭಾಗವೆಲ್ಲವೂ ರಾಷ್ಟ್ರ

ಕೂಟರ ಕೈವಶವಾಯಿತು. ಪ್ರಬಲವಾದ ರಾಷ್ಟ್ರಕೂಟ ಗಂಗ ರಾಜ್ಯಗಳೆರಡೂ ಒಂದಾಗಲು ಚೋಳರ ಬಲವು ಕುಗ್ಗಿತು.

**ಅವನತಿಯ ಕಾಲ:**—ಮುಮ್ಮಡಿ ಕೃಷ್ಣನ ತರುವಾಯ ರಾಷ್ಟ್ರಕೂಟ ಸಿಂಹಾಸನದ ಮೇಲೆ ಕೂತವರು ಆ ಸ್ಥಾನಕ್ಕೆ ಅರ್ಹರಾದವರಲ್ಲ. ಅಲ್ಲದೆ ಸಾಮಂತರೆನಿಸಿಕೊಂಡಿದ್ದ ಗಂಗರು ತಾವೇ ತಾವಾಗಿ ರಾಷ್ಟ್ರಕೂಟ ಸಾಮ್ರಾಜ್ಯಸೂತ್ರಗಳನ್ನು ಕೈಲಿ ಹಿಡಿದು ಆ ರಾಜರನ್ನು ತಮ್ಮ ಮನಬಂದಂತೆ ಕುಣಿಸುತ್ತಿದ್ದರು. ನಿರ್ವೀರ್ಯರಾದ ಈ ಅರಸರು ಗಂಗರ ಕೈಗೊಂಬೆಗಳಾಗುವುದರಲ್ಲಿ ಆಶ್ಚರ್ಯವೇನು? ಕೃಷ್ಣನ ಮಗನೊಬ್ಬನು ತಂದೆಯ ಕಣ್ಣುಮುಂದೆಯೇ ಕಾಲವಾದನು. ಆದರೆ ಅವನಿಗೆ ಇಂದ್ರನೆಂಬ ಮಗನಿದ್ದರೂ ಕೇವಲ ಬಾಲಕನಾಗಿದ್ದನು. ಆದಕಾರಣ ಕೃಷ್ಣನ ತಮ್ಮನಾದ ಖೊಟ್ಟಿಗನೆಂಬುವನು ಕ್ರಿ. ಶ. ಸು. ೯೭೧ ರಲ್ಲಿ ಪಟ್ಟಕ್ಕೆ ಬಂದನು. ಇವನಾಳ್ವಿಕೆಯಲ್ಲೇ ಪರಮಾರದರಸರಾದ ಸೀಯಕ ಮತ್ತು ಮುಂಜರು ಮಾನ್ಯಖೇಟವನ್ನು ಕೊಳ್ಳೆಹೊಡೆದರೆಂದು ತಿಳಿಯಬರುತ್ತದೆ. ಸಾಮಂತನಾಗಿದ್ದ ಗಂಗ ಮಾರಸಿಂಹನು ಸೋದರಳಿಯನಾದ ಇಂದ್ರನನ್ನು ರಾಷ್ಟ್ರಕೂಟಸಿಂಹಾಸನದ ಮೇಲೆ ಕೂಡಿಸಿ ತಾನು ಸರ್ವಾಧಿಕಾರವನ್ನು ಮಾಡಬೇಕೆಂದು ಪ್ರಯತ್ನಿಸುತ್ತಿದ್ದನು.

**ರಾಷ್ಟ್ರಕೂಟರೂ ಚಾಳುಕ್ಯರೂ:**—ಖೊಟ್ಟಿಗನಿಗೆ ಸಂತತಿಯಿಲ್ಲವಾಗಿ ಅವನ ತಮ್ಮ ನಿರುಪಮನ ಮಗನಾದ ಇಮ್ಮಡಿ ಕಕ್ಕನು ಕ್ರಿ. ಶ. ೯೭೨-೯೭೩ ರಲ್ಲಿ ಪಟ್ಟಕ್ಕೆ ಬಂದನು. ರಾಷ್ಟ್ರಕೂಟರಿಂದ ಪೆಟ್ಟುತಿಂದ ಚೋಳರು ಮತ್ತೆ ಪ್ರಬಲರಾಗಿ ಗಂಗರಸರನ್ನು ಸಂಪೂರ್ಣವಾಗಿ ಸೋಲಿಸಿ ಅವರ ಜೀವಕ್ಕೇ ಸಂಚಕಾರ ತಂದರೆಂದು ಗಂಗರ ಚರಿತ್ರೆಯಲ್ಲಿ ಓದಿದೆವು. ಗಂಗರ ಪತನವು ರಾಷ್ಟ್ರಕೂಟ ಸಾಮ್ರಾಜ್ಯದ ಅರ್ಧಪತನವಾದಂತೆಯೇ ಆಯಿತು. ರಾಜ್ಯವನ್ನು ಕಳೆದುಕೊಂಡಿದ್ದ ಚಾಳುಕ್ಯರು ಕಾದೇ ಇದ್ದರು; ಸಂಧಿಯೂ ಸಿಕ್ಕಿತು. ಕ್ರಿ. ಶ. ಸು. ೯೭೩-೯೭೪ ನೆಯ ವರ್ಷದಲ್ಲಿ ಚಾಳುಕ್ಯ ಇಮ್ಮ

ಡಿ ತೈಲಪನು ಕಕ್ಕನನ್ನು ಮೂಲೆಗೆ ಕೂಡಿಸಿ ಮತ್ತೆ ಚಾಳುಕ್ಯರಾಜ್ಯ ಪುನಸ್ಥಾಪನವನ್ನು ಮಾಡಿದನು.

ಗಂಗ ಮಾರಸಿಂಹನು ಇಂದ್ರನಿಗೆ ನಾಲ್ಮಡಿ ಇಂದ್ರನೆಂದು ಹೆಸರಿಟ್ಟು ರಾಷ್ಟ್ರಕೂಟ ಸಿಂಹಾಸನದ ಮೇಲೆ ಕುಳ್ಳಿರಿಸಿ, ಇಮ್ಮಡಿ ತೈಲಪನನ್ನು ಎದುರಿಸಲು ಎಷ್ಟೋ ಪ್ರಯತ್ನಪಟ್ಟನು. ಏನೂ ಪ್ರಯೋಜನವಾಗಲಿಲ್ಲ. ಇಂದ್ರನು ಹಾಗೂ ಹೀಗೂ ಹೋರಾಡುತ್ತಿದ್ದು ಕ್ರಿ. ಶ. ೯೮೨ ರಲ್ಲಿ ಕಾಲವಶನಾದನು. ಅಂದಿನಿಂದ ಚಾಳುಕ್ಯರಿಗೆ ಭಯತಪ್ಪಿತು. ರಾಷ್ಟ್ರಕೂಟರು ಬಹಳಕಾಲ ಚಾಳುಕ್ಯರ ಸಾಮಂತರಾಗಿದ್ದರು.

## ನೊಳಂಬರು

ರಾಜಕೀಯ ವಿಚಾರವನ್ನೀ ಅಧ್ಯಾಯದಲ್ಲಿ ಮುಗಿಸುವುದಕ್ಕೆ ಮೊದಲು ನೊಳಂಬಪಲ್ಲವರೆಂಬ ಒಂದು ಪಲ್ಲವ ಶಾಖೆಯ ಮನೆತನದ ವಿಚಾರವನ್ನು ಸಂಕ್ಷೇಪವಾಗಿ ತಿಳಿಸುವುದು ಉಚಿತವಾಗಿದೆ. ಚಾಳುಕ್ಯರೂ ಪಲ್ಲವರೂ ಜನ್ಮದ್ವೇಷಿಗಳೆಂದರಿತಿವು. ಆಂಧ್ರ ಕರ್ಣಾಟಕದಿಂದ ಪಲ್ಲವರು ದಕ್ಷಿಣದೇಶಕ್ಕೆ ಬಂದರಷ್ಟೆ. ಅವರು ಈಗಿನ ಮಹಿಸೂರು ದೇಶದ ಹಲವು ಜಿಲ್ಲೆಗಳ ಮೇಲೆ ಅಧಿಕಾರವನ್ನು ನಡಿಸುತ್ತಲೇ ಇದ್ದರು. ಇವರಿಗೆ ನೊಳಂಬ ಪಲ್ಲವರೆಂದು ಹೆಸರು. ಇವರು ಈಶ್ವರ ವಂಶೀಯರು. ಈ ಅರಸರಿಗೆ ಪಲ್ಲವಾಧಿರಾಜ ಅಥವಾ ನೊಳಂಬಾಧಿರಾಜರೆಂದು ಹೆಸರು. ತೀರ್ಥದ ಮೇರೆಯಲ್ಲಿರುವ ಹೆಂಜೆರು (ಈಗಿನ ಹೇಮಾವತಿ)ಯೇ ಅವರ ರಾಜಧಾನಿಯಾಗಿತ್ತು. ಇವರ ಆಳ್ವಿಕೆಯ ದೇಶಕ್ಕೆ ನೊಳಂಬಳ್ಗೆ ಅಥವಾ ನೊಳಂಬವಾಡಿ ೩೨,೦೦೦ ವೆಂದು ಹೆಸರಿತ್ತು.

ಈ ಮನೆತನದವರು ಎಂದೂ ಸಂಪೂರ್ಣ ಸ್ವತಂತ್ರದಿಂದಲಾಗಲಿ, ಸಾಮ್ರಾಜ್ಯವೈಭವದಿಂದಲಾಗಲಿ ಆಳಿದವರಲ್ಲ. ಪಲ್ಲವ, ಗಂಗ, ರಾಷ್ಟ್ರಕೂಟ ಮೊದಲಾದವರಲ್ಲಿ ಒಬ್ಬರಲ್ಲಒಬ್ಬರಿಗೆ ಸಾಮಂತರಾಗಿಯೇ ಇದ್ದರೆಂದು ಹೇಳಬೇಕು. ಮೊದಲು ಮೊದಲು ಇವರಿಗೆ

ಈಗಿನ ತುಮಕೂರು ಚಿತ್ರದುರ್ಗ ಜಿಲ್ಲೆಗಳು, ಅನಂತಪುರದ ಜಿಲ್ಲೆಯ ಹಲವು ಭಾಗಗಳೂ ಸೇರಿದ್ದುವು. ಕ್ರಮೇಣ, ಬಾಣ ವೈದುಂಬರೇ ಮೊದಲಾದವರನ್ನು ಎದುರಿಸಿ ಬೆಂಗಳೂರು ಕೋಲಾರ ಜಿಲ್ಲೆಗಳನ್ನೂ; ಬಳ್ಳಾರಿ, ಸೇಲಂ ಮತ್ತು ಉತ್ತರ ಆರ್ಕಾಟಿನ ಹಲವು ಭಾಗಗಳನ್ನೂ ನೊಳಂಬವಾಡಿಗೆ ಸೇರಿಸಿಕೊಂಡರು.

**ಅರಸರು** :—ತ್ರಿಣಯನ ಪಲ್ಲವ ವಂಶದಲ್ಲಿ ಮಂಗಳನೆಂಬ ನೊಳಂಬಾಧಿರಾಜನುತ್ಪನ್ನನಾದನು. ಅವನಿಗೆ ಸಿಂಹಪೋತನೆಂಬುವನು ಹುಟ್ಟಿದನು. ಇವನ ಮಗನೇ ಗಂಗ ರಾಚಮಲ್ಲನ ಮಾವನು. ಇವನಿಗೆ ಚಾರುಪೊನ್ನೇರನೆಂದು ಹೆಸರು. ಚಾರುಪೊನ್ನೇರನ ಮಗನಾದ ಪೊಳಲಚೋರ ನೊಳಂಬಾಧಿ ರಾಜನು ನೀತಿಮಾರ್ಗ (ಗಂಗ)ನ ತಂಗಿಯಾದ ಜಾಯಬ್ಬೆಯನ್ನು ಮದುವೆಯಾದನು. ಇವನಿಗೆ ವೀರಮಹೇಂದ್ರನುದಯಿಸಿದನು. ಅವನು ಕದಂಬ ರಾಜಪುತ್ರಿಯಾದ ದೀವಬ್ಬರಸಿಯನ್ನು ಕೈ ಹಿಡಿದನು. ಅವನ ಮಗನೇ ಅಯ್ಯಪದೇವ ಅಥವಾ ನನ್ನಿನೊಳಂಬನೆಂಬುವನು. ಇವನಿಗೆ ಅಣ್ಣಿಗ ಅಥವಾ ವೀರನೊಳಂಬ ಮತ್ತು ದಿಲೀಪಯ್ಯ ಅಥವಾ ಇರಿವನೊಳಂಬ ಎಂಬಿಬ್ಬರು ಮಕ್ಕಳು ಹುಟ್ಟಿದರು. ಈ ಅಣ್ಣತಮ್ಮಂದಿರಿಬ್ಬರೂ ಒಬ್ಬರ ಅನಂತರ ಒಬ್ಬರಾಳಿದರು. ದಿಲೀಪಯ್ಯನು ಕ್ರಿ. ಶ. ೯೬೮ ರಲ್ಲಿ ಕಾಲವಾಗಲು ಅವನ ಮಗನಾದ ನನ್ನಿನೊಳಂಬನು ಸಿಂಹಾಸನವನ್ನೇರಿ ಕ್ರಿ. ಶ. ೯೭೭ ರವರೆಗೆ ಜೀವಿಸಿದ್ದಂತೆಕಾಣಬರುತ್ತದೆ. ಇವನಾಳ್ವಿಕೆಯಲ್ಲಿ ಗಂಗ ಮಾರಸಿಂಹನು ನೊಳಂಬರನ್ನು ಧ್ವಂಸಮಾಡಿ 'ನೊಳಂಬಕುಲಾಂತಕ' ನೆಂಬ ಹೆಸರನ್ನು ಪಡೆದನು.

ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ನೀಗಿಕೊಂಡ ಈ ನೊಳಂಬರೂ ಆಗತಾನೇ ಗಂಗಸಾಮ್ರಾಜ್ಯದ ಮೇಲೆ ಹಾಯ್ದು ಬರುತ್ತಿದ್ದ ಚೋಳ ಪ್ರವಾಹಾಹುತಿಗೆ ತುತ್ತಾಗಿಹೋದರು.

---

## ೪. ಕಾಲಸ್ಥಿತಿ

ಕರ್ಣಾಟಕ ದೇಶದಲ್ಲಿ ಈ ಕಾಲವನ್ನು ಸ್ಥೂಲವಾಗಿ 'ವಾಙ್ಮಯೋತ್ಪಾದಕಯುಗ' ವೆಂದು ಕರೆದರೆ ಅದು ಸುಳ್ಳಾಗಲಾರದು. ಸಂಸ್ಕೃತ ಕರ್ಣಾಟಕ ಭಾಷೆಗಳೆರಡರಲ್ಲೂ ಅನೇಕ ಗ್ರಂಥಗಳು ಹುಟ್ಟಿದವು.

ಇಮ್ಮಡಿ ಮಾಧವನು ದತ್ತಕ ಸೂತ್ರಕ್ಕೆ ವ್ಯಾಖ್ಯಾನವನ್ನು ಬರೆದನು. ದುರ್ವಿನೀತನು ಶಬ್ದಾವತಾರವೆಂಬ ವ್ಯಾಕರಣವನ್ನು ಪೈಶಾಚೀಭಾಷೆಯಿಂದ ಭಾಷಾಂತರೀಕರಿಸಿ ಸಂಸ್ಕೃತದಲ್ಲಿ ಬೃಹತ್ಕಥೆಯನ್ನೂ, ಭಾರವಿಯ ಕಿರಾತಾರ್ಜುನೀಯದ ಹದಿನೈದನೆಯ ಸರ್ಗಕ್ಕೆ ಟೀಕೆಯನ್ನೂ ರಚಿಸಿದನು ನೃಪತುಂಗನು ಹೇಳಿರುವ ಕನ್ನಡ ಗದ್ಯಗ್ರಂಥಕಾರನಿವನೇ ಇರಬಹುದು. ಶ್ರೀ ಪುರುಷನೂ ಇವನ ಮಗನಾದ ಶಿವಮಾರನೂ ಗಜಶಾಸ್ತ್ರ, ಗಜಾಷ್ಟಕಗಳನ್ನು ಕನ್ನಡದಲ್ಲಿ ಬರೆದರು. ಈ ಗಜಾಷ್ಟಕವು ಹೆಂಗಸರ 'ಒನಕೆವಾಡು' ಆಗಿತ್ತೆಂದು ಒಂದು ಶಾಸನದಲ್ಲಿ ಹೇಳಿದೆ. ಕರ್ಣಾಟಕ ಶೂದ್ರಕ, ಹರಿವಂಶೇತ್ಯಾದಿ ಗ್ರಂಥಕರ್ತನಾದ ಮೊದಲನೆಯ ಗುಣವರ್ಮನ ಪೋಷಕನೇ ಮಹೇಂದ್ರಾಂತಕನು ಅಥವಾ ಎರೆಯಪ್ಪನು. ರಾಚಮಲ್ಲನ ದಂಡನಾಯಕನಾದ ಚಾಮುಂಡರಾಯನು ತ್ರಿಷಷ್ಟಿ ಲಕ್ಷಣ ಮಹಾ ಪುರಾಣ (ಆದಿಪುರಾಣ) ವೆಂಬ ಗದ್ಯ ಗ್ರಂಥವನ್ನು ಬರೆದು ಕನ್ನಡ ಗದ್ಯ ಗ್ರಂಥ ಲೇಖಕರಿಗೆ 'ಪಿತಾಮಹ' ನಾದನು. ಕಾದಂಬರೀ, ಛಂದೋಂಬುಧಿ ಕರ್ತನಾದ ಮೊದಲನೆಯ ನಾಗವರ್ಮನು ರಕ್ಕಸಗಂಗನ ಆಶ್ರಿತನು.

ರಾಷ್ಟ್ರಕೂಟ ಅಮೋಘವರ್ಷನು ಕವಿರಾಜ ಮಾರ್ಗವನ್ನು ರಚಿಸಿ ಕರ್ಣಾಟಕ ಕವಿತಾಕನ್ಯೆಯ ಲಕ್ಷಣಾಚಾರ್ಯನಾದನೆಂಬಂಶವನ್ನು ಹಿಂದೆಯೇ ಸೂಚಿಸಿದೆವು. ನಾಲ್ವಡಿ ಗೋವಿಂದನ ಕಾಲದಲ್ಲೇ ಕನ್ನಡಕ್ಕಾದಿ ಕವಿಯಾದ ಆದಿಪಂಪನು ವಿಕ್ರಮಾರ್ಜುನ ವಿಜಯ, ಆದಿಪುರಾಣಗಳನ್ನು ವಿರಚಿಸಿದುದು. ಮುಮ್ಮಡಿ ಇಂದ್ರ

ನನ್ನು 'ಮಹಾಕವಿ ಚಿತ್ರಸರೋರುಹಾಕಾರಾವಸ್ಥಿತಹಂಸ' ನೆಂದು ಸಮಸ್ತ ಮಹೀಜನರು ಕರೆಯುತ್ತಿದ್ದರು. ಮುಮ್ಮಡಿ ಕೃಷ್ಣನು ಕವಿಯಾಗಿದ್ದು, ಪೊನ್ನನಿಗೆ 'ಕವಿ ಚಕ್ರವರ್ತಿ' ಯೆಂಬ ಬಿರುದನ್ನು ದಯಪಾಲಿಸಿದನು. ಹಲಾಯುಧನು ಬರೆದ ಕವಿರಹಸ್ಯಕ್ಕೆ ನಾಯಕನೀ ಕೃಷ್ಣನೆ.

ಬಾದಾಮಿಯ ಚಾಳುಕ್ಯರು ವೈದಿಕ ಮತೋದ್ಧಾರಕ್ಕಾಗಿ ಬಹು ಪ್ರಯತ್ನ ಪಟ್ಟರೆಂಬಂಶವನ್ನು ಆಗಲೇ ತಿಳಿಸಿದ್ದಾಯಿತು. ಗಂಗರಸರೂ ರಾಷ್ಟ್ರಕೂಟರೂ ಜೈನಮತಾನುಯಾಯಿಗಳಾಗಿದ್ದರೂ ವೈದಿಕ ಮತ ಪ್ರಚಾರಕ್ಕೆ ಯಾವ ಕುಂದಕವನ್ನೂ ಉಂಟುಮಾಡದೆ, ಅನೇಕ ಸಲ ಅದರ ಅಭಿವೃದ್ಧಿಗೂ ಹೆಚ್ಚು ಪ್ರೋತ್ಸಾಹವನ್ನು ಕೊಟ್ಟರು. ಈ ಎರಡು ಮನೆತನಗಳಲ್ಲೂ ಹಲವು ಅರಸರು ಶೈವ, ವೈಷ್ಣವಮತ ಪಕ್ಷಪಾತಿಗಳಾಗಿದ್ದರು.

ಅಜಂತದ ಚಿತ್ರಕರ್ಮವೂ, ಬಾದಾಮಿಯ ಗುಹಾಂತರ್ದೇವಾಲಯಗಳೂ ಚಾಳುಕ್ಯರ ಕೀರ್ತಿಯನ್ನು ಹೊಗಳುತ್ತಲಿವೆ. 'ಎಲ್ಲೋರದ ಕೈಲಾಸ ದೇವಾಲಯವು ರಾಷ್ಟ್ರಕೂಟ ಸಮ್ರಾಜರ ಕೀರ್ತಿ ಕಿರೀಟದಲ್ಲಿ ಚೂಡಾಮಣಿಯೆಂದೇ ಹೇಳಬೇಕು. ಶ್ರವಣಬೆಳ್ಗೊಳದ ಗೋಮಟೇಶ್ವರ ವಿಗ್ರಹವೊಂದೇ ಗಂಗರಸರ ಸತ್ವಗುಣೋತ್ಪನ್ನ ಲಲಿತಕಲಾಭಿರುಚಿಯನ್ನು ನಲ್ದೆಸೆಗಳಿಗೆಸೆಯುತ್ತಿದೆ.

ಈ ಕಾಲದ ರಾಜ್ಯನೀತಿಯ ಸ್ವಭಾವವನ್ನು ತಿಳಿಯ ಬೇಕಾದರೆ ಬೇರೊಂದು ಅಧ್ಯಾಯವೇ ಬೇಕಾದೀತು. ಆದರೆ ವಿಶದೀಕರಣಕ್ಕೆ ಬಿಡು ಸ್ಥಳವಿಲ್ಲವಾದ ಪ್ರಯುಕ್ತ ರಾಜ್ಯಾಂಗ ವ್ಯವಸ್ಥೆಯ ಮೂಲಾಧಾರಗಳನ್ನು ಇಲ್ಲಿ ಸೂಚಿಸುವೆವು. ಧರ್ಮ ಪ್ರತಿಪಾಲನವೇ ರಾಜರೆಲ್ಲರ ಮುಖ್ಯ ಲಕ್ಷ್ಯವಾಗಿತ್ತು. ಶಾಂತಿವ್ಯಾಪ್ತಿ; ಸುಖವ್ಯಾಪ್ತಿಯೇ ಈ ಕಾಲದ ರಾಜ್ಯಾಂಗ ವ್ಯವಸ್ಥೆಯ ಸಲ್ಲಿಪ ಯೆನ್ನಬಹುದು. ನಗರ ವ್ಯವಸ್ಥೆಗಳಂತೂ, ನಗರ ನಿವಾಸಿಗಳಾಗಿ ತಮ್ಮ ತಮ್ಮ ಧರ್ಮಗಳಲ್ಲಿ ಎಷ್ಟು ಮಟ್ಟಿಗೆ ಆಸಕ್ತರಾಗಿದ್ದು, ಸಮಾಜ ಪುರುಷಾರ್ಥ ಸಾಧನದಲ್ಲಿ

ಉದ್ಯುಕ್ತರಾಗಿದ್ದರೆಂಬುದನ್ನು ಸೂಚಿಸುತ್ತವೆ. ಅಧಿಕಾರಿಗಳು ರಾಜನೀತಿಯ ಗುಟ್ಟನ್ನೂ, ಪ್ರಜೆಗಳು ಕರ್ತವ್ಯ ಮತ್ತು ಬಾಧ್ಯತೆಗಳ ಬೆಲೆಯನ್ನೂ ಚನ್ನಾಗಿ ಅರಿತಿದ್ದರಾದ ಕಾರಣ ಸಮಾಜದ ಸುಖಸಂಪತ್ತು ವೃದ್ಧಿಯಾಗುತ್ತ ಬಂತು.

ಒಟ್ಟಿನಲ್ಲಿ; ಈ ಯುಗದಲ್ಲಿ ಕರ್ನಾಟಕವು ರಾಷ್ಟ್ರೀಯ ಜೀವನದ ಪ್ರತ್ಯಂಗದಲ್ಲು ಜೀವಕಳೆಯನ್ನು ತೋರಿಸಿತು. ತನಗೊಂದು ವ್ಯಕ್ತಿತ್ವವುಂಟೆಂಬುದನ್ನು, ದಕ್ಷಿಣದೇಶದಲ್ಲಿ ತಾನೂ ಗಣಿಸಲ್ಪಡತಕ್ಕ ಒಂದು ಮೂರ್ತಿಯೆಂಬುದನ್ನು ಕರ್ನಾಟಕವು ಸ್ಪಷ್ಟವಾಗಿ ತೋರಿಸಿತು.

---

# ಮೂರನೆಯ ಅಧ್ಯಾಯ

## ೧ ಕಲ್ಯಾಣಿಯ ಚಾಳುಕ್ಯರು

**ರಾಜ್ಯಸ್ಥಾಪನೆ** :—ಇಮ್ಮಡಿ ಕೀರ್ತಿವರ್ಮನ ಕಾಲದಿಂದಲೂ ಚಾಳುಕ್ಯರು ತಮ್ಮ ಸಾಮ್ರಾಜ್ಯ ಪುನರುಜ್ಜೀವನ ಕಾರ್ಯದಲ್ಲಿ ಉದ್ಯುಕ್ತರಾಗಿದ್ದರು. ಇಮ್ಮಡಿ ತೈಲನು ಕ್ರಿ. ಶ. ೯೭೩ ನೆಯ ಸಂವತ್ಸರದಲ್ಲಿ ರಾಷ್ಟ್ರಕೂಟ ಕಡೆಯವನಾದ ಇಮ್ಮಡಿ ಕಕ್ಕನನ್ನು ಆಹವದಲ್ಲಿ ಗೆದ್ದು ಚಾಳುಕ್ಯ ಸಾಮ್ರಾಜ್ಯವನ್ನು ಮತ್ತೆ ಸ್ಥಾಪಿಸಿ, ಸಿಂಹಾಸನವನ್ನೇರಿದನು.

ಚಾಳುಕ್ಯ ಸಾಮ್ರಾಜ್ಯ ಪುನರುದ್ಧಾರಕನಾದ ಇಮ್ಮಡಿ ತೈಲಪನ ಹಿಂದೆ ಆಗಿ ಹೋದ ಬಾದಾಮಿ ಚಾಳುಕ್ಯರ ವಂಶಸ್ಥನಲ್ಲವೆಂದು ಹಲವರ ಅಭಿಪ್ರಾಯ. ಆದರೆ ಹಲವು ಶಾಸನಗಳ ಹೇಳಿಕೆಯಿಂದಲೂ, ತೈಲಪನಾಸ್ಥಾನ ಕವಿಯಾದ ರನ್ನನು ತನ್ನ ಗದಾಯುದ್ಧದಲ್ಲಿ ಕೊಟ್ಟಿರುವ ವಂಶವೃಕ್ಷದಿಂದಲೂ ತೈಲಪನು ಬಾದಾಮಿ ಚಾಳುಕ್ಯರ ವಂಶಸ್ಥನೇ ಎಂದು ಹೇಳಲು ಅವಕಾಶವುಂಟು.

ಈ ಮನೆತನದವರು ಕ್ರಿ. ಶ. ಸು. ೧೦ ನೆಯ ಶತಮಾನಾಂತ್ಯದಿಂದ ೧೨ನೆಯ ಶತಮಾನಾಂತ್ಯದವರೆಗೂ ಕರ್ಣಾಟ ರಾಜ್ಯವನ್ನಾಳಿದರು. ಇವರ ರಾಜಧಾನಿಯು ಕಲ್ಯಾಣಿ (ನಿಜಾಂ ಸರಕಾರದಲ್ಲಿದೆ) ಯಾದುದರಿಂದ ಇವರನ್ನು ಕಲ್ಯಾಣಿ ಚಾಳುಕ್ಯರೆಂಬದಾಗಿ ಸಂಬೋಧಿಸಿದೆ.

**ಇಮ್ಮಡಿತೈಲ** :—ಇವನು ಸುಮಾರು ೨೪ ವರ್ಷಗಳು ರಾಜ್ಯಭಾರ ಮಾಡಿದನು. ಇವನಿಗೆ 'ಆಹವಮಲ್ಲ' ನೆಂದೂ 'ಸತ್ಯಾಶ್ರಯ ಕುಲತಿಲಕ' ನೆಂದೂ ಹೆಸರಿತ್ತು. ಗೋತ್ರೋದ್ಧಾರಕನಾದ ಕಾರಣ ಇವನಿಗೆ 'ಚಾಳುಕ್ಯಾಭರಣ' ನೆಂಬದಾಗಿಯೂ ಹೆಸರಿತ್ತು. ಇವನು ರಾಷ್ಟ್ರಕೂಟ ರಾಜ ಪುತ್ರಿಯಾದ ಜಕ್ಕಲದೇವಿಯನ್ನು ಮದುವೆಯಾದನು. ಸೌಂದತ್ತಿಯ ರಟ್ಟರು ಇವನಿಗೆ ಸಾಮಂತರಾಗಿದ್ದರು. ಕೊಂಕಣದ ಶಿಲಾಹಾರರು ಇವನಿಗಧೀನರಾಗಿದ್ದರು.

ಹೆಚ್ಚಿನಕೆ; ಮಾನ್ಯಖೇಟದ ರಾಷ್ಟ್ರಕೂಟರ ಆಡಳಿತಕ್ಕೆ ಒಳಪಟ್ಟಿದ್ದ ಪ್ರದೇಶಕ್ಕೆಲ್ಲ ಇವನು ಒಡೆಯನಾದನು. ಯಾದವ ಇಮ್ಮಡಿ ಭಿಲ್ಲಮನ ಸಹಾಯದಿಂದ ಇವನು ಪರಮಾರ ಮುಂಜರಾಜನನ್ನು ಕೊಂದನು. ಇವನು ರಾಷ್ಟ್ರಕೂಟರನ್ನು ಧ್ವಂಸ ಮಾಡಿದುದಲ್ಲದೆ ಚೇದಿ, ಉತ್ಕಲ, ಚೋಳ ನೇಪಾಳರನ್ನೂ ಸೋಲಿಸಿದಂತೆ ಹೇಳಿದೆ. ಇದು ಕೇವಲ ಅತಿಶಯೋಕ್ತಿಯೆಂದರೂ ಕುಂತಳದೇಶವೆಲ್ಲವನ್ನೂ ಸಾಧಿಸಿದನೆಂಬುದಕ್ಕೆ 'ಕುಂತಳೇಶ್ವರ' ನೆಂಬ ಅವನ ಬಿರುದೇ ಸಾಕಾಗಿದೆ. ಅನೇಕ ಆಧಾರಗಳೂ ಈ ಅಂಶವನ್ನು ಸ್ಥಿರೀಕರಿಸುತ್ತವೆ. ಅಲ್ಲದೆ ಅನೇಕ ಚೋಳ ಶಾಸನಗಳಲ್ಲೂ ಈ ರಟ್ಟಪಾಡಿಯು ಏಳೂವರೆ ಲಕ್ಷ ರಾಜ್ಯವೆಂದು ಹೇಳಿದೆ.

**ಚಾಳುಕ್ಯರೂ ಚೋಳರೂ** :—ತೈಲಪನಿಗೆ ಇರಿವ ಬೆಡಂಗ ಸತ್ಯಾಶ್ರಯನೆಂದೂ ದಶವರ್ಮ ಅಥವಾ ಯಶೋವರ್ಮನೆಂದೂ ಇಬ್ಬರು ಮಕ್ಕಳಿದ್ದರು. ಕ್ರಿ. ಶ. ೯೯೭ ರಲ್ಲಿ ಇರಿವ ಬೆಡಂಗನು ಸಿಂಹಾಸನಕ್ಕೆ ಬಂದನು. (ಕವಿರನ್ನನು ಗದಾಯುದ್ಧದಲ್ಲಿ ಇವನನ್ನೇ ಭೀಮನಿಗೆ ಹೋಲಿಸಿ ಕಾವ್ಯವನ್ನು ಬರೆದಿರುವನು.) ಚೋಳರನ್ನು ಎದುರಿಸಿ ತೈಲಪನು 'ಚೋಳಕುಲ ದಾವಾನಲ'ನೆಂಬ ಹೆಸರನ್ನು ಪಡೆದಿದ್ದನಷ್ಟೆ. ಚಾಳುಕ್ಯರಾಳ್ವಿಕೆಯ ಪ್ರಥಮಾರ್ಧಭಾಗವೆಲ್ಲ ಚೋಳರನ್ನಡಗಿಸುವುದರಲ್ಲೇ ಆಗಿಹೋಯಿತು. ಸತ್ಯಾಶ್ರಯನೂ ಚೋಳರನ್ನು ರಣಾಂಗಣದಲ್ಲಿ ಸಂಧಿಸಬೇಕಾಯಿತು. ಚೋಳರು ಗಂಗವಾಡಿಯನ್ನು ಹೊಕ್ಕು ತಲಕಾಡನ್ನು ಹಿಡಿದು ಗಂಗರಸರನ್ನು ಸದೆಬಡಿದರೆಂದು ಆಗಲೇ ಓದಿದೆವು. ಕರ್ಣಾಟಕದಲ್ಲಿ ಚೋಳರ ಹಾವಳಿಯನ್ನಡಗಿಸುವ ಭಾರವು ಈಗ ಚಾಳುಕ್ಯರ ಮೇಲೆ ಬಿತ್ತು. ಕ್ರಿ. ಶ. ಸು. ೧೦೦೭-೧೦೦೮ ರಲ್ಲಿ ಸತ್ಯಾಶ್ರಯನು ತಾವರೆಯಘಟ್ಟದಬಳಿ ಚೋಳ ಸಮ್ರಾಜನಾದ ರಾಜರಾಜನನ್ನು ಸೋಲಿಸಿ ಅವನನ್ನು ಹೊಡೆದೋಡಿಸಿದನು.

ಸತ್ಯಾಶ್ರಯನ ತರುವಾಯ ತ್ರಿಭುವನಮಲ್ಲ ವಿಕ್ರಮಾದಿತ್ಯನು ಕ್ರಿ. ಶ. ೧೦೦೯ ರಲ್ಲಿ ಪಟ್ಟಕ್ಕೆ ಬಂದನು. ಇವನಿಗೆ ಐದನೆಯ ವಿಕ್ರ

ಮಾದಿತ್ಯನೆಂದೂ ಹೆಸರು. ಇವನು ರಾಜೇಂದ್ರ ಚೋಳನಿಗೆ ಸಿಂಹ ಸ್ವಪ್ನವಾಗಿದ್ದನು. ವಿಕ್ರಮಾದಿತ್ಯನ ತರುವಾಯ ಅವನ ತಮ್ಮನಾದ ಇಮ್ಮಡಿ ಜಯಸಿಂಹನು ಪದವೀಧರನಾದನು. ಇವನಿಗೆ 'ಜಗದೇಕಮಲ್ಲ' ನೆಂಬ ಬಿರುದಿತ್ತು. ಸುಗ್ಗಲದೇವಿಯೆಂಬುವಳು ಇವನ ಪಟ್ಟದರಸಿ. ಸೋಮೇಶ್ವರನೆಂಬ ಮಗನೂ ಅವ್ವಲದೇವಿಯೆಂಬೊಬ್ಬ ಮಗಳೂ ಇದ್ದರು. ಈ ಅವ್ವಲ ದೇವಿಯನ್ನು ಸಾಮಂತನಾದ ಯಾದವ ಮುಮ್ಮಡಿ ಭೀಮನಿಗೆ ಕೊಟ್ಟು ವಿವಾಹ ಮಾಡಿದ್ದನು. ಜಯಸಿಂಹನು ಪರಮಾರ ಭೋಜನನ್ನೆದುರಿಸಿ ರಾಜ್ಯವನ್ನುತ್ತರದಲ್ಲಿ ವಿಸ್ತರಿಸಿದ ವಿಚಾರವಂತಿರಲಿ. ಚೋಳರು ಪ್ರಬಲರಾಗಿ ರಟ್ಟಸಾಡಿಯ ಮೇಲೆ ದಂಡೆತ್ತಿ ಹೊರಟು ರಾಷ್ಟ್ರಕೂಟರ ನೆಲೆವೀಡಾಗಿದ್ದ ಕಂಪಿಲಿನಗರ(ತುಂಗಭದ್ರಾತೀರದಲ್ಲಿ)ವನ್ನು ಧ್ವಂಸಮಾಡಲು ಜಯಸಿಂಹನು ಕೋಪೋದ್ದೀಪಿತನಾಗಿ, ಚೋಳರ ಮೇಲೆ ಬಿದ್ದು ಅವರರಸನಾದ ರಾಜೇಂದ್ರ ಚೋಳ ಅಥವಾ ಇಮ್ಮಡಿ ಮಧುರಾಂತಕನನ್ನು ಕ್ರಿ. ಶ. ೧೦೩೪ ರಲ್ಲಿ ಹೊಡೆದೋಡಿಸಿ ಇಟಿತೊರೆ ನಾಡನ್ನು ಅವನಿಂದ ಕಸುಕೊಂಡನು.

ಕ್ರಿ. ಶ. ೧೦೪೦ ರಲ್ಲಿ ಸೋಮೇಶ್ವರನು ಸಿಂಹಾಸನವನ್ನೇರಿದನು. ಇವನ ತಂದೆಯ ಕಾಲದಲ್ಲಿ ಪೆಟ್ಟು ತಿಂದುಹೋದ ಚೋಳರು ದ್ವಿಗುಣವಾದ ಕ್ರೋಧದಿಂದ ಇವನನ್ನು ಎದುರಿಸಿದರು ; ಪುಲಿಕೆರೆ ನಗರ(ಲಕ್ಷ್ಮೇಶ್ವರ)ವನ್ನು ಸುಟ್ಟು ಅಲ್ಲಿನ ದೇವಾಲಯಗಳನ್ನು ನಾಶಪಡಿಸಿದರು. ಕುಪ್ಪಂ ಎಂಬೆಡೆಯಲ್ಲಿ ರಾಜೇಂದ್ರದೇವನು ಸೋಮೇಶ್ವರನನ್ನು ಸೋಲಿಸಿದಂತೆ ಕಾಣಬರುತ್ತದೆ. ಅತ್ಯಲ್ಪಕಾಲದಲ್ಲೇ ಸೋಮೇಶ್ವರನು, ಸೈನ್ಯ ಸಮೇತನಾಗಿ ಹೊರಟು, ಚೋಳನನು ಸೋಲಿಸಿ, ಯುದ್ಧ ಭೂಮಿಯಲ್ಲಿ ಅವನನ್ನು ಕೊಂದನು.

ಸೋಮೇಶ್ವರನ ಸಾಮ್ರಾಜ್ಯವು ಬಹುವಿಸ್ತಾರವಾಗಿತ್ತು. ಹಾನುಂಗಲ್ಲು ಕದಂಬರೂ, ಯಾದವರೂ, ಗಂಗರಸರೂ, ಹೊಯ್ಸಳರೂ, ಸೌಂದತ್ತಿಯ ರಟ್ಟರೂ, ಶಿಲಾಹಾರರೂ, ಇವನಿಗೆ ಮಹಾಸಾಮಂತ

ರೂ, ಮಾಂಡಲಿಕರೂ ಆಗಿದ್ದರು. ಜ್ಯೇಷ್ಠಪುತ್ರನಾದ ಇಮ್ಮಡಿ ಸೋಮೇಶ್ವರನು ಬೆಳ್ವೊಲ ಪುರಿಗೆರೆ ನಾಡುಗಳಿಗೊಡೆಯನಾಗಿದ್ದನು. ಎರಡನೆಯವನಾದ ಆರನೆಯ ವಿಕ್ರಮಾದಿತ್ಯನು ಗಂಗವಾಡಿ, ಬನವಾಸಿಗಳಿಗಧಿಪನಾಗಿದ್ದನು. ಇವನಾಳ್ವಿಕೆಯ ಮತ್ತೊಂದು ವಿಶೇಷಾಂಶವೇನೆಂದರೆ ಸೋಮೇಶ್ವರನ ಸೋದರತ್ತೆಯೂ 'ಗುಣದ ಬೆಡಂಗಿ', 'ಏಕವಾಕ್ಯೆ', 'ವೈರಿನೃಪಭೈರವಿ' ಇತ್ಯಾದಿ ಬಿರುದಖ್ಯಾತೆಯೂ ಆದ ಅಕ್ಕಾದೇವಿಯು ಕಿಸುಕಾಡೆಪ್ಪತ್ತನ್ನು ಆಳುತ್ತಿದ್ದಳು. ಇವನರಸಿಯರಲ್ಲೊಬ್ಬಳಾದ ಕೇತಲದೇವಿಯು ಪೊನ್ನವಾಡಗ್ರಹಾರಾಡಳಿತವನ್ನು ನಡೆಸುತ್ತಿದ್ದಳು.

ಸೋಮೇಶ್ವರನಿಗೆ ನಾಲ್ವರು ಮಹಿಷಿಯರೂ ನಾಲ್ವರು ಗಂಡು ಮಕ್ಕಳೂ ಇದ್ದರು. ಇಬ್ಬರ ಹೆಸರನ್ನಾಗಲೇ ತಿಳಿಸಿದ್ದಾಯಿತು. ಮುಮ್ಮಡಿ ಜಯಸಿಂಹ, ವಿಷ್ಣುವರ್ಧನ ವಿಜಯಾದಿತ್ಯರೆಂಬುವರೇ ಮಿಕ್ಕಿಬ್ಬರು. ವಿಕ್ರಮಾದಿತ್ಯನೇ ಪ್ರತಿಭಾಶಾಲಿಯೆಂದೆಣಿಸಿ ಸೋಮೇಶ್ವರನು ಅವನಿಗೆ ಯೌವ್ವರಾಜ್ಯಾಭಿಷೇಕ ಮಾಡಲುದ್ಯುಕ್ತನಾದನು. ಆದರೆ ವಿಕ್ರಮಾದಿತ್ಯನಿಗೆ ಅದು ಸರಿಬೀಳಲಿಲ್ಲವಾಗಿ ಇಮ್ಮಡಿ ಸೋಮೇಶ್ವರನೇ ಯುವರಾಜನಾದನು. ಸೋಮೇಶ್ವರನಿಗೆ ಜ್ವರಬರಲು ಅದನ್ನು ಸಹಿಸಲಾರದೆ ತುಂಗಭದ್ರೆಯಲ್ಲಿ ಮುಳುಗಿ ಪ್ರಾಣಗಳನ್ನು ಬಿಟ್ಟನು.

ಕ್ರಿ. ಶ. ೧೦೬೮ ರಲ್ಲಿ 'ಭುವನೈಕಮಲ್ಲ' ನೆಂಬ ಬಿರುದಿನಿಂದ ಇಮ್ಮಡಿ ಸೋಮೇಶ್ವರನು ಸಾಮ್ರಾಜ್ಯಭಾರವನ್ನು ವಹಿಸಿದನು. ಅತ್ಯಲ್ಪ ಕಾಲದಲ್ಲೇ ಸೋಮೇಶ್ವರನು ದುರ್ನಡತೆಗೆ ಬಿದ್ದು ಪ್ರಜೆಗಳ ಪ್ರೀತಿ ವಿಶ್ವಾಸಗಳನ್ನು ಕಳೆದುಕೊಂಡನು. ಇವನ ಸಾಮಂತನಾಗಿದ್ದುಕೊಂಡು, ಪ್ರತಿಭಟಿಸಿದ ಚೋಳರನ್ನೆದುರಿಸಿ, ಅನಾಯಕಸ್ಥಿತಿಯಲ್ಲಿದ್ದ ಚೋಳರಾಜ್ಯವನ್ನೊಂದು ತಿದ್ದುಪಾಡಿಗೆ ತರುತ್ತಿದ್ದ ತಮ್ಮನಾದ ವಿಕ್ರಮಾದಿತ್ಯನನ್ನು ಎದುರಿಸಲು, ಸೋಮೇಶ್ವರನು ಪೂರ್ವಚಾಳುಕ್ಯ ರಾಜನಾದ ರಾಜಿಗ ಅಥವಾ ರಾಜೇಂದ್ರಚೋಳ

ನೊಂದಿಗೆ ಕಲೆತನು. ವಿಕ್ರಮಾದಿತ್ಯನು ಸೈನ್ಯಸಮೇತನಾಗಿ ಬಂದು ಇವರಿಬ್ಬರನ್ನೂ ಎದುರಿಸಲು ರಾಜಿಗನು ಪರಾರಿಯಾದನು, ಸೋಮೇಶ್ವರನು ಸೆರೆಯಾಳಾದನು. ಕೂಡಲೇ ವಿಕ್ರಮಾದಿತ್ಯನು ಅಣ್ಣನು ಸಾಮ್ರಾಜ್ಯಧುರಂಧರತ್ವಕ್ಕೆ ಅನರ್ಹನೆಂದರಿತು ಕ್ರಿ. ಶ. ೧೦೭೬ ಸುಮಾರಿನಲ್ಲಿ ಚಕ್ರವರ್ತಿಯಾದನು.

**ಆರನೆಯ ವಿಕ್ರಮಾದಿತ್ಯ** :—ಇವನು ತನ್ನ ತಂದೆಯೂ ಮತ್ತು ಅಣ್ಣನೂ ಆಳುತ್ತಿದ್ದಾಗಲೇ ವಿಜಯಯಾತ್ರೆ ಹೊರಟು ಚೋಳರನ್ನೆದುರಿಸಿ ಕಾಂಚಿಯನ್ನು ಕೊಳ್ಳೆ ಹೊಡೆದನು ; ಗಂಗೆಗೊಂಡ ಚೋಳಪುರವನ್ನು ಹಿಡಿದನು. ಬಂಗಾಳ ಮತ್ತು ಆಸಾಮಿನವರೆಗೂ ದಂಡಯಾತ್ರೆ ಹೊರಟನು ; ಕೇರಳ ರಾಜನನ್ನು ಕೊಂದನು ; ಪೂರ್ವ ಚಾಳುಕ್ಯ ರಾಜಿಗನಿಗೆ ಮನೋಭಂಗಮಾಡಿ, ವೆಂಗಿಯನ್ನಾಕ್ರಮಿಸಿದನು. ಮಾಳವದ ಪರಮಾರರನ್ನು ಸೋಲಿಸಿ ಚಕ್ರಕೋಟ ದುರ್ಗವನ್ನೂ ಸಾಧಿಸಿದನು.

ಇವನು ಚಕ್ರವರ್ತಿಯಾಗಿ ಸುಮಾರು ೫೦ ವರ್ಷಗಳ ವರೆಗೆ ಬಹು ವಿತರಣೆಯಿಂದಾಳಿ ಕರ್ಣಾಟಕಕ್ಕೇ ಕೇವಲ ದಕ್ಷಿಣ ಹಿಂದೂಸ್ಥಾನಕ್ಕೇ ಶಾಶ್ವತವಾದ ಕೀರ್ತಿಯನ್ನು ತಂದನು. ಆಳ್ವಿಕೆಯ ದಿನದಿಂದಿವನು ತನ್ನ ಹೆಸರಿನಿಂದಲೇ ಒಂದು ಶಕವನ್ನು ಆರಂಭಿಸಿದನು. ಇವನ ವ್ಯಾಪ್ತಿಯನ್ನೂ, ಇವನ ಕ್ಷಾತ್ರವನ್ನೂ, ಇವನ ಸಾಮ್ರಾಜ್ಯವೈಖರಿಯನ್ನೂ ನೋಡಿದರೆ ವಿಕ್ರಮಾದಿತ್ಯನನ್ನು ಮೌರ್ಯರ ಅಶೋಕನಿಗೂ, ಗುಪ್ತರ ಹರ್ಷನಿಗೂ, ಬಾದಾಮಿ ಚಾಳುಕ್ಯರ ಇಮ್ಮಡಿ ಪುಲಕೇಶಿಗೂ ಹೋಲಿಸ ಬೇಕಲ್ಲದೆ ಇತಿಹಾಸದಲ್ಲಿ ಮತ್ತಾರೂ ಸಿಗಲಾರರು. ಇವನ ಆಸ್ಥಾನ ಕವಿಯಾದ ಬಿಲ್ಹಣನು ತನ್ನ ವಿಕ್ರಮಾಂಕದೇವ ಚರಿತೆಯಲ್ಲಿ ಇವನ ವಿಷಯವೆಲ್ಲವನ್ನೂ ವಿಶದೀಕರಿಸಿರುವನು. ವಿಜ್ಞಾನೇಶ್ವರದಲ್ಲ ಮಿತಾಕ್ಷರನು ವಿಕ್ರಮಾದಿತ್ಯನನ್ನು ಕುರಿತು "ಈ ಪ್ರಪಂಚದಲ್ಲಿ ಕಲ್ಯಾಣವನ್ನು ಮೀರಿಸುವ ನಗರಿಯೂ, ವಿಕ್ರಮನನ್ನು ಮೀರಿಸುವ ಚಕ್ರವರ್ತಿಯೂ ಹಿಂದಿರಲಿಲ್ಲ, ಈಗ ಇಲ್ಲ, ಮುಂದಿರಲಾರದು" ಎಂಬದಾಗಿ ಹೇಳಿರುವನು.

ಇವನಿಗೆ ಸೋಮಲದೇವಿ, ಲಕ್ಷ್ಮೀದೇವಿ, ಜಕ್ಕಲದೇವಿ, ಮಲ್ಲೆಯಮಹಾದೇವಿ, ಚಂದಲದೇವಿ, ಮಾಳಲದೇವಿಯೆಂದನೇಕ ಅರಸಿಯರಿದ್ದರು. ಇವರೆಲ್ಲರೂ ಸಾಮಂತ ರಾಜಪುತ್ರಿಯರು. ಜಯಕರ್ಣ, ಸೋಮೇಶ್ವರ ರೆಂಬಿಬ್ಬರು ಪುತ್ರರೂ, ಮೈಳಲದೇವಿಯೆಂಬೊಬ್ಬ ಮಗಳೂ ಇದ್ದರು.

**ಸಾಮಂತರೂ ಸಾಮ್ರಾಜ್ಯವೂ** :—ಹಾನುಂಗಲ್ಲು ಕದಂಬ ವಂಶದ ಮಹಾಮಂಡಲೇಶ್ವರ ಇಮ್ಮಡಿ ಕೀರ್ತಿವರ್ಮ ಇಮ್ಮಡಿ ತೈಲರು ಬನವಸಿಯನ್ನೂ; ಗೋವೆಯ ಕದಂಬಕುಲದ ಮಹಾಮಂಡಲೇಶ್ವರ ಗೋವಲನು ಪಲಸಿಗೆಯನ್ನೂ; ಇಮ್ಮಡಿ ಜಯಕೇಸಿಯು ಪೈವೆ ಕೊಂಕಣ, ಕವಡಿ ದ್ವೀಪಗಳನ್ನೂ; ಗಂಗವಂಶೀಯನಾದ ಮಹಾಮಂಡಲೇಶ್ವರ ಉದಯಾದಿತ್ಯ ಗಂಗಪೆರ್ಮಾನಡಿಯು ಬನವಸಿ, ಸಾಂತಳಿಗೆಯನ್ನೂ; ಹೊಯ್ಸಳ ಕುಲದ ಮೊದಲನೆಯ ಬಲ್ಲಾಳ ಮತ್ತು ವಿಷ್ಣುವರ್ಧನರು ಗಂಗವಾಡಿಯನ್ನೂ; ಮಹಾ ಮಂಡಲೇಶ್ವರ ತ್ರಿಭುವನಮಲ್ಲಪಾಂಡ್ಯದೇವನು ನೊಳಂಬವಾಡಿಯನ್ನೂ; ತ್ರಿಭುವನಮಲ್ಲ ಕಾಮದೇವನು ಕೊಂಕಣ ರಾಷ್ಟ್ರವನ್ನೂ; ಶಿಲಾಹಾರಕುಲದ ಅನಂತದೇವನು ಕೊಂಕಣವನ್ನೂ; ಕಲಿಯಮರಸನು ಬನವೂರನ್ನೂ; ರಟ್ಟವಂಶೀಯನಾದ ಮಹಾ ಸಾಮಂತ ಧಾಡೀಭಡಕನು ಸೀತಾ ಬಿದ್ದಿಯಲ್ಲೂ; ಮಹಾಮಂಡಲೇಶ್ವರ ಇಮ್ಮಡಿ ಕನ್ನಕೈರನು ಮತ್ತು ಇಮ್ಮಡಿ ಕಾರ್ತವೀರ್ಯರು ಸೌಂದತ್ತಿಯಲ್ಲೂ; ಸಿಂದವಂಶೋತ್ಪನ್ನನಾದ ಮಹಾಮಂಡಲೇಶ್ವರ ಮುಂಜನು ತಡಗುಂಡಿಯಲ್ಲೂ; ಹೈಹಯವಂಶೀಯ ಮಹಾ ಮಂಡಲೇಶ್ವರ ಯಾಸೆಮರಸನು ಕಮ್ಮರವಾಡಿಯಲ್ಲೂ ಆಳುತ್ತಿದ್ದರು. ಇವರಲ್ಲದೆ ಮಹಾಸಾಮಂತಾಧಿಪತಿಯಾದ ಬಮ್ಮರಸ, ಉದಯಾದಿತ್ಯ, ಶ್ರೀಪತಿಯರಸ, ಮಹಾಪ್ರಧಾನ ಅನಂತಪಾಲ ಮುಂತಾದವರು ಚಾಳುಕ್ಯ ಸಾಮ್ರಾಜ್ಯ ಸೌಧಕ್ಕೆ ಕಂಬಗಳಂತಿದ್ದರು. ಯುವರಾಜ ಮುಮ್ಮಡಿ ಜಯಸಿಂಹನು ಬನವಸಿಯನ್ನಾಳುತ್ತಿದ್ದನು. ವಿಕ್ರಮನ ಮಹಿಷಿಯರಾದ ತಾರಾದೇವಿಯು ಮಂಗಳವಾಡದಲ್ಲೂ. ಕಿರಿಯರಸಿ ಲಕ್ಷ್ಮೀ

ದೇವಿಯು ಕಲ್ಯಾಣದಲ್ಲೂ, ಪಿರಿಯರಸಿ ಚಂದಲದೇವಿಯು ರುದ್ದ ಪಾಡಿಯಲ್ಲೂ, ಮಲ್ಲೆಯ ಮಹಾದೇವಿಯು ಕಿರಿಯಕೆರೆಯೂರಲ್ಲೂ ರಾಜ್ಯಾಡಳಿತವನ್ನು ನಡೆಸುತ್ತಿದ್ದರು. ಇದರಿಂದಲೇ ವಿಕ್ರಮಾದಿ ತ್ಯನ ಸಾಮ್ರಾಜ್ಯ ವಿಸ್ತಾರವೂ, ರಾಜ್ಯಾಂಗ ವ್ಯವಸ್ಥೆಯ ವೈಖ ರಿಯೂ ಹೊರಬೀಳುತ್ತದೆ.

ವಿಕ್ರಮಾದಿತ್ಯನಾಳ್ವಿಕೆಯ ಕಡೆ ದಿನಗಳಲ್ಲಿ ಹೊಯ್ಸಳ ವಿಷ್ಣು ವರ್ಧನನು ಸ್ವತಂತ್ರನಾಗಲೆತ್ನಿಸಿ ದಂಡನಾಯಕ ಗಂಗರಾಜನ ನಾಯಕತ್ವದಲ್ಲಿ, ಸೈನ್ಯಸಮೇತನಾಗಿ ಬಂದು ವಿಕ್ರಮಾದಿತ್ಯನನ್ನು ಕಣ್ಣೆಗಾಲವೆಂಬಲ್ಲಿ ಎದುರಿಸಿದನು. ಇದೇ ಸಮಯವೆಂದರಿತು, ಸಾಮಂತರಾದ ಗೋವೆಯ ಕದಂಬರೂ, ನೊಳಂಬವಾಡಿಯ ಪಾಂ ಡ್ಯರೂ, ಕರಾಡದ ಶಿಲಾಹಾರರೂ ದಂಗೆಯೆದ್ದರು. ಆದರೆ ಮುಮ್ಮಡಿ ಸೋಮೇಶ್ವರನು ಗದ್ದುಗೆಯನ್ನೇರುತ್ತಲೇ ಪ್ರತಿಭಟಿಸಿದ ಸಾಮಂತರಲ್ಲರೂ ಅಡಗಿದರು. ಇವನಿಗೆ 'ಭೂಲೋಕಮಲ್ಲ' ನೆಂದೂ 'ಸರ್ವಜ್ಞ ಚಕ್ರವರ್ತಿ' ಯೆಂದೂ ಹೆಸರು. ಇವನು ಸಂಸ್ಕೃ ತದಲ್ಲಿ 'ಅಭಿಲಷಿತಾರ್ಥ ಚಿಂತಾಮಣಿ' ಅಥವಾ 'ಮಾನಸೋಲ್ಲಾಸ' ವೆಂಬ ಗ್ರಂಥವನ್ನು ಬರೆದಿರುವನು.

ಸೋಮೇಶ್ವರನು ಸಿಂಹಾಸನವನ್ನೇರಿದೊಡನೆಯೇ ದಿಗ್ವಿಜಯ ಹೊರಟು ಸಾಮ್ರಾಜ್ಯಶಾಂತಿಗೆ ಭಂಗವನ್ನು ತರಲೆಳಸಿದ್ದ ಸಾಮಂ ತರಿಗೆಲ್ಲ ಬುದ್ಧಿ ಗಲಿಸಿದನು.

ಕ್ರಿ. ಶ. ೧೧೩೮ರ ಸುಮಾರಿನಲ್ಲಿ ಪಟ್ಟಕ್ಕೆ ಬಂದ ಇಮ್ಮಡಿ ಪೆರ್ಮ ಜಗದೇಕಮಲ್ಲನು ಸೋಮೇಶ್ವರನ ಹಿರಿಯ ಮಗನು. ಇವನ ತಮ್ಮನೇ ಮುಮ್ಮಡಿ ತೈಲನು. ಪೆರ್ಮ ಜಗದೇಕಮಲ್ಲನ ಕಾಲ ದಲ್ಲೂ ಹೊಯ್ಸಳರು ಸ್ವತಂತ್ರರಾಗಲು ಬಹಳ ಪ್ರಯತ್ನ ಮಾಡುತ್ತಿ ದ್ದರು.

**ಚಾಳುಕ್ಯರ ಪತನವೂ ಕಲಚುರ್ಯರ ರಾಜ್ಯಾಪಹಾ ರವೂ:**—ಜಗದೇಕಮಲ್ಲನ ಸಾಮಂತರಲ್ಲೊಕರಲ್ಲ ಕಲಚುರ್ಯ ವಂಶದ

ಬಿಜ್ಜಳನೂ ಒಬ್ಬನು. ಇವನು ನೊಳಂಬವಾಡಿ ೩೨,೦೦೦ ಸಾಮಂತನಾಗಿದ್ದನು. ಜಗದೇಕಮಲ್ಲನ ಅನಂತರ ತಮ್ಮನಾದ ನೂರ್ಮಡಿ ಅಥವಾ ಮುಮ್ಮಡಿ ತೈಲನಿಗೆ ಕ್ರಿ. ಶ. ೧೧೫೦ ರಲ್ಲಿ ಪಟ್ಟಬಂಧೋತ್ಸವವಾಯಿತಷ್ಟೆ. ಸಾಮಂತನಾಗಿದ್ದ ಬಿಜ್ಜಳನು ಪ್ರಬಲನಾಗಿ ರಾಜ್ಯಾಂಗ ಸೂತ್ರಗಳೆಲ್ಲವನ್ನೂ ತನ್ನ ಕೈಲಿರಿಸಿಕೊಂಡನು. ಬಿಜ್ಜಳನ ಕಾಟದಿಂದಲೇ ಬಹುತರ ರಾಜಧಾನಿಯನ್ನಿವನು ಕಲ್ಯಾಣದಿಂದ ಬನವಾಸಿಗೆ ಒಯ್ದುದು. ಈ ಮಧ್ಯೆ ಕಾಕತೀಯವಂಶದ ಪ್ರೋಲನು ತೈಲಪನನ್ನು ಯುದ್ಧದಲ್ಲಿ ಎದುರಿಸಿ ಕ್ರಿ. ಶ. ೧೧೬೨-೬೩ ರಲ್ಲಿ ಅವನನ್ನು ಕೊಂದನು. ಆಗ ಚಾಳುಕ್ಯ ಸೈನ್ಯಕ್ಕೆಲ್ಲ ಬಿಜ್ಜಳನೇ ನಾಯಕನಾಗಿದ್ದನು. ಇದೇ ಸಮಯವೆಂದರಿತು ಸ್ವಾಮಿದ್ರೋಹದಿಂದ ತೈಲನ ಮಗ ಸೋಮೇಶ್ವರನನ್ನು ಓಡಿಸಿ ತಾನೇ ರಾಜನಾದನು. ಸದ್ದಿಲ್ಲದೆ ಚಾಳುಕ್ಯ ಮನೆತನವು ಬಿದ್ದು ಹೋಯಿತು.

---

## ೬ ಕಲಚುರ್ಯರು

**ಪೂರ್ವ ವೃತ್ತಾಂತ** :— ಮಧ್ಯಪ್ರಾಂತದಲ್ಲಿ ಹೈಹಯ, ಚೇದಿ ಅಥವಾ ಕಲಚುರ್ಯ ವಂಶದರಸರಿದ್ದರೆಂದು ಹಿಂದೆಯೇ ತಿಳಿದೆವು. ಕಲ್ಯಾಣಿಯ ಕಲಚುರ್ಯರೂ ಆ ವಂಶಕ್ಕೆ ಸೇರಿದವರೆಂದು ಹೇಳಿಕೆಯುಂಟು. ಇವರದು ಸುವರ್ಣ ವೃಷಭ ಧ್ವಜ. ಜೋಗಮನೇ ಈ ವಂಶದ ಮೂಲಪುರುಷನು. ಇವನ ಮಗನೇ ಪೆರ್ಮಾಡಿ. ಇವನು ಮುಮ್ಮಡಿ ಸೋಮೇಶ್ವರನಿಗೆ ಸಾಮಂತನಾಗಿ ತರ್ದವಾಡಿ ನಾಡನ್ನು ಆಳುತ್ತಿದ್ದನು. ಇವನ ಮಗನೇ ಚಾಳುಕ್ಯ ಸಿಂಹಾಸನವನ್ನಾಕ್ರಮಿಸಿದ. ತ್ರಿಭುವನಮಲ್ಲ, ಭುಜಬಲ ಚಕ್ರವರ್ತಿ, ಕಲಚುರ್ಯ ಚಕ್ರವರ್ತಿ ಮೊದಲಾದ ಬಿರುದುಗಳನ್ನು ವಹಿಸಿದ ಬಿಜ್ಜಳನು. ಈ ಮನೆತನದ ನಾಲ್ಕೈದರಸರು ಕೇವಲ ೨೦-೨೫ ವರ್ಷಗಳು ಮಾತ್ರ ರಾಜ್ಯಾಡಳಿತವನ್ನು ನಡೆಸಿದರು. ಈ ಕಾಲದಲ್ಲಿ ಗಣನೆಗೆ ತರಬೇಕಾದ ರಾಜಕೀಯ ಬದಲಾವಣೆಗಳು ಏನೂ ಆಗಲಿಲ್ಲ. ಆದರೆ ಧಾರ್ಮಿಕ

ಕ್ರಾಂತಿ ದೃಷ್ಟಿಯಿಂದ ಕಾಲಚುರ್ಯರಾಳ್ವಿಕೆಯು ಕರ್ಣಾಟಕ ಇತಿಹಾಸದಲ್ಲಿ ಅತ್ಯಂತ ಪ್ರಧಾನವೂ ಪವಿತ್ರವೂ ಆದುದು.

**ಬಿಜ್ಜಳನೂ ಬಸವನೂ**:—ಬಸವನು ಆರಾಧ್ಯಬ್ರಾಹ್ಮಣನು. ಇವನು ಬಿಜ್ಜಳನ ಪ್ರಧಾನನಾಗಿದ್ದ ಬಲದೇವನ ಅಳಿಯನು. ಅಲ್ಲದೆ ಬಿಜ್ಜಳನು ಬಸವನ ತಂಗಿಯನ್ನು ಮದುವೆಯಾದನು. ಅಲ್ಲದೆ ಬಸವನನ್ನು ಅಮಾತ್ಯನನ್ನಾಗಿ ನೇಮಿಸಿದನು. ಬಸವನು ವೀರಶೈವ ಮತೋದ್ಧಾರಕ್ಕಾಗಿ ಬಹಳ ಪ್ರಯತ್ನ ಪಡುತ್ತಿದ್ದನು. ಬಿಜ್ಜಳನಿಂದ ಲಭಿಸಿದ ಪದವಿಯೂ ಈ ಕಾರ್ಯಕ್ಕೆ ಸಹಾಯವಾಯಿತು. ಆದರೆ ಬಿಜ್ಜಳನು ಜೈನನು. ಸಹಜವಾಗಿ ಭಿನ್ನಮತಾನುಯಾಯಿಗಳಾದ ಬಿಜ್ಜಳ ಬಸವರಿಗೆ ಅಥವಾ ರಾಜಪ್ರಧಾನರಿಗೆ ವೈಮನಸ್ಯವು ದಿನೇ ದಿನೇ ವೃದ್ಧಿಯಾಯಿತು. ವೈಮನಸ್ಯವು ದ್ವೇಷದಲ್ಲಿ ಕೊನೆಗಂಡಿತು; ಕಡೆಗೆ ಪರಸ್ಪರ ಯುದ್ಧಕ್ಕೆ ಮೊದಲಾಯಿತು. ನಡೆದ ಕಲಹದಲ್ಲಿ ಬಿಜ್ಜಳನು ಬಸವನನ್ನು ಕೈಸೆರೆ ಹಿಡಿದನಾದರೂ, ಬಹುಬೇಗ ಪ್ರಬಲನಾದ ದ್ವೇಷಿಯೊಂದಿಗೆ ಸಂಧಿಮಾಡಿಕೊಂಡು, ಅವನನ್ನು ಅಮಾತ್ಯಸ್ಥಾನದಲ್ಲೇ ಇರಿಸಬೇಕಾಗಿ ಬಂತು. ಬಸವನಿಗೆ ವೀರಶೈವ ಮತ ಪ್ರಚಾರ ಕಾರ್ಯದಲ್ಲಿ ಉತ್ಸಾಹವು ಹೆಚ್ಚಿದ ಹಾಗೆಲ್ಲಾ ತನ್ನ ಮಾರ್ಗವನ್ನು ನಿರಾಪದವಾಗಿ ಮಾಡಿಕೊಳ್ಳಬೇಕೆಂಬ ಆತುರವು ಈ ರಾಜಕೀಯ ವ್ಯವಹಾರ ಚತುರನಿಗೆ ಹೆಚ್ಚಿತು. ಬಿಜ್ಜಳನ ಅನಂತರ ಬಾಲಕನೂ ತನ್ನ ಸೋದರಳಿಯನೂ ಆದ ರಾಯಮುರಾರಿ ಸೋವಿಯನ್ನು ತನ್ನ ಕೈಲಿರಿಸಿಕೊಳ್ಳಬಹುದೆಂದು ಯೋಚಿಸಿ, ವೀರಶೈವ ಮತ ದ್ವೇಷಿಯಾಗಿದ್ದ ಬಿಜ್ಜಳನನ್ನು ಕೊಲ್ಲಿಸಿದನು. ಈ ಕೊಲೆಯಲ್ಲಿ ಬಸವನಿಗೆ ಜವಾಬುದಾರಿಕೆಯು ಎಷ್ಟಿತ್ತೆಂಬ ವಿಚಾರದಲ್ಲಿ ಲಿಂಗಾಯಿತರ ಹೇಳಿಕೆಯೇ ಒಂದು ಬಗೆಯಾಗಿದೆ; ಜೈನರ ಹೇಳಿಕೆಯೇ ಮತ್ತೊಂದು ಬಗೆಯಾಗಿದೆ. ಈ ಎರಡು ಹೇಳಿಕೆಗಳೂ ನಿರ್ದುಷ್ಟವೂ, ನಿಷ್ಪಕ್ಷಪಾತವೂ ಆದವುಗಳೆಂದು ಹೇಳಲಾಗದು.

ಬಿಜ್ಜಳನ ಮರಣಾನಂತರ ಬಸವನು ಬಯಸಿದಂತಾಗಲಿಲ್ಲ. ತಂದೆಗೆ ಬಂದೊದಗಿದ ಅಪಮೃತ್ಯುವಿಗಾಗಿ ರಾಯಮುರಾರಿ ಸೋವಿ

ಯು ದುಃಖಿಸಿ ಹಗೆಯನ್ನು ತೀರಿಸಿಕೊಳ್ಳಲೇಬೇಕೆಂದು ಸೈನ್ಯ ಸಮೇತನಾಗಿ ಬಸವನನ್ನು ಎದುರಿಸಿದನು. ದಿಕ್ಕುತೋರದೆ ಬಸವನು ಉಳವೆಗೆ ಓಡಿದನು. ಸೋವಿಯು ಅವನನ್ನು ಹಿಂಬಾಲಿಸಿ, ಉಳಿವೆಯನ್ನುರುಳಿಸಿ, ಬಸವನನ್ನು ಕೊಲ್ಲುವ ಪ್ರಯತ್ನಮಾಡಲು, ಶತ್ರುವಿನ ಕೈಗೆ ಬೀಳಲು ಇಷ್ಟವಿಲ್ಲದೆ ಬಸವನು ಭಾವಿಯಲ್ಲಿ ಬಿದ್ದು ಮೃತನಾದನು.

**ಕಲಚುರ್ಯರೂ ಚಾಳುಕ್ಯರೂ** :—ಹೊಸದಾಗಿ ಸ್ಥಾಪಿಸಲ್ಪಟ್ಟ ಈ ಕಲಚುರ್ಯರ ಬಲವು ಬಿಜ್ಜಳನ ಸಾವಿನಿಂದ ಕುಗ್ಗಿತು. ಕೈಲಾಗದ ಸೋವಿದೇವನ ಕಾರ್ಯಕ್ರಮದಿಂದ ಎಲ್ಲವೂ ಹದಗೆಟ್ಟಿತು. ಕ್ರಿ. ಶ. ೧೧೮೩ ಸುಮಾರಿನಲ್ಲಿ ತೈಲನ ಮಗನಾದ ನಾಲ್ವಡಿ ಸೋಮೇಶ್ವರನು ತ್ರಿಭುವನಮಲ್ಲನೆಂಬ ಹೆಸರಿನಿಂದ ಚಾಳುಕ್ಯ ಮನೆತನವನ್ನು ಮತ್ತೆ ಉದ್ಧರಿಸಿದನು. ಈ ಕಾರ್ಯದಲ್ಲಿ ಸಹಾಯಕನಾದ, ದಂಡನಾಯಕ ಬ್ರಹ್ಮಣನಿಗೆ 'ಚಾಳುಕ್ಯರಾಜ್ಯ ಪ್ರತಿಷ್ಠಾಪಕ' ನೆಂಬ ಹೆಸರು ಬಂತು. ಸೋಮೇಶ್ವರನು ಮೊಟ್ಟ ಮೊದಲು ಅಣ್ಣಿಗೇರಿ (ಧಾರವಾಡಜಿಲ್ಲೆ) ಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದು, ಅನಂತರ ಪುರಾತನವೂ, ಹಿರಿಯರಾವಾಸವೂ ಆಗಿದ್ದ ಕಲ್ಯಾಣವನ್ನು ಸಾಧಿಸಿದನು. ಮಹಾಸಾಮಂತರೂ, ಮಾಂಡಲಿಕರೂ ಆಗಿದ್ದ ಗಂಗರೂ, ಹಾನುಂಗಲ್ಲು ಕದಂಬರೂ, ಸೋಮೇಶ್ವರನ ಪ್ರಾಜಾಪತ್ಯವನ್ನು ಅಂಗೀಕರಿಸಿದರು.

**ಹೊಯ್ಸಳರು** :—ಆದರೇನು ಬಹುಬೇಗ, ಚಾಳುಕ್ಯ ವಂಶಾಕಾಶದಲ್ಲಿ ಕಾಣಬಂದ ಪ್ರತೀಕ್ಷಾಭಾಸ್ಕರನಸ್ತಂಗತನಾದನು. ಹೊಯ್ಸಳರನ್ನೇ ರಾಜ್ಯಶ್ರೀಯು ಒಲಿದಂತೆ ಕಾಣಬಂತು.

ರಾಯಮುರಾರಿ ಸೋವಿಯ ಅನಂತರ ಅವನ ಸೋದರರಾದ ನಿಶ್ಶಂಕಮಲ್ಲ ಸಂಕಮ, ವೀರನಾರಾಯಣ ಆಹವಮಲ್ಲ ಮತ್ತು ಸಿಂಘಣರು, ಕಲಚುರಿ ರಾಜ್ಯಸ್ಥಾಪನೆಗಾಗಿ ಪ್ರಯತ್ನಪಟ್ಟರಾದರೂ ಕ್ಷಣಕ್ಷಣವೂ ಬಲಿಷ್ಠರಾಗಿ ಚಾಳುಕ್ಯ ರಾಜ್ಯವೆಲ್ಲವನ್ನೂ ವ್ಯಾಪಿಸುತ್ತಿದ್ದ ಹೊಯ್ಸಳ ಬಲ್ಲಾಳರ ಮುಂದೆ ಇವರು ನಿಲ್ಲಲಾರದೆ ಹೋದರು.

---

## ೩ ಹೊಯ್ಸಳರು

ಹೊಯ್ಸಳರು ಕ್ರಿ. ಶ. ೧೧ ನೆಯ ಶತಮಾನದಿಂದ ೧೪ ನೆಯ ಶತಮಾನದ ಮಧ್ಯಕಾಲದವರೆಗೂ, ಚಾಳುಕ್ಯ ಮತ್ತು ಗಂಗರಸರಾಳುತ್ತಿದ್ದ ಭಾಗದಲ್ಲಿ ಆಳುತ್ತಿದ್ದರು. ಕ್ರಮೇಣ ಇವರು ದಕ್ಷಿಣದಲ್ಲಿ ಚೋಳರನ್ನೂ, ಪಾಂಡ್ಯರನ್ನೂ, ಸೋಲಿಸಿದರು. ಕರ್ಣಾಟಕದೇಶದಲ್ಲಿ ದ್ವಾರಸಮುದ್ರವೂ, ದ್ರಾವಿಡ ದೇಶದಲ್ಲಿ ವಿಕ್ರಮಪುರಿ (ಕುನ್ನಾನೂರು) ಯೂ ಇವರ ರಾಜಧಾನಿಗಳಾಗಿದ್ದುವು. ಮೊದಲಿನಿಂದಲೂ ಇವರು ಚಾಳುಕ್ಯರಿಗೆ ಸಾಮಂತರಾಗಿದ್ದರು; ಅವರ ಸೈನ್ಯದಲ್ಲೇ ಅರಸರನೇಕರು ದಂಡನಾಯಕರಾಗಿದ್ದು 'ಚಾಳುಕ್ಯ ರಾಜ್ಯಸ್ಥಾಪಕ' ರೆಂಬ ಹೆಸರನ್ನು ಪಡೆದರು. ವಿಷ್ಣುವರ್ಧನನ ಕಾಲದಲ್ಲಿ ಹೊಯ್ಸಳರು ಸಂಪೂರ್ಣ ಸ್ವತಂತ್ರರಾದರು.

**ಪೂರ್ವವೃತ್ತಾಂತ** :—ಕದಂಬ ಕುಲದವರಂತೆ ಹೊಯ್ಸಳರೂ ಕರ್ಣಾಟಕ ದೇಶೀಯರೇ. ಇವರ ವಂಶೀಯರು ಮೊದಲು ಶಶಾಂಕಪುರ, ಸೊಸೆವೂರಲ್ಲಿ (ಅಂಗಡಿ) ದ್ದರು. ಚಂದ್ರ ವಂಶೀಯರೆಂದೂ, ಯಾದವ ವಂಶೋತ್ಪನ್ನರೆಂದೂ ಹೇಳಿಕೊಂಡಿರುವರು. ಇವರು ಜೈನಮತಾನುಯಾಯಿಗಳು. ಶಾರ್ದೂಲಧ್ವಜವಿವರದು. ಇವರ ಮೂಲಪುರುಷನಿಗೆ ಸಳನೆಂದು ಹೆಸರು. ಹೊಯ್ಸಳರಾಜ್ಯ ಸ್ಥಾಪನಾ ವಿಚಾರದಲ್ಲಿ ಹಲಕೆಲವು ಶಾಸನಸ್ಥವಾದ ಕಥೆಗಳುಂಟು. ಸಳನು ಕಾಂತಾರ ಪ್ರಾಂತದಲ್ಲಿದ್ದ ತನ್ನ ಮನೆದೇವತೆಯಾದ ವಾಸಂತಿಕಾದೇವಿಯ ಸೇವೆಗಾಗಿ ಹೋಗಿ ಧ್ಯಾನ ಪರವಶನಾಗಿರಲು ಅಲ್ಲಿಗೊಮ್ಮೆ ಹುಲಿಯು ಬಂತು. ಆಗಲಾ ದೇವಾಲಯದ ಆಚಾರ್ಯನು ಸಳನ ಕೈಗೊಂದು ಸಲಾಕೆಯನ್ನು ಕೊಟ್ಟು 'ಹೊಯ್-ಸಳ' ಎನಲು ಅವನ ಆಜ್ಞೆಯಂತೆ ಆ ಸಲಾಕೆಯಿಂದ ಹುಲಿಯನ್ನು ಕೊಂದನು. ಅಂದಿನಿಂದ ಇವನ ವಂಶೀಯರಿಗೆ 'ಹೊಯ್ಸಳ' ರೆಂದು ಹೆಸರಾಯಿತು.

ಹುಲಿಯನ್ನು ಕೊಂದು ಆ ಪ್ರಾಂತದ ಜನರಿಗೆ ಉಪಕಾರ ಮಾಡಿದನಾದ ಕಾರಣ ಅವರೆಲ್ಲರೂ ಇವನನ್ನು ಸ್ವಾಮಿಯೆಂದೆಣಿಸಿದರು. ಆಚಾರ್ಯನೂ ಇವನನ್ನಾಶೀರ್ವದಿಸಿ ದ್ವಾರಾವತಿಯನ್ನು

ಉದ್ಧಾರವಾದೆಂಬದಾಗಿ ಹೇಳಿದನು. ಇದರಿಂದ ಸಳನೆಂಬುವನು ಈ ಮನೆತನದ ಮೊದಲಿಗನೆಂದೂ, ದ್ವಾರಸಮುದ್ರದ ಸುತ್ತಮುತ್ತಲಿನ ಪ್ರದೇಶಕ್ಕಿವನು ಅಧಿಪನಾಗಿದ್ದನೆಂದೂ ಕಾಣಬರುತ್ತದೆ.

ಹಲವು ಶಾಸನಗಳಲ್ಲಿ ನೃಪಕಾಮನೆಂಬವನೊಬ್ಬನ ಹೆಸರು ಕಂಡು ಬರುತ್ತದೆ. ಇವನಿಗೂ ಸಳನಿಗೂ ಏನು ಸಂಬಂಧವಿತ್ತೋ ಗೊತ್ತಿಲ್ಲ. ಸಳನ ಮಗನಾದ ವಿನಯಾದಿತ್ಯನು ಕ್ರಿ. ಶ. ೧೦೪೭ ರಿಂದ ೧೧೦೦ ವರೆಗೂ ಪಿತ್ರಾರ್ಜಿತ ರಾಜ್ಯದಲ್ಲಿ ಆಡಳಿತವನ್ನು ನಡೆಸಿದನು. ಚಾಳುಕ್ಯ ತ್ರೈಲೋಕ್ಯಮಲ್ಲನಿಗೆ ಅಧೀನನಾಗಿದ್ದುಕೊಂಡು, ಘಟ್ಟದ ಸೀಮೆಯಲ್ಲಿ ರಾಜ್ಯವನ್ನು ವಿಸ್ತರಿಸಿ 'ಮಲಪರೊಳ್ಗಂಡ' ನೆಂಬ ಹೆಸರನ್ನು ಸಾರ್ಥಕಪಡಿಸಿಕೊಂಡನು. ಇವನಿಗೆ ಕೆಳೆಯಲದೇವಿಯೆಂಬ ರಾಣಿಯೂ ಎರೆಯಂಗನೆಂಬ ಮಗನೂ ಇದ್ದರು. ಕ್ರಿ. ಶ. ೧೦೬೨ ಸುಮಾರಿನಲ್ಲಿ ಎರೆಯಂಗನಿಗೆ ಯೌವರಾಜ್ಯಾಭಿಷೇಕವಾಯಿತು. ತಂದೆಯಾಳ್ವಿಕೆಯಲ್ಲಿ ರಣಪರಾಕ್ರಮಿಯಾದ ಎರೆಯಂಗನು ರಾಜ್ಯ ವಿಸ್ತಾರ, ರಾಜ್ಯ ವ್ಯವಸ್ಥಾ ಕಾರ್ಯಗಳಲ್ಲಿ ಬಹು ಸಹಾಯಕನಾಗಿದ್ದನು. ಚಾಳುಕ್ಯರ ದಳಪತಿಯಾಗಿದ್ದು ಇವನು ಮಾಳವೀಯರನ್ನು ಸೋಲಿಸಿ, ಧಾರಾನಗರವನ್ನು ಸುಟ್ಟು ಬೂದಿಮಾಡಿದನು. ಯುದ್ಧಕ್ಕೆ ಕಾಲ್ಕೆರೆಯುತ್ತಿದ್ದ ಚೋಳರನ್ನೆದುರಿಸಿ ಅವರಿಗನವರತವೂ ಯಮಸ್ವರೂಪನಾಗಿದ್ದನು. ಚಾಳುಕ್ಯಸಾಮ್ರಾಜ್ಯಕ್ಕೆ ಸ್ಥೈರ್ಯವನ್ನೂ, ಹೊಯ್ಸಳ ರಾಜ್ಯಕ್ಕೆ ಗೌರವವನ್ನೂ ತಂದವನಿವನೆ. ತಂದೆಯಾಳ್ವಿಕೆಯಲ್ಲೇ ಇವನು ಮೃತಪಟ್ಟನಾದಕಾರಣ, ವಿನಯಾದಿತ್ಯನ ತರುವಾಯ ಎರೆಯಂಗನ ಮಗನಾದ ಮೊದಲನೆಯ ಬಲ್ಲಾಳನು ಕ್ರಿ. ಶ. ೧೧೦೧ ರಲ್ಲಿ ಪಟ್ಟಕ್ಕೆ ಬಂದು ೨-೩ ವರ್ಷಗಳು ಮಾತ್ರ ಸಿಂಹಾಸನದ ಮೇಲಿದ್ದು, ತನ್ನ ತಮ್ಮನೂ, ಹೊಯ್ಸಳಸಾಮ್ರಾಜ್ಯಧ್ವಜನೂ ಆದ ಬಿಟ್ಟಿದೇವನಿಗೆ ಸಿಂಹಾಸನವನ್ನು ಬಿಟ್ಟುಕೊಟ್ಟನು.

**ಬಿಟ್ಟಿದೇವ**:—ಇವನು ಬಹು ಶೂರನು. ಚಾಳುಕ್ಯ ವಿಕ್ರಮಾದಿತ್ಯನಿವನನ್ನು ಬಹಳವಾಗಿ ಗೌರವಿಸಿದನು. ಇವನ ಸ್ವಾತಂತ್ರ್ಯ

ದ್ಯಮವನ್ನು ಚಾಳುಕ್ಯರ ಕಾಲದಲ್ಲೇ ಕಂಡೆವು. ಹೊಯ್ಸಳ ಸಿಂಹಾಸನದ ಮೇಲಿವನು ಸುಮಾರು ೩೫–೩೬ ವರ್ಷಗಳ ಕಾಲವಿದ್ದು, ಸ್ವತಂತ್ರನಾಗಿ, ಹೊಯ್ಸಳ ಸಾಮ್ರಾಜ್ಯಕ್ಕೆ ಅಡಿಗಲ್ಲನ್ನು ಹಾಕಿದನು.

**ವಿಷ್ಣುವರ್ಧನನೂ ರಾಮಾನುಜಾಚಾರ್ಯನೂ:**—ಕ್ರಿ. ಶ. ೧೨ನೆಯ ಶತಮಾನದಲ್ಲಿ ರಾಮಾನುಜಾಚಾರ್ಯನು ಹುಟ್ಟಿ ವೈಷ್ಣವ ಮತೋದ್ಧಾರವನ್ನು ಮಾಡಿದನಷ್ಟೆ. ಚೋಳರಾಜ್ಯದಲ್ಲಿವನು ಕೈಕೊಂಡಿದ್ದ ಘನಕಾರ್ಯಕ್ಕೆ ತೊಂದರೆಗಳು ಬಂದೊದಗಲು, ಶೈವಮತ ಪಕ್ಷಪಾತಿಗಳಾದ ಚೋಳರ ಆಗ್ರಹಕ್ಕೊಳಗಾಗಲು, ರಾಮಾನುಜಾಚಾರ್ಯನು ಕರ್ಣಾಟಕದೇಶಕ್ಕೆಬಂದು, ಬಿಟ್ಟಿದೇವನ ರಕ್ಷಣೆಗೊಳಗಾದನು. ಹೊಯ್ಸಳರು ಜೈನರಾದರೂ ಬಿಟ್ಟಿದೇವನು ಕ್ರಿ.ಶ. ೧೧೧೭ ಸುಮಾರಿನಲ್ಲಿ ರಾಮಾನುಜಾಚಾರ್ಯನಿಂದ ಶ್ರೀ ವೈಷ್ಣವ ಮತವನ್ನು ಸ್ವೀಕರಿಸಿ, ವಿಷ್ಣುವರ್ಧನನೆಂಬ ಹೆಸರನ್ನಿಟ್ಟುಕೊಂಡನು. ಇಂದಿನಿಂದ ಹೊಯ್ಸಳ ಇತಿಹಾಸವೇ ಒಂದು ನವೀನ ಮಾರ್ಗವನ್ನು ಅನುಸರಿಸಿತೆಂದು ಹೇಳಬೇಕು. ಈ ಧಾರ್ಮಿಕ ಕ್ರಾಂತಿಯು ಹೊಯ್ಸಳ ಸಾಮ್ರಾಜ್ಯದಲ್ಲೆಲ್ಲಾ ನವಜೀವನವನ್ನುಂಟುಮಾಡಿತು. ಮೊದಲು ಮೊದಲು ಜೈನರಿಗೂ ವೈಷ್ಣವರಿಗೂ, ಸಹಜವಾಗಿ ವೈಷಮ್ಯಗಳುಂಟಾದರೂ, ಬಹು ಬೇಗ ಪರಸ್ಪರ ಸೌರಸ್ಯವುಂಟಾಯಿತು.

ವಿಷ್ಣುವರ್ಧನನು ತನ್ನ ಸಾಹಸದಿಂದ ರಾಜ್ಯವನ್ನು ವಿಸ್ತರಿಸಿ ವೀರಗಂಗ, ವಿಕ್ರಮಗಂಗ, ತ್ರಿಭುವನಮಲ್ಲ ಎಂಬನೇಕ ಬಿರುದುಗಳನ್ನು ಪಡೆದನು. ಕರ್ಣಾಟಕ ಸಾಹಿತ್ಯೋದ್ಯಮಕ್ಕೆ ಇವನಿತ್ತ ಆಶ್ರಯವು ಸ್ತೋತ್ರಾರ್ಹವಾದುದು. ನಾಗಚಂದ್ರ, ರಾಜಾದಿತ್ಯ, ವಿಷ್ಣುದಂಡಾಧಿಪ, ಸಾಮಂತಹಂತ, ಕಂತಿ ಮೊದಲಾದ ಮಹಾ ಮಹಾ ಪ್ರತಿಭಾಶಾಲಿಗಳಾದ ಕವಿವರ್ಯರಿವನ ಅಸ್ಥಾನದಲ್ಲಿದ್ದರು.

ವಿಷ್ಣುವರ್ಧನನ ಪಿರಿಯರಸಿಯು ಶಾಂತಲದೇವಿ. ಈಕೆಯು ಜೈನಳು. ಈಕೆಯ ಮರಣಾನಂತರ ವೈಷ್ಣವಮತಸ್ಥಳಾದ ಲಕ್ಷ್ಮೀದೇವಿಯನ್ನು ಮದುವೆಯಾದನು. ಆಕೆಯ ಹೊಟ್ಟೆಯಲ್ಲಿ ನರಸಿಂಹ

ನೆಂಬವನುದಯಿಸಿ ಕ್ರಿ. ಶ. ೧೧೫೨ ಸುಮಾರಿನಲ್ಲಿ ಪಟ್ಟಕ್ಕೆ ಬಂದನು. ಇವನ ಕಾಲದಲ್ಲಿ ಅಂತಹ ಗಣ್ಯವಾದ ವಿಚಾರಗಳೇನೂ ಕಾಣಬರುವುದಿಲ್ಲ.

**ವೀರಬಲ್ಲಾಳ** :—ಕ್ರಿ. ಶ. ೧೧೭೩ ರಲ್ಲಿ ಸಿಂಹಾಸನಕ್ಕೆ ಬಂದ ಇವನ ಮಗನಾದ ವೀರಬಲ್ಲಾಳನೇ ಮಹಾಶೂರನು. ಸಾಮ್ರಾಜ್ಯ ವಿಸ್ತಾರ ಕಾರ್ಯಕ್ಕೆ ಕಂಕಣಕಟ್ಟಿ, ಕಾಲಚುರ್ಯ, ಯಾದವ, ಪಾಂಡ್ಯರನ್ನು ಮಟ್ಟ ಹಾಕಿದನು. ಇವನು ಪಟ್ಟಕ್ಕೆ ಬಂದಾಗ ಹೊಯ್ಸಳರು ಸ್ವತಂತ್ರರಾಗಿದ್ದರು. ದೇಶದಲ್ಲಿ ಶಾಂತಿಯೂ ಸುಭಿಕ್ಷವೂ ಹೆಚ್ಚಿತ್ತು. ಸಾಮ್ರಾಜ್ಯೋನ್ನತಿಯಲ್ಲಿ ಗಮನವಿಟ್ಟು ಪ್ರಜೆಗಳು ರಾಜನನ್ನು ವಿಜಯಯಾತ್ರೆಗೆ ಹೊರಡುವಂತೆ ಪ್ರೋತ್ಸಾಹಿಸಿದರು. ಈ ಬಗೆಯ ಪ್ರಜಾಬಲದಿಂದಲೂ, ಸ್ವಬಾಹುಬಲದಿಂದಲೂ ನೊಡಲು ಕಲಚುರ್ಯರನ್ನೂ ಯಾದವರನ್ನೂ ಎದುರಿಸಿ 'ಶನಿವಾರ ಸಿದ್ಧಿ' 'ಗಿರಿದುರ್ಗಮಲ್ಲ' ನೆಂಬ ಬಿರುದುಗಳನ್ನು ವಹಿಸಿದನು. ಯಾದವ ಜೈತುಗನನ್ನು ಸೋಲಿಸಿ ಅವನಿಂದ ಕುಂತಲದೇಶವೆಲ್ಲವನ್ನೂ ಪಡೆದನು. ಹೊಯ್ಸಳರಾಜ್ಯದ ಮೇರೆಯು ಕೃಷ್ಣಾನದಿಯನ್ನು ಮೀರಿತು. ವೀರಬಲ್ಲಾಳನು ಲೊಕ್ಕಿಗೊಂಡಿ (ಲಕ್ಕುಂಡಿ) ಯಲ್ಲಿ ಅರಮನೆಯನ್ನು ಕಟ್ಟಿಸಿ ಅದನ್ನು ರಾಜನಗರಿಯನ್ನಾಗಿ ಮಾಡಿದನು. ಅನಂತರ ತುಂಗಭದ್ರೆಯ ಸುತ್ತಮುತ್ತಲಿನ ಪ್ರಭುಗಳನ್ನು ಸಾಮಂತರನ್ನಾಗಿ ಮಾಡಿದನು. ಚಾಲುಕ್ಯರನ್ನೂ, ಚೋಳರನ್ನೂ, ಪಾಂಡ್ಯರನ್ನೂ ಮಟ್ಟ ಹಾಕಿ 'ದಕ್ಷಿಣದೇಶಾಧೀಶ್ವರ' 'ಚೋಳಕುಲಕಾಲಾಂತಕ' ನೆಂಬದಾಗಿ ಹೊಗಳಿಸಿಕೊಂಡನು. ಹೀಗೆ ವೀರಬಲ್ಲಾಳನು ಹೊಯ್ಸಳ ಸಾಮ್ರಾಜ್ಯ ಸ್ವಾತಂತ್ರ್ಯವನ್ನು ಸಂಪಾದಿಸಿ ಅದರ ಔನ್ನತ್ಯಕ್ಕೆ ಸ್ಥಿರವಾದ ಅಸ್ತಿಭಾರವನ್ನು ಹಾಕಿ, ದಾಕ್ಷಿಣಾತ್ಯ ಸಮಕಾಲೀನ ರಾಜ್ಯಗಳಲ್ಲೆಲ್ಲ ಹೊಯ್ಸಳರಾಜ್ಯದ ಹೆಸರನ್ನು ಹಬ್ಬಿಸಿದನು. ಇವನಿಗೆ ಪದ್ಮಲದೇವಿಯೆಂಬ ಪಟ್ಟದರಸಿಯಿದ್ದಳು. ನರಸಿಂಹನೆಂಬೊಬ್ಬ ಮಗನಿದ್ದನು.

ಈ ನರಸಿಂಹ ಅಥವಾ ವೀರನರಸಿಂಹನು ಪಟ್ಟಕ್ಕೆ ಬರುವಾಗ್ಗೆ ೩೭ ವರ್ಷ ವಯಸ್ಸಾಗಿತ್ತು. ತಂದೆಯ ಕಾಲದಲ್ಲೇ ರಣರಂಗದ

ರುಚಿಯನ್ನರಿತಿದ್ದನು. ಇವನು ದಕ್ಷಿಣದೇಶಕ್ಕೆ ದಂಡಯಾತ್ರೆ ಹೊರಟು ಚೋಳ, ಪಾಂಡ್ಯ, ಪಲ್ಲವ, ಮಕರರಾಜರನ್ನೆತ್ತಿ ಒಗೆದು, ರಾಮೇಶ್ವರದಲ್ಲಿ ಜಯಸ್ತಂಭವನ್ನು ನೆಟ್ಟನು ಆದರೆ ಉತ್ತರದಲ್ಲಿ ಯಾದವರು ಮಾತ್ರ ಬಲಿಷ್ಟರಾಗಿ ಹೊಯ್ಸಳರನ್ನು ಪ್ರತಿಭಟಿಸಿ ನಿಂತರು.

**ಹೊಯ್ಸಳರೂ ಚೋಳರಾಜ್ಯವೂ** :—೧೧ನೆಯ ಶತಮಾನಾಂತ್ಯದಿಂದ ಚೋಳರು ಅಶಕ್ತರಾದರು. ಕ್ರಿ. ಶ. ೧೨೧೬ ಸುಮಾರಿನಲ್ಲಿ ಪಟ್ಟಕ್ಕೆಬಂದ ರಾಜರಾಜದೇವನು ನಿರ್ಬಲನಾದ ಪ್ರಯುಕ್ತ ಸಾಮ್ರಾಜ್ಯದ ಬಿಕ್ಕಟ್ಟು ತಪ್ಪಿತು. ಪಾಂಡ್ಯರೇ ಮೊದಲಾದ ಸಾಮಂತರನೇಕರು ಕಿರುಕುಳವನ್ನುಂಟುಮಾಡಲು ಮೊದಲಿಟ್ಟರು. ಅನೇಕ ಅಧೀನರಾಜರು ಸ್ವತಂತ್ರರಾದರು. ರಾಜ್ಯಾಂತರ್ವಿಚಾರವು ಕೇವಲ ಶೋಚನೀಯವಾಗಿತ್ತು. ಅರಮನೆಯಲ್ಲೇ ಆಗಬಾರದ ಕೆಲಸಗಳೆಷ್ಟೋ ನಡೆಯಲು ಮೊದಲಾಯಿತು. ಈ ಸ್ಥಿತಿಯು ರಾಜ್ಯವಿಸ್ತಾರಕಾರ್ಯದಲ್ಲಿ ಅತ್ಯಂತಾಸಕ್ತರಾಗಿದ್ದ ಹೊಯ್ಸಳರಿಗೆ ಬಹಳ ಅನುಕೂಲವಾಗಿತ್ತು. ಪ್ರತಿಭಟಿಸಿದ ಸಾಮಂತರನ್ನೆದುರಿಸಿ ಚೋಳ ಸಾಮ್ರಾಜ್ಯದ ಗೌರವವನ್ನುಳಿಸುವ ನೆವದಿಂದ ನರಸಿಂಹನು ಚೋಳ ರಾಜ್ಯವ್ಯವಹಾರದಲ್ಲಿ ಕೈಹಾಕಿದನು. ಇವನ ತಂದೆಯಾದ ವೀರ ಬಲ್ಲಾಳನೇ ಸ್ವಪ್ರಯೋಜನಾಪೇಕ್ಷೆಯಿಂದಲೆ ಚೋಳರೊಂದಿಗೆ ಬಾಂಧವ್ಯವನ್ನು ಬೆಳಸಿ ಚೋಳ ಮಹಾದೇವಿಯೊಬ್ಬಳನ್ನು ಮದುವೆಯಾಗಿದ್ದನು. ಹಿಂದಿನ ಈ ಬಾಂಧವ್ಯಬಲವು ನರಸಿಂಹನ ಕಾಲದಲ್ಲಿ ಹೆಚ್ಚಿತು. ಚೋಳಸಾಮ್ರಾಜ್ಯ ವಿಚ್ಛಿನ್ನಕರನ್ನು ಮಟ್ಟ ಹಾಕಿ ನರಸಿಂಹನು 'ಚೋಳರಾಜ್ಯಸ್ಥಾಪನಾಚಾರ್ಯ'ನೆಂಬ ಬಿರುದನ್ನೂ ಪಡೆದನು. ಚೋಳಕುಲವೈರಿಗಳಾದ ಪಾಂಡ್ಯರಮೇಲೆ ಮೂರು ಸಾರಿ ದಂಡೆತ್ತಿ ಬಂದು ಅವರನ್ನು ದಂಡಿಸಿದನು. ಇದಕ್ಕಾಗಿ ಚೋಳರು ಹಲವು ಪ್ರಾಂತಗಳನ್ನಿವನಿಗೆ ಕೊಟ್ಟರು. ಈ ಕಾಲದಲ್ಲಿ ನರಸಿಂಹನ ಮಗನಾದ ಯುವರಾಜ ವೀರಸೋಮೇಶ್ವರನು ಚೋಳರಾಜ್ಯದಲ್ಲಿ ವಿಕ್ರಮಪುರಿಯನ್ನು ರಾಜಧಾನಿಯನ್ನಾಗಿ ಮಾ

ದಿಕ್ಕೊಂಡು ರಾಜಾಧಿರಾಜನೆಂಬ ಬಿರುದಿನಿಂದ ರಾಜ್ಯಭಾರಮಾಡುತ್ತಿದ್ದನು. ದಕ್ಷಿಣಹೊಯ್ಸಳ ಸಾಮ್ರಾಜ್ಯಕ್ಕೆ ವೀರಸೋಮೇಶ್ವರನರಸಾಗಿರಲು ನರಸಿಂಹನು ಪಿತ್ರಾರ್ಜಿತವಾದ ಉತ್ತರಸಾಮ್ರಾಜ್ಯಸೂತ್ರಗಳನ್ನು ಹಿಡಿದು ದ್ವಾರಸಮುದ್ರದಲ್ಲಿ ಆಳುತ್ತಿದ್ದನು. ನರಸಿಂಹನು ಶತ್ರುತ್ವವನ್ನು ಬೆಳೆಸದೆ ಚೋಳದೇಶದಲ್ಲಿ ರಾಜ್ಯವಿಸ್ತಾರ ಮಾಡಿ ಹೊಯ್ಸಳಸಾಮ್ರಾಜ್ಯವನ್ನು ದಕ್ಷಿಣದೇಶದಲ್ಲಿ ಅಗ್ರಸಾಮ್ರಾಜ್ಯವನ್ನಾಗಿಮಾಡಿದನು. ಇವನ ಕಾಲದಲ್ಲಿ ಹೊಯ್ಸಳಸಾಮ್ರಾಜ್ಯ ಲಕ್ಷ್ಮಿಯ ವೈಭವವನ್ನು ಹೇಳತೀರದು. ಆದರೆ ಸಾಮ್ರಾಜ್ಯ ಸ್ಥೈರ್ಯದೃಷ್ಟಿಯಿಂದ ದಕ್ಷಿಣಹೊಯ್ಸಳಸಾಮ್ರಾಜ್ಯ ಸ್ಥಾಪನೆಯು ಹೊಯ್ಸಳ ಸಾಮ್ರಾಜ್ಯ ವಿನಾಶಕ್ಕೇ ಮುಖ್ಯವಾದ ಒಂದು ಕಾರಣವಾಯಿತೆಂದು ಅನುಮಾನವಿಲ್ಲದೆ ಹೇಳಬಹುದು.

ನರಸಿಂಹನಿಗೆ ಲೋಕಾಂಬಿಕೆಯೆಂಬ ಅರಸಿಯಿದ್ದಳು. ಈಕೆಯ ಹೊಟ್ಟೆಯಲ್ಲಿ ಹುಟ್ಟಿದವನೇ ವೀರಸೋಮೇಶ್ವರನು.

**ಹೊಯ್ಸಳರೂ ಪಾಂಡ್ಯರಾಜರೂ** :—ನರಸಿಂಹನು ಹೇಗೆ ಪಾಂಡ್ಯಕುಲ ವಿನಾಶಕನಾಗಿದ್ದನೋ ಅದಕ್ಕೆ ಪ್ರತಿಯಾಗಿ ಸೋಮೇಶ್ವರನು ಪಾಂಡ್ಯಕುಲೋದ್ಧಾರಕನಾದನು. ಎರಡನೆಯ ಸುಂದರವರ್ಮ ಪಾಂಡ್ಯನಿಗೆ ಸೋಮೇಶ್ವರನು ಮಾವನೆಂದು ತೋರಿಬರುತ್ತದೆ. ಚೋಳರ ಜನ್ಮಶತ್ರುಗಳೊಂದಿಗೆ ಸೋಮೇಶ್ವರನು ಬಾಂಧವ್ಯವನ್ನೂ ಮೈತ್ರಿಯನ್ನೂ ಬೆಳೆಸಿದುದೇ ಹೊಯ್ಸಳರಿಗೂ ಚೋಳರಿಗೂ ದ್ವೇಷವುಂಟಾಗಲು ಕಾರಣವೆಂದು ಕಾಣುತ್ತದೆ. ಮೊದಲು ಮೊದಲು ರಾಜರಾಜನು ಮಿತ್ರನಾಗಿದ್ದು ಕಡೆಕಡೆಗೆ ಸೋಮೇಶ್ವರನ ದ್ವೇಷಿಯಾದನು. ಅವನ ಅನಂತರ ಪಟ್ಟಕ್ಕೆ ಬಂದ ರಾಜೇಂದ್ರ ಚೋಳನು ಹೊಯ್ಸಳರಿಗೆ ಯಮಪ್ರಾಯನಾಗಿದ್ದನು. ಉಭಯತ್ರರಿಗೂ ಅಂತಃಪುಷ್ಟಿಯಿಲ್ಲದಿರಲು ಯುದ್ಧಕ್ಕೆ ಮೊದಲಾಯಿತು.

**ಹೊಯ್ಸಲ ಸಾಮ್ರಾಜ್ಯ ಸ್ಥಿತಿ** :—ಸೋಮೇಶ್ವರನು ತನ್ನ ಕಾಲವೆಲ್ಲವನ್ನೂ ದಕ್ಷಿಣದೇಶದ ರಾಜಕೀಯ ವ್ಯವಹಾರಗಳಲ್ಲಿ ಕೈಹಾಕಿ ಒಂದು ಬಾರಿ ಚೋಳರಿಗೆ ಸಹಾಯಮಾಡಲು, ಮತ್ತೊಂದು

ಜಾರಿ ಪಾಂಡ್ಯರ ಪಕ್ಷವನ್ನು ವಹಿಸಲು, ಮಗದೊಮ್ಮೆ ಒಬ್ಬರವೇ ಲೊಬ್ಬರನ್ನು ಹಾಕಲು, ಇಷ್ಟರಲ್ಲೀ ಕಳೆದನು. ಹೊಯ್ಸಳ ಸಾಮ್ರಾಜ್ಯವು ದಕ್ಷಿಣದಲ್ಲಿ ಬೇರೂರ ಬೇಕೆಂಬ ಉದ್ದೇಶ್ಯದಿಂದ ಅರಸು ಕುಲಗಳ ಬಾಂಧವ್ಯವನ್ನು ಬೆಳೆಸಿಕೊಂಡು ದಕ್ಷಿಣಸಾಮ್ರಾಜ್ಯದ ರಾಜಧಾನಿಯಾದ ವಿಕ್ರಮಪುರಿಯಲ್ಲೇ ಇರುತ್ತಿದ್ದನು.

ಆದರೆ ಉತ್ತರದಲ್ಲಿ ಯಾದವರು ತಲೆಯೆತ್ತಿ ಹೊಯ್ಸಳ ಸಾಮ್ರಾಜ್ಯದಿರುವಿಕೆಗೆ ಭಂಗವನ್ನು ತರುವುದರಲ್ಲಿ ಆಸಕ್ತರಾಗಿದ್ದರು. ಅವರೊಡೆಯನಾದ ಸಿಂಘಣನು ಹೊಯ್ಸಳ ಸಾಮ್ರಾಜ್ಯಕ್ಕೆ ಕಂಟಕನಾದನು. ಈ ಪ್ರಯುಕ್ತ ಸೋಮೇಶ್ವರನಿಗೆ ಉತ್ತರದಲ್ಲೂ ಘನ ಕಾರ್ಯವಿತ್ತು. ದಕ್ಷಿಣದಲ್ಲಂತೂ ಅವನಿಲ್ಲವಾದರೆ ರಾಜಕೀಯ ಪ್ರಳಯಗಳುಂಟಾಗುವ ಸಂಭವವಿತ್ತು. ಹೀಗೆ ಇವನೆರಡೂ ಕಡೆ ತನ್ನ ಲಕ್ಷ್ಯವನ್ನು ಕೊಟ್ಟು ಸಾಮ್ರಾಜ್ಯ ಸಂರಕ್ಷಣೆಯನ್ನು ಮಾಡಬೇಕಾದ ಸನ್ನಿವೇಶವುಂಟಾಯಿತು. ಅದಕ್ಕಾಗಿ ತನ್ನ ಪಟ್ಟದರಸಿ ಬಿಜ್ಜಲದೇವಿಯ ಮಗನಾದ ಮುಮ್ಮಡಿ ನರಸಿಂಹನಿಗೆ ಕ್ರಿ. ಶ. ೧೨೫೪ ರಲ್ಲಿ ಪಟ್ಟವನ್ನು ಕಟ್ಟಿ, ದ್ವಾರಸಮುದ್ರದ ಸಿಂಹಾಸನದ ಮೇಲೆ ಕುಳ್ಳಿರಿಸಿ, ರಾಜ್ಯಾಡಳಿತವನ್ನೂ, ರಾಜ್ಯಸಂರಕ್ಷಣಾ ಕರ್ತವ್ಯವನ್ನೂ ಧೀಮಂತರಾದ ಮಹಾಪ್ರಧಾನಿಗಳ, ದಂಡನಾಯಕರ ಕೈಲಿಟ್ಟು, ತಾನು ವಿಕ್ರಮಪುರಿಯಲ್ಲಿ ಚಕ್ರಾಧಿಪತ್ಯವನ್ನು ಮಾಡುತ್ತಿದ್ದನು.

ಇಮ್ಮಡಿ ಮಾನವರ್ಮನ ತರುವಾಯ ಪಾಂಡ್ಯಸಿಂಹಾಸನಕ್ಕೆ ಜಟಾವರ್ಮಸುಂದರಪಾಂಡ್ಯನು ಬಂದನು. ಇವನಿಗೂ ಸೋಮೇಶ್ವರನಿಗೂ ಬದ್ಧವೈರವುಂಟಾಯಿತು. ಹೊಯ್ಸಳಪಾಂಡ್ಯರ ಮೈತ್ರಿಗೆ ಭಂಗಬರಲೇನು ಕಾರಣವೋ ಹೇಳಲಾಗದು. ಆದರೆ ಜಟಾವರ್ಮನು ಕೇವಲ ವೈಷ್ಣವನೆಂದು ಕಾಣಬರುತ್ತದೆ. ಆದರೆ ಸೋಮೇಶ್ವರನು ಕೇವಲ ಶೈವನಾಗಿದ್ದನು. ಶ್ರೀರಂಗದಲ್ಲಿ ವೈಷ್ಣವ ದೇವಾಲಯುಗಳನ್ನು ನಿರಾಕರಿಸಿ,, ಜಂಬುಕೇಶ್ವರ ದೇವಾಲಯದಲ್ಲೀ ಬಲ್ಲಾಳೇಶ್ವರ, ಪದುಮಲೇಶ್ವರ, ನರಸಿಂಹೇಶ್ವರ, ಸೋಮೇಶ್ವರ ಮುಂತಾದನೇಕ ಗುಡಿಗಳನ್ನು ಕಟ್ಟಿಸಿದನು. ರಾಜಧಾನಿಯಾದ

ವಿಕ್ರಮಪುರಿಯಲ್ಲಿ ಹೊಯ್ಸಳೇಶ್ವರ ದೇವಾಲಯವನ್ನು ಕಟ್ಟಿಸಿದನು. ಈ ಭಿನ್ನಮತವರ್ತನೆಯು ಜಟಾವರ್ಮ ಸೋಮೇಶ್ವರರ ದ್ವೇಷಕ್ಕೆ ಬಂದು ಕಾರಣವಾಗಿರಬಹುದು. ಶತ್ರುತ್ವವು ದಿನೇದಿನೇ ಹೆಚ್ಚಾಗಿ ಜಟಾವರ್ಮನು ಕ್ರಿ.ಶ. ೧೨೬೪ ರಲ್ಲಿ ಕರ್ಣಾಟಾಧೀಶನಾದ ಸೋಮೇಶ್ವರನನ್ನು ರಣರಂಗದಲ್ಲಿ ಕೊಂದು ಅವನ ರಾಜಧಾನಿಯಾದ ವಿಕ್ರಮಪುರಿಯನ್ನಾಕ್ರಮಿಸಿದನು.

**ದಕ್ಷಿಣಸಾಮ್ರಾಜ್ಯ**:—ಸೋಮೇಶ್ವರನೇ ಸಾಮ್ರಾಜ್ಯವನ್ನು ವಿಭಾಗಿಸಿ ದ್ವಾರಸಮುದ್ರದ ಸಿಂಹಾಸನದಮೇಲೆ ಮುಮ್ಮಡಿ ನರಸಿಂಹನನ್ನು ಕೂಡಿಸಿದನೆಂದು ತಿಳಿದೆವು. ಸೋಮೇಶ್ವರನ ಅನಂತರ ವಿಕ್ರಮಪುರಿಯ ಸಿಂಹಾಸನಕ್ಕೆ ಅವನ ಎರಡನೆಯ ಹೆಂಡತಿಯಾದ ದೇವಲಮಹಾದೇವಿಯ ಮಗ ರಾಮನಾಥನು ಬಂದನು. ತಂದೆಯು ಜೀವಿಸಿದ್ದು ವಿಕ್ರಮಪುರಿಯಲ್ಲಿ ಸಾರ್ವಭೌಮನೆನಿಸಿಕೊಂಡಿರುತ್ತಿದ್ದಾಗಲೇ ರಾಮನಾಥನು ರಾಜ್ಯಾಡಳಿತವನ್ನು ನೋಡುತ್ತಿದ್ದನು. ಸೋಮೇಶ್ವರನ ಮರಣಾನಂತರ ರಾಮನಾಥನು ಬಹುಕಾಲ ಚೋಳಪಾಂಡ್ಯರೊಂದಿಗೆ ಕಾದಾಡಿ ವಿಕ್ರಮಪುರಿಯಸಿಂಹಾಸನವನ್ನು ಮತ್ತೆ ಪಡೆದು, ಅನೇಕವರ್ಷಗಳಾಳಿ, ರಾಜ್ಯಾಂಗವ್ಯವಸ್ಥೆಯಲ್ಲಿ ಬಹು ಚತುರನೆನಿಸಿದನು. 'ಸಕಲಕಲಾಸಾರ್ವಭೌಮ' 'ಸಕಲವಿದ್ಯಾಚಕ್ರವರ್ತಿ'ಯೆಂಬ ಹೆಸರನ್ನು ಪಡೆದಿದ್ದನು.

ರಾಮನಾಥನಿಂದ ಪೆಟ್ಟುತಿಂದ ಪಾಂಡ್ಯರು ಸಮಯನಿರೀಕ್ಷಣೆಯಲ್ಲಿದ್ದರು. ಮೊದಲನೆಯ ಮಾನವರ್ಮ ಕುಲಶೇಖರನ ಕಾಲದಲ್ಲಿ (ಕ್ರಿ. ಶ. ೧೨೬೮-೧೩೦೮) ರಾಮನಾಥನ ಬಲವು ಖಿಲವಾಯಿತು. ಇವನು ತನ್ನ ರಾಜ್ಯವನ್ನು ಕಳೆದುಕೊಂಡು, ದಾರಿಗಾಣದೆ, ಉತ್ತರ ಸಾಮ್ರಾಜ್ಯದ ಸಿಂಹಾಸನಕ್ಕೆ ಕಣ್ಣುಹಾಕಿ, ತನ್ನಸೋದರನಾದ ಮುಮ್ಮಡಿ ನರಸಿಂಹನನ್ನು ಓಡಿಸಿ, ದ್ವಾರಸಮುದ್ರಕ್ಕೆ ಮುತ್ತಿಗೆ ಹಾಕಿ, ಕಡೆಗೆ ಪರಾಜಿತನಾಗಿ, ಬೆಂಗಳೂರು, ಕೋಲಾರ, ಸೇಲಂ ಪ್ರಾಂತ್ಯಗಳಲ್ಲಿ ಅಧಿಕಾರನಡಸುತ್ತಿದ್ದಂತೆ ತೋರುತ್ತದೆ. ಕ್ರಿ. ಶ. ೧೨೯೩ ಸುಮಾರಿನಲ್ಲಿ ರಾಮನಾಥನು ಕಾಲವಾಗಲು ಅವನ

ಮಗನಾದ ವಿಶ್ವನಾಥನು ಹಲಕಾಲ ಅಧಿಕಾರನಡಿಸುತ್ತಿದ್ದಂತೆ ತೋರಿಬರುತ್ತದೆ.

**ಉತ್ತರಸಾಮ್ರಾಜ್ಯ:**—ಮುಮ್ಮಡಿ ನರಸಿಂಹನು ೩೬ ವರ್ಷಗಳಕಾಲ ಕರ್ಣಾಟಕರಾಜ್ಯಭಾರವನ್ನು ಮಾಡುತ್ತಿದ್ದು ತನ್ನ ೫೧ನೆಯ ವಯಸ್ಸಿನಲ್ಲಿ ಕಾಲವಾದನು. ಕ್ರಿ. ಶ. ೧೨೯೩ ಸುಮಾರಿನಲ್ಲಿ ನರಸಿಂಹನ ಮಗನಾದ ಮುಮ್ಮಡಿ ಬಳ್ಳಾಳನು ತಂದೆಯ ಸ್ಥಾನಕ್ಕೆ ಬಂದನು. ವಿಶ್ವನಾಥನ ಅನಂತರ ಬಳ್ಳಾಳನು ದಕ್ಷಿಣ ಸಾಮ್ರಾಜ್ಯದ ಮೇಲೆ ತನ್ನ ದೃಷ್ಟಿಯನ್ನು ಬೀರಿ ವಿಭಾಗವಾಗಿದ್ದ ಸಾಮ್ರಾಜ್ಯಕ್ಕೆ ಒಂದುರೂಪವನ್ನು ಕೊಟ್ಟನು. ಆದರೆ ಈ ಸಾಮ್ರಾಜ್ಯದ ಏಕೀಕರಣವು ಸಾಮ್ರಾಜ್ಯಾಭಿವೃದ್ಧಿಯಲ್ಲಿ ಕೊನೆಗಾಣಲಿಲ್ಲ. ಸಾಮ್ರಾಜ್ಯ ವಿಭಾಗದಿಂದಲೂ, ಭ್ರಾತೃ ಕಲಹಗಳಿಂದಲೂ, ಕಾಲಧರ್ಮ ವಿಶೇಷದಿಂದಲೂ ಬಿಂಕಕೆಡುತ್ತಿದ್ದ ಹೊಯ್ಸಳಸಾಮ್ರಾಜ್ಯಕ್ಕೆ ಆಕಸ್ಮಿಕವಾಗಿ ಬಂದ ಮಹಮ್ಮದೀಯರ ದಾಕ್ಷಿಣಾತ್ಯ ಅಭಿಯೋಗವು ಮೃತ್ಯುಪ್ರಾಯವಾಗಿ ಪರಿಣಮಿಸಿತು. ಹೊಯ್ಸಳ ಮನೆತನದ ಮುಮ್ಮಡಿ ಮತ್ತು ನಾಲ್ವಡಿ ಬಳ್ಳಾಳರೆಂಬ ತಂದೆ ಮಕ್ಕಳೀರ್ವರೂ ಈ ಆಪತ್ತಿನಿಂದ ಕರ್ಣಾಟಕ ಸಾಮ್ರಾಜ್ಯವನ್ನು ರಕ್ಷಿಸುವ ಪ್ರಯತ್ನದಲ್ಲೇ ಹೇಗೆ ಪ್ರಾಣಗಳನ್ನು ಅರ್ಪಿಸಿದರೆಂಬುದನ್ನು ಮುಂದೆ ನೋಡುವೆವು.

---

## ೪ ದೇವಗಿರಿಯ ಯಾದವರು

ರಾಷ್ಟ್ರಕೂಟ, ಕಲ್ಯಾಣಿಯ ಚಾಳುಕ್ಯ ಮತ್ತು ಹೊಯ್ಸಳ ಇತಿಹಾಸದಲ್ಲಿ ಯಾದವರ ಉಲ್ಲೇಖವಾಗಲೇ ಬಂತು. ಇವರು ಅವರೆಲ್ಲರ ಆಳ್ವಿಕೆಯಲ್ಲಿ ಸಾಮಂತರಾಗಿದ್ದರು. ಇವರದು ಯಾದವಕುಲ. ಇವರ ರಾಜ್ಯಕ್ಕೆ ಸೇವುಣರಾಜ್ಯವೆಂದೂ ಹೆಸರುಂಟು. ದೇವಗಿರಿಯೇ ಇವರ ರಾಜಧಾನಿ. ಸುವರ್ಣಗರುಡಲಾಂಛನದವರು. ಹೇಮಾದ್ರಿಯ ವ್ರತಖಂಡದಲ್ಲಿ ಯಾದವರ ಪೂರ್ವ ವಂಶಾ

ವಳಿಯು ಕೊಡಲ್ಪಟ್ಟಿದೆ. ಆದರೆ ಆ ವಂಶಾವಳಿಯ ನಿಜಾಂಶವನ್ನು ಸಂಪೂರ್ಣವಾಗಿ ದೃಢಪಡಿಸಲು ಸರಿಯಾದ ಆಧಾರಗಳಿಲ್ಲ. ಅದು ಹೇಗಾದರೂ ಇರಲಿ ಕರ್ಣಾಟಕ ಇತಿಹಾಸ ದೃಷ್ಟಿಯಿಂದ ಈ ವಂಶದ ೨೪ನೆಯವನಾದ ಭಿಲ್ಲಮನೇ ಮೊದಲನೆಯ ಇತಿಹಾಸ ವ್ಯಕ್ತಿಯು. ಚಾಳುಕ್ಯರಾಜ್ಯ ಪತನಾನಂತರ ಅವರ ಸಾಮ್ರಾಜ್ಯಕ್ಕಾಗಿ ಕಲಚುರ್ಯರು, ಹೊಯ್ಸಳರೇ ಮೊದಲಾದನೇಕರು ಹೋರಾಡಿದರಷ್ಟೆ. ಅವರಲ್ಲಿ ಯಾದವರೂ ಒಬ್ಬರು. ಚಾಳುಕ್ಯರ ಅನಂತರ ಮುಖ್ಯವಾಗಿ ಹೆಸರುವಾಸಿಯಿಂದ ಕರ್ಣಾಟಕದಲ್ಲಿ ಆಳಿದವರೆಂದರೆ ಹೊಯ್ಸಳರು ಮತ್ತು ಯಾದವರು.

**ಅರಸರು** :—ಭಿಲ್ಲಮನು ಹೊಯ್ಸಳ ಇಮ್ಮಡಿ ಬಳ್ಳಾಳನ ಸಮಕಾಲೀನನು. ಇವನು ಚಾಳುಕ್ಯ ನಾಲ್ವಡಿ ಸೋಮೇಶ್ವರನ ಸಾಮಂತನಾಗಿದ್ದು ಅನಂತರ ಸು. ಕ್ರಿ. ಶ. ೧೧೮೭ರಲ್ಲಿ ಸಮಸ್ತ ಭುವನಾಶ್ರಯ ಶ್ರೀಪೃಥ್ವೀವಲ್ಲಭ, ಮಹಾರಾಜಾಧಿರಾಜ, ಪ್ರತಾಪ ಚಕ್ರವರ್ತಿ ಮೊದಲಾದ ಸಾರ್ವಭೌಮಚಿಹ್ನೆಗಳನ್ನು ವಹಿಸಿ, ಅಂದಿನಿಂದ ಸಂಪೂರ್ಣಸ್ವತಂತ್ರನಾಗಿ ರಾಜ್ಯಭಾರಮಾಡುತ್ತಿದ್ದನೆಂದು ನಿಸ್ಸಂದೇಹವಾಗಿ ಹೇಳಬಹುದು. ಚಾಳುಕ್ಯರಾಷ್ಟ್ರದ ಕೇವಲ ದಕ್ಷಿಣಭಾಗವನ್ನು (ತುಂಗಭದ್ರೆಯಿಂದ ದಕ್ಷಿಣ) ಹೊಯ್ಸಳ ಬಳ್ಳಾಳನಿಗೆ ಬಿಟ್ಟು ಉತ್ತರಭಾಗಕ್ಕೆಲ್ಲಾ ಭಿಲ್ಲಮನು ಒಡೆಯನಾದನು. ಆದರೆ ಕೃಷ್ಣಾ ತುಂಗಭದ್ರಾ ಮಧ್ಯದೇಶವಾದ ಕುಂತಲಕ್ಕಾಗಿ ಭಿಲ್ಲಮನಿಗೂ ಬಳ್ಳಾಳನಿಗೂ ಯುದ್ಧೋಪಕ್ರಮವಾಯಿತು. ಸೊರಯೂರಿನ (ಗದಗಿನಬಳಿ) ಬಳಿ ನಡೆದ ಕದನದಲ್ಲಿ ಭಿಲ್ಲಮನು ಹತನಾದನು. ಇವನ ಅನಂತರ ದೇವಗಿರಿಯ ಸಿಂಹಾಸನಕ್ಕೆ ಕ್ರಿ. ಶ. ೧೧೯೧ ಸುಮಾರಿನಲ್ಲಿ ಭಿಲ್ಲಮನ ಮಗನಾದ ಮೊದಲನೆಯ ಜೈತುಗಿ ಅಥವಾ ಜೈತ್ರಪಾಲನು ಬಂದನು. ಇವನ ಕಾಲದಲ್ಲಿ ಹೊಯ್ಸಳರು ಹಿಮ್ಮೆಟ್ಟಿದರು. ಜೈತುಗಿಯು ರಾಜ್ಯವನ್ನು ಸ್ಥಿರಪಡಿಸಿ, ಅನೇಕ ಸಾಮಂತರಿಂದಾವೃತನಾಗಿ ರಾಜ್ಯಪರಿಪಾಲನೆಯನ್ನು ಮಾಡುತ್ತಿದ್ದನು. ಖಗೋಳ ಶಾಸ್ತ್ರವೇತ್ತನಾದ ಭಾಸ್ಕರಾಚಾರ್ಯನ ಮಗ ಲಕ್ಷ್ಮೀಧರನವನ ಆಸ್ಥಾನಪಂಡಿತ

ನಾಗಿದ್ದನು. ಕ್ರಿ. ಶ. ಸು. ೧೨೧೦ ರಲ್ಲಿ ಇವನ ಮಗನಾದ ಸಿಂಘ
ಣನು ಸಿಂಹಾಸನವನ್ನೇರಿದನು. ಯಾದವರೊಳಗೆಲ್ಲ ಸಿಂಘಣನೇ
ಖ್ಯಾತಿವೆತ್ತವನು. ಇವನು ಕರ್ಣಾಟಕದೇಶದಲ್ಲಿಗೋವೆ, ಕೊಂಕಣ,
ಸೌಂದತ್ತಿ, ಗುತ್ತಿಮೊದಲಾದ ಕಡೆಯಾಳುತ್ತಿದ್ದ ಸಾಮಂತರೆಲ್ಲರನ್ನೂ
ಗೆದ್ದು 'ಭುಜಬಲ ಪ್ರತಾಪ ಚಕ್ರವರ್ತಿ,' 'ಯಾದವ ಚಕ್ರವರ್ತೀ'
ತ್ಯಾದಿ ಬಿರುದ ಪ್ರಖ್ಯಾತನಾದನು. ಅಷ್ಟೇ ಅಲ್ಲದೆ ಕ್ರಿ. ಶ. ೧೧೨೦
ಸುಮಾರಿನಲ್ಲಿ ವೀರಬಲ್ಲಾಳನು ಕಾಲವಾಗಲು ಅದೇ ಸಮಯವೆಂದ
ರಿತು ಹೊಯ್ಸಳರಾಜ್ಯವನ್ನು ಮುತ್ತಿದನು. ಆದರೆ ಈ ಪ್ರಯತ್ನವು
ಅಷ್ಟು ಫಲಕಾರಿಯಾಗಲಿಲ್ಲ. ಇವನ ತಂದೆಯಾಸ್ಥಾನದಲ್ಲಿದ್ದ ಲಕ್ಷ್ಮೀಧ
ರನಮಗನಾದ ಚಂಗದೇವನು ಸಿಂಘಣನಿಗೆ ಆಸ್ಥಾನ ಜ್ಯೋತಿಷಿಕನಾ
ಗಿದ್ದನು. ಸಿಂಘಣನಿಗೆ ಜೈತುಗಿಯೆಂಬ ಮಗನಿದ್ದನು ಆದರೆ
ಅವನು ತಂದೆಯು ಜೀವಂತನಾಗಿರುವಾಗಲೇ ಕೃಷ್ಣ ಮಹಾದೇವರೆಂ
ಬಿಬ್ಬರು ಮಕ್ಕಳನ್ನು ಬಿಟ್ಟು ಕಾಲವಾದನು. ಆದಕಾರಣ ಸಿಂಘಣನ
ತರುವಾಯ ಅವನ ಮೊಮ್ಮಗನಾದ ಕೃಷ್ಣನು ಸು ಕ್ರಿ. ಶ. ೧೨೪೭
ರಲ್ಲಿ ಪಟ್ಟಾಭಿಷಿಕ್ತನಾದನು. ಇವನಿಗೆ ಕನ್ನರನೆಂದೂ ಕಂಧರನೆಂದೂ
ಹೆಸರುಂಟು. ಇವನು ಸುಮಾರು ೧೦-೧೨ ವರ್ಷಗಳ ಕಾಲ ರಾಜ್ಯ
ವಾಳಿದನು. ಹೊಯ್ಸಳರನ್ನು ಕೊಂಚ ಹೆದರಿಸಿದನೆಂದೇ ಹೇಳ
ಬೇಕು. ಕ್ರಿ. ಶ. ೧೨೬೦ ಸುಮಾರಿನಲ್ಲಿ ಮೃತನಾಗಲು ಇವನ
ತಮ್ಮನಾದ ಮಹದೇವನು ಪಟ್ಟಕ್ಕೆ ಬಂದನು. ಹೇಮಾದ್ರಿಯೇ
ಇವನ ಮಂತ್ರಿಯಾಗಿದ್ದನು. ಇವನ ಅನಂತರ ಯಾದವ ಸಿಂಹಾ
ಸನದ ಮೇಲೆ ತನ್ನ ಮಗನಾದ ಆಮಣನನ್ನೇ ಕೂಡಿಸಲು ಪ್ರಯ
ತ್ನಿಸಿದನಾದರೂ ೧೨೭೧ ಸುಮಾರಿನಲ್ಲಿ ಕೃಷ್ಣನ ಮಗನಾದ ರಾಮ
ಚಂದ್ರನು ಆಮಣನನ್ನು ಹೊಡೆದೋಡಿಸಿ ತಾನೇ ರಾಜ್ಯಾಭಿಷಿಕ್ತ
ನಾದನು. ಇವನ ಕಾಲದಲ್ಲಿ ಬೇತೂರು (ದಾವಣಗೇರಿಬಳಿ) ಯಾದ
ವರ ರಾಜಧಾನಿಯಾಯಿತು. ರಾಮಚಂದ್ರನ ದಂಡನಾಯಕನಾದ
ಸಾಳುವ ತಿಕ್ಕಮನು ದ್ವಾರಸಮುದ್ರವನ್ನು ಮುತ್ತಿ ಹೊಯ್ಸಳರಿಂದ
ಕಪ್ಪವನ್ನು ಒಪ್ಪಿಸಿಕೊಂಡನೆಂದು ಕಾಣಬರುತ್ತದೆ. ಇವನೂ ಸು

ನೂರು ೩೦ ವರ್ಷಗಳ ಕಾಲ ಸಾರ್ವಭೌಮಪದವಿಯಲ್ಲಿದ್ದು ೧೩೦೯ ಸುಮಾರಿನಲ್ಲಿ ಕಾಲವಶವಾದನು. ಇವನ ಅನಂತರ ಇವನ ಮಗನಾದ ಶಂಕರನು ಪಟ್ಟಕ್ಕೆ ಬಂದನಾದರೂ ಮಹಮ್ಮದೀಯ ಪಾತಾಪತಿಗೆ ಸಿಕ್ಕಿ ಚೇತರಿಸಿಕೊಳ್ಳಲಾರದಾದನು. ಸಾರಾಂಶವಿಷ್ಟು—ರಾಮ ಚಂದ್ರನ ಮರಣದೊಂದಿಗೆ ಯಾದವರ ಇತಿಹಾಸವು ಮುಗಿಯಿತು.

---

## ೫ ಕರ್ಣಾಟಕವೂ ಮಹಮ್ಮದೀಯರೂ

ಕ್ರಿ. ಶ. ೧೨೯೪ ಸುಮಾರಿನಲ್ಲಿ ಡೆಹಲಿಯ ಸುಲ್ತಾನನಾದ ಜಲಾಲುದ್ದೀನ್ ಖಿಲ್ಜಿ ಅಥವಾ ಫಿರೂಜ್‌ಷಹನ ಸೋದರಳಿಯನಾದ ಅಲ್ಲಾಉದ್ದೀನನು ಸೈನ್ಯ ಸಮೇತನಾಗಿ ಮೊಟ್ಟಮೊದಲು ದಕ್ಷಿಣ ದೇಶಕ್ಕೆ ದಂಡಯಾತ್ರೆ ಹೊರಟು ಯಾದವರಾಜ್ಯದ ಮೇರೆಯನ್ನು ಮೀರಿ ದೇವಗಿರಿಯನ್ನು ಸಮೀಪಿಸಿದನು. ಅಕಸ್ಮಾತ್ತಾಗಿ ಸಂಭವಿಸಿದ ಈ ಆಪನ್ನಿವಾರಣಾರ್ಥವಾಗಿ ರಾಮಚಂದ್ರನು ಎಷ್ಟೋ ಸಾಹಸ ಪಟ್ಟನಾದರೂ, ಕಡೆಗೆ ಸೋತನು. ಅಲ್ಲಾ ಉದ್ದೀನನು ದೇವಗಿರಿಯನ್ನು ಹೊಕ್ಕು ಅದನ್ನು ಕೊಳ್ಳೆಹೊಡೆದನು. ಶತ್ರುಬಲಭೀತನಾದ ರಾಮಚಂದ್ರನು ಮಗನಾದ ಶಂಕರನನ್ನೂ ಒಪ್ಪಿಸಿ ಅಲ್ಲಾವುದ್ದೀನನಿಗೆ ೬೦೦ ಮಣ ಮುತ್ತು, ೨ ಮಣ ನವರತ್ನ, ೧೦೦೦ ಮಣ ಬೆಳ್ಳಿ, ೪೦೦೦ ಥಾನು ರೇಶ್ಮೆಬಟ್ಟೆ ಮುಂತಾದ ಅಮೌಲ್ಯ ವಸ್ತುಗಳನ್ನೂ ಕೊಟ್ಟು, ಕಪ್ಪವನ್ನೂ ಕೊಡುವಂತೆ ಒಪ್ಪಿಕೊಂಡು ಅವನೊಂದಿಗೆ ಸಂಧಿಮಾಡಿಕೊಂಡನು. ಕೂಡಲೇ ಅಲ್ಲಾಉದ್ದೀನನು ಹಿಂತಿರುಗಿ, ಜಲಾಲುದ್ದೀನನನ್ನು ಕೊಂದು ಕ್ರಿ. ಶ. ೧೨೯೬ ರಲ್ಲಿ ಡೆಹಲಿಯ ಸುಲ್ತಾನನಾದನು.

ಕ್ರಿ. ಶ. ೧೩೦೭ ರಲ್ಲಿ ರಾಮಚಂದ್ರನು ಕಪ್ಪವನ್ನು ಸಲ್ಲಿಸಲಿಲ್ಲ ವೆಂಬ ನೆವದಿಂದ ಅಲ್ಲಾಉದ್ದೀನನು ಮಲ್ಲಿಕಾಫುರನನ್ನು ಸೈನ್ಯದೊಂದಿಗೆ ಕಳುಹಿಸಿದನು. ಆಗ ರಾಮಚಂದ್ರನು ಮಲ್ಲಿಕಾಫುರನೊಂದಿಗೆ

ಯುದ್ಧಮಾಡದೆ, ಅವನ ಮೈತ್ರಿಯಿಂದ, ದೆಹಲಿಗೆ ಹೋಗಿ ಅಲ್ಲಾ ಉದ್ದೀನನಿಂದ ಬಹುಮಾನಿಸಲ್ಪಟ್ಟವನಾಗಿ, ರಾಜಧಾನಿಗೆ ಹಿಂದಿರುಗಿದನು. ಅಂದಿನಿಂದ ದೆಹಲಿ ಸುಲ್ತಾನರಿಗೆ ಕಪ್ಪವನ್ನು ತಪ್ಪದೆ ಸಲ್ಲಿಸುತ್ತ ಬಂದನು. ೧೩೦೦ ರಲ್ಲಿ ಓರಂಗಲ್ಲು ಗಣಪತಿಗಳನ್ನೂ ಮೂಲೆಗೆ ಕೂಡಿಸುವದಕ್ಕಾಗಿ ಮಲ್ಲಿಕ್‌ಕಾಫರನೂ, ಖ್ವಾಜಾಹಾಜಿಯೂ ಬಂದು, ಕೆಲಕಾಲ ದೇವಗಿರಿಯಲ್ಲಿದ್ದು ಮುಂದಕ್ಕೆ ತೆರಳಿದರು. ಆಗ ರಾಮಚಂದ್ರನಿವರಿಗೆ ಬೇಕಾದ ಸಹಾಯವನ್ನು ಮಾಡಿದನು. ೧೩೧೦ ರಲ್ಲಿ ಮತ್ತೆ ಇವರಿಬ್ಬರೂ ದ್ವಾರಸಮುದ್ರದ ಬಳ್ಳಾಳರನ್ನು ಎದುರಿಸಲು ಹೊರಟು, ದೇವಗಿರಿಯನ್ನು ಸೇರಿದರು. ಆದರೆ ಮಿತ್ರನಾದ ರಾಮಚಂದ್ರನು ಕಾಲವಾಗಿದ್ದನು. ಅವನ ಮಗನಾದ ಶಂಕರನು ಮುಹಮ್ಮದೀಯರಿಗಷ್ಟು ಹಿತವಂತನಾಗಿರಲಿಲ್ಲ. ಶಂಕರನನ್ನು ಎದುರಿಸಲಿದು ಸಮಯವಲ್ಲವೆಂದರಿತು ಮಲ್ಲಕ್‌ಕಾಫರ್ ಮತ್ತು ಖ್ವಾಜಾಹಾಜಿಗಳಿಬ್ಬರೂ ನೆಟ್ಟಗೆ ಹೊಯ್ಸಳ ರಾಜ್ಯವನ್ನು ಪ್ರವೇಶಿಸಿದರು. ಆಗ ದ್ವಾರಸಮುದ್ರದಲ್ಲಿ ಮುಮ್ಮಡಿ ಬಳ್ಳಾಳನು ರಾಜ್ಯವಾಳುತ್ತಿದ್ದನು. ಹೊಯ್ಸಳರಿಗೂ ಮುಹಮ್ಮದೀಯರಿಗೂ ಘೋರ ಸಂಗ್ರಾಮವಾಯಿತು. ಮಲ್ಲಕ್‌ಕಾಫರನು ಬಳ್ಳಾಳನನ್ನು ಸೋಲಿಸಿ, ದ್ವಾರಸಮುದ್ರವನ್ನು ಹೊಕ್ಕು ಅದನ್ನು ಧ್ವಂಸಮಾಡಿದನು. ಅನಂತರ ಮುಹಮ್ಮದೀಯರ ಕೈಸೆರೆಯಿಂದ ಬಳ್ಳಾಳನು ಮುಕ್ತನಾಗಿ ಕೆಲಕಾಲ ಬೇಲೂರಲ್ಲಿ ಆಳುತ್ತಿದ್ದನು.

ಸಹಾಯ ಮಾಡದೆ ತಟಸ್ಥನಾಗಿದ್ದುಕೊಂಡು ಮುಹಮ್ಮದೀಯರಣ ಪ್ರಸಂಗದಲ್ಲಿ ಔದಾಸೀನ್ಯವನ್ನು ತೋರಿಸುತ್ತಿದ್ದ ಯಾದವ ಶಂಕರನ ಮೇಲೆ ಮಲ್ಲಿಕ್‌ಕಾಫರನಿಗೆ ಒಂದು ಕಣ್ಣಿದ್ದೇ ಇತ್ತು. ಕ್ರಿ. ಶ. ೧೩೧೨ ರಲ್ಲಿ ಅವನು ಸುಲ್ತಾನರಿಗೆ ಕಪ್ಪವನ್ನು ಕೊಡಲಿಲ್ಲವೆಂಬ ಕಾರಣದಿಂದ ಮಲ್ಲಿಕ್‌ಕಾಫರನು ನಾಲ್ಕನೆಯ ಸಲ ದಂಡೆತ್ತಿ ಬಂದು, ಶಂಕರನನ್ನು ಯುದ್ಧದಲ್ಲಿ ಕೊಂದು, ಮಹಾರಾಷ್ಟ್ರ ಕರ್ಣಾಟಕ ದೇಶವೆಲ್ಲವನ್ನೂ ಕೊಳ್ಳೆಹೊಡೆದು, ದೇವಗಿರಿಯನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಅಲ್ಲಿಂದ ಸುಲ್ತಾನನಿಗೆ ಸೇರಬೇಕಾದ

ರಾಜಾದಾಯವನ್ನು ಕಳುಹಿಸುತ್ತಿದ್ದನು. ಅಷ್ಟರಲ್ಲೇ ಮಲ್ಲಿಕಾಫರನು ದೆಹಲಿಗೆ ಹೋಗಬೇಕಾಯಿತು. ಆ ಸಮಯದಲ್ಲಿ ರಾಮಚಂದ್ರನ ಅಳಿಯನಾದ ಹರಪಾಲನು, ಮುಸಲ್ಮಾನ ಸೈನಿಕರನ್ನು ಹೊಡೆದೋಡಿಸಿ, ಯಾದವ ರಾಜ್ಯ ಸೂತ್ರಗಳನ್ನು ಧರಿಸಿದನು.

ದೆಹಲಿಯಲ್ಲುಂಟಾದ ಪಿತೂರಿಗಳಿಂದ ಮಲ್ಲಿಕಾಫರನು ಅಲ್ಲಾಉದ್ದೀನನನ್ನು ಕೊಂದನು. ಅನಂತರ ಮಲ್ಲಿಕಾಫರನು ಕೊಲ್ಲಲ್ಪಟ್ಟನು. ಅನಂತರ ಅಲ್ಲಾಉದ್ದೀನನ ಮೂರನೆಯ ಮಗನಾದ ಮುಬಾರಕನು ದೆಹಲಿಯ ಸುಲ್ತಾನನಾದನು. ಕೂಡಲೇ ಮುಬಾರಕನು ೧೩೧೮ ರಲ್ಲಿ ಸ್ವಯಂ ಸೈನ್ಯಸಮೇತನಾಗಿ ಬಂದು ಯಾದವರ ಹೆಸರನ್ನುಳಿಸಲು ಪ್ರಯತ್ನಿಸಿದ ಹರಪಾಲನನ್ನು ಎದುರಿಸಿದನು. ಸಹಾಯ ಶೂನ್ಯನಾದ ಹರಪಾಲನು ತಲೆತಪ್ಪಿಸಿಕೊಂಡು ಓಡಿದನು. ಆದರೇನು ಮುಬಾರಕನವನನ್ನು ಹಿಂಬಾಲಿಸಿ, ಹಿಡಿತರಿಸಿ, ಅವನ ತಲೆಯನ್ನು ಕತ್ತರಿಸಿ, ದೇವಗಿರಿಯ ಕೋಟೆಯ ಮೇಲೆ ಇಡಿಸಿದನು. ಯಾದವರ ಮನೆತನದ ಕಥೆಯು ಹೀಗೆ ಕೊನೆಗಂಡಿತು. ಇನ್ನು ಹೊಯ್ಸಳರಗತಿ ಏನಾಯಿತೋ ನೋಡುವ.

ದ್ವಾರಸಮುದ್ರವು ಹಾಳಾದ ನಂತರ ಕ್ರಿ. ಶ. ಸು. ೧೩೧೭ ರಲ್ಲಿ ಬಲ್ಲಾಳನು ಮತ್ತೆ ಆ ನಗರವನ್ನು ಕಟ್ಟಿ ಸಿಂಗರಿಸಿ, ಆಳುತ್ತಿದ್ದನು. ಕ್ರಿ. ಶ. ೧೩೨೭ ರಲ್ಲಿ ಮಹಮ್ಮದ್ ಬಿನ್ ತೊಗಲಕನು ದಕ್ಷಿಣದೇಶಕ್ಕೆ ಮತ್ತೆ ಸೈನ್ಯವನ್ನು ಕಳುಹಿಸಿದನು. ಈ ಮಹಮ್ಮದೀಯರ ಹಾವಳಿಯನ್ನು ಸೈರಿಸಲಾರದೆ ಬಲ್ಲಾಳನು ತನ್ನ ತಾತ ಮುತ್ತಾತಂದಿರ ಅಧಿಕಾರ ಪೀಠವೂ, ಸಾಮ್ರಾಜ್ಯವೈಭವವ್ಯಂಜಕವೂ ಆದ ದ್ವಾರಸಮುದ್ರವನ್ನು ತೊರೆದು, ತಿರುವಣ್ಣಾಮಲೆಗೆ ಬಂದು ಆಳುತ್ತಿದ್ದನು. ಅಲ್ಲದೆ ದ್ವಾರಸಮುದ್ರದ ನಾಶಸಾನಂತರ ಉತ್ತರದಿಕ್ಕಿನಿಂದ ಮಹಾರಭಸದಿಂದ ಹರಿದು ರಾಜಕೀಯ ಮತ್ತು ಸಾಂಘಿಕ ಪ್ರಳಯವನ್ನುಂಟು ಮಾಡುತ್ತಿದ್ದ ಮಹಮ್ಮದೀಯ ಪ್ರವಾಹವನ್ನು ತಡೆಯಲು ಕ್ರಿ. ಶ. ಸು. ೧೩೩೬ ರಲ್ಲಿ ಹೊಸಪಟ್ಟಣವನ್ನು ಕಟ್ಟಿಸಿದನು. ಇದಕ್ಕೆ ಶ್ರೀ ವೀರವಿಜಯ ವಿರೂಪಾಕ್ಷಪುರವೆಂದೂ ಹೆಸರುಂಟು. ಇದೇ ಹಂಪೆ

ಅಥವಾ ವಿಜಯನಗರ. ಇಲ್ಲೇ ೧೩೪೦ ರಲ್ಲಿ ಬಳ್ಳಾಳನು ಮಗನಾದ ವಿರೂಪಾಕ್ಷನಿಗೆ ಯೌವ್ವರಾಜ್ಯಾಭಿಷೇಕವನ್ನು ಮಾಡಿದನು. ಮಗನನ್ನು ಹೊಸಪಟ್ಟಣದಲ್ಲ ಬಿಟ್ಟು ದಕ್ಷಿಣ ಹೊಯ್ಸಳ ಸಾಮ್ರಾಜ್ಯನಗರಿಯಾದ ವಿಕ್ರಮಪುರಿಯನ್ನು ಸಾಧಿಸಲು ಬಲ್ಲಾಳನು ಹೊರಟನು.

ಮಹಮದೀಯರು ದೇವಗಿರಿ, ದ್ವಾರಸಮುದ್ರ, ಓರಂಗಲ್ಲನ್ನು ಹಿಡಿದು ಅಲ್ಲಿಯರಸರನ್ನು ಮೂಲೆಗೆ ಕೂಡಿಸಿದ ಮಾತ್ರಕ್ಕೇ ತೃಪ್ತರಾಗಲಿಲ್ಲ. ಅವರು ಕಾವೇರಿಯನ್ನು ದಾಟಿ, ಪಾಂಡ್ಯರಾಜರನ್ನೋಡಿಸಿ, ಮಧುರೆಯನ್ನಾಕ್ರಮಿಸಿ ಅಲ್ಲಿ ಆಳುತ್ತಿದ್ದರು. ವಿಶ್ವನಾಥನ ತರುವಾಯ ವಿಕ್ರಮಪುರಿಯೂ ಮಧುರೆಯ ಸುಲ್ತಾನರ ಕೈವಶವಾಯಿತು. ಆಗ ಮಧುರೆಯ ಸುಲ್ತಾನರು ಮಹಾಪ್ರಬಲರಾಗಿದ್ದರು. ಕಣ್ಣಾನೂರುಕುಪ್ಪದ ಬಳಿ ವೀರ ಬಲ್ಲಾಳನಿಗೂ ಮಧುರೆಯ ಸುಲ್ತಾನನಾದ ಘಿಯಾತ್ ಉದ್ದೀನನಿಗೂ ಕ್ರಿ. ಶ ೧೩೪೨ ರಲ್ಲಿ ಘೋರಯುದ್ಧವಾಯಿತು. ೩೦ ವರ್ಷಗಳ ಕಾಲ ಮಹಮದೀಯರೊಂದಿಗೆ ಕಾದಾಡಿ, ಕರ್ಣಾಟಕದ ಶೌರ್ಯತೀಕ್ಷ್ಣಾಹುತಿಗೆ ಚಂದ್ರಘಟ್ಟರನ್ನು ನೀಡಿ, ಮತ್ತೆ ಹೊಯ್ಸಳರ ಬೆಳ್ಗಸದಿಂದ ದಕ್ಷಿಣದೇಶವನ್ನು ಬೆಳಗಿಸಲು ವಿಶ್ವಪ್ರಯತ್ನವನ್ನು ಮಾಡಿದನಾದರೂ, ವಿಜಯಶ್ರೀಯು ಬಲ್ಲಾಳನನ್ನು ಬಿಟ್ಟಳು. ಮಹಮದೀಯರು ಜಯಶಾಲಿಗಳಾದರು. ಬಲ್ಲಾಳನು ಸೆರೆಯಾಳಾದನು. ಅಹರ್ನಿಶಿಯೂ ಮಹಮದೀಯರಿಗೆ ಭಂಗವನ್ನುಂಟುಮಾಡಿದ ಬಲ್ಲಾಳನನ್ನು ಘಿಯಾತ್ ಉದ್ದೀನನು ಕೊಲ್ಲಿಸಿದನು. ಯಾದವ ಹರಪಾಲನಿಗೆ ಬಂದ ಗತಿಯೇ ಹೊಯ್ಸಳ ಬಲ್ಲಾಳನಿಗೂ ಬಂತು. ಹೊಯ್ಸಳರ ಇತಿಹಾಸ ಪ್ರಕರಣವು ಹೀಗೆ ಸಮಾಪ್ತವಾಯಿತು.

ಬಳ್ಳಾಳನ ಮಗನಾದ ವಿರೂಪಾಕ್ಷ ಬಲ್ಲಾಳನು ಅಥವಾ ನಾಲ್ವಡಿಯ ಬಲ್ಲಾಳನು ಕೆಲವುಕಾಲ ತನ್ನ ಮನೆಯ ವಸತಿಯ ಮನೋವ್ಯಾತನೆಯನ್ನು ಅನುಭವಿಸಿ ೧೩೪೭ ಸುಮಾರಿನಲ್ಲಿ ಕಾಲವಾದನು.

## ೬ ಕಾಲಸ್ಥಿತಿ

ಒಟ್ಟಿನ ಮೇಲೆ ಈ ಯುಗವನ್ನು ನಾವು 'ಲಲಿತಕಲೋತ್ಪಾದಕ' ಯುಗವೆಂದು ಕರೆಯಲು ಬಯಸುತ್ತೇವೆ. ಈ ಕಾಲದಲ್ಲಿ ಅಂದರೆ ಹೊಯ್ಸಳ ಚಾಳುಕ್ಯರ ಕಾಲದಲ್ಲಿ ದಕ್ಷಿಣದೇಶದ ವಾಸ್ತುಶಿಲ್ಪದಲ್ಲೇ ಒಂದು ನೂತನ ಶಕಾರಂಭವಾಯಿತು. ಈ ಕಾಲದ ಕರ್ಣಾಟಕ ರಾಷ್ಟ್ರೀಯ ಜೀವನವು ಸೌಂದರ್ಯೋಪಾಸನೆಯಿಂದ ಪವಿತ್ರವಾಯಿತು ; ಲಲಿತಕಲಾಭಿರುಚಿಯಿಂದ ಸ್ಫೂರ್ತಿಗೊಂಡಿತು ; 'ವಾಙ್ಮಯೋತ್ಪಾದಕ' ಯುಗದಲ್ಲಿ ರಾಷ್ಟ್ರೀಯಾತ್ಮದಲ್ಲಿ ತಲೆಯೆತ್ತಿ ತಾರುಣ್ಯವನ್ನು ಹೊಂದಿದ ಹಾವ ಭಾವಗಳು ಈ ಯುಗದಲ್ಲಿ ಚಾಂಚಲ್ಯವನ್ನು ತೊರೆದು ಸ್ಥೈರ್ಯವನ್ನು ಹೊಂದಿದುವು ; ನಿಗ್ರಹ ಶಕ್ತಿಯನ್ನು ಪಡೆದುವು ; ಸೌರಸ್ಯವನ್ನು ಹೊಂದಿದುವು. ಆತ್ಮಾನಂದಕ್ಕೆ ಬೇಕಾದ ಚಿತ್ತಶುದ್ಧಿಯೂ, ಶಿಕ್ಷಣವೂ, ರಾಷ್ಟ್ರೀಯಾತ್ಮಕ್ಕೆ ಈ ಕಾಲದಲ್ಲಿ ಉಂಟಾಯಿತು.

ವಾಸ್ತುಶಿಲ್ಪದಲ್ಲಿ ಕಲ್ಯಾಣಿಯ ಚಾಳುಕ್ಯರನುಸರಿಸಿದ ಮಾರ್ಗಕ್ಕೆ ಚಾಲುಕ್ಯ ಮಾರ್ಗವೆಂದೂ, ಹೊಯ್ಸಳ ಬಲ್ಲಾಳರ ಮಾರ್ಗಕ್ಕೆ ಹೊಯ್ಸಳ ಮಾರ್ಗವೆಂದೂ, ಯಾದವರನುಸರಿಸಿದುದಕ್ಕೆ ಹೇಮಾದ್ರಿಮಾರ್ಗವೆಂದೂ ವಿಭಾಗಿಸಬಹುದು. ಅದರಲ್ಲಿ ಮೊದಲೆರಡನ್ನು ಬಿಟ್ಟರೆ ಹೇಮಾದ್ರಿಮಾರ್ಗವಷ್ಟು ಗಣಿಸಲ್ಪಡತಕ್ಕುದಲ್ಲ. (ಈ ಮಾರ್ಗದ ಹಲವು ದೇವಾಲಯಗಳು ನಿಜಾಂ ಕರ್ಣಾಟಕದಲ್ಲಿವೆ)

ಮೊದಲನೆಯದಾದ ಚಾಲುಕ್ಯ ಮಾರ್ಗಕ್ಕೆ ಕೋಗಳಿ, ಬಾಗಳಿ, ಕುರುವತ್ತಿ, ಬೆಳಗಾಂವೆ, ಕೂಬತ್ತೂರು, ಅರಸಿಯಕೆರೆ, ಹಾರನಹಳ್ಳಿ; ತುರುವೇಕೆರೆ, ನಾಗಲಾಪುರ, ಕೂಡಿಯ ದೇವಾಲಯಗಳನ್ನು ಉದಾಹರಣೆಗಾಗಿ ತೆಗೆದುಕೊಳ್ಳಬಹುದು. ಹಳೇಬೀಡು, ಬೇಲೂರು, ಸೋಮನಾಥಪುರ, ಗಿಡ್ಡನಹಳ್ಳಿ, ತಲಕಾಡು, ನುಗ್ಗಿಯಹಳ್ಳಿ, ಅಮೃತಾಪುರ, ಗೋವಿಂದನಹಳ್ಳಿ, ಬಳ್ಳಿಗಾಂವೆ, ವಿಕ್ರಮಪುರದ

ದೇವಾಗಾರಗಳು ಹೊಯ್ಸಳಮಾರ್ಗದ ವಾಸ್ತುಶಿಲ್ಪಪ್ರತಿಭಾಪ್ರಭಾ
ವಕ್ಕೆ ಉತ್ತಮೋದಾಹರಣೆಗಳಾಗಿವೆ.

ಚಾಳುಕ್ಯ ಹೊಯ್ಸಳರ ಕಾಲದಲ್ಲಿ ಉಂಟಾದ ವೈದಿಕ ಧರ್ಮದ
ಜ್ಞಾನೋದಯವೂ, ವೈಷ್ಣವಧರ್ಮದ ಭಕ್ತಿಸಂದೇಶವೂ ಪ್ರಭುಗ
ಳಲ್ಲೂ ಪ್ರಜೆಗಳಲ್ಲೂ ಅದ್ಭುತ ಸೃಷ್ಟಿಶಕ್ತಿಯನ್ನುಂಟುಮಾಡಿತು. ಆ
ಶಕ್ತಿಯು ಸೌಂದರ್ಯಾನಂದ ಸುಖಾನುಭವದಲ್ಲಿ ಕೊನೆಗಂಡಿತು.
ಚಾಳುಕ್ಯಮಾರ್ಗದ ವಾಸ್ತುಶಿಲ್ಪದ ವೈಶಿಷ್ಟ್ಯ ವಿಭಜನಾಕಾರ್ಯವಿಲ್ಲಿ ಅ
ಪ್ರಯುಕ್ತ. ಮಹಾಪ್ರತಿಭಾಶಾಲಿಗಳೂ, ಶಿಲ್ಪವರ್ಯರೂ, ಜತುರ್ಜಾ
ತಿಪ್ರಾಸಾದ ವಿನಿರ್ಮಿತ ಸೂತ್ರಧಾರಿಗಳೂ, ರೂಪಕಾರಿ (ರೂವಾರಿ)
ಗಳೂ ಸಮರ್ಥಶಿಲ್ಪಿಶಾಸ್ತ್ರವೇತ್ತರೂ ಉದಯಿಸಿದರು.

ಬೇಲೂರಿನ ಕೇಶವದೇವಾಲಯವನ್ನು ದಾಸೋಜ, ಚಾವಣ,
ಚಿಕ್ಕಹಂಪ, ಮಲ್ಲಿಯಣ್ಣ, ನಾಗಚಾರಿ, ಮಾಯಣ್ಣ, ಮಸದ, ನಾ
ಗೋಜ, ಮೊದಲಾದ ಕಲಾಕೋವಿದರೂ; ಹಳೇಬೀಡಿನ ಹೊಯ್ಸ
ಳೇಶ್ವರ ಕೇದಾರೇಶ್ವರ ದೇವಾಲಯಗಳನ್ನು ಮಣಿಬಲಕ, ಮಾಬಲ,
ಬಲ್ಲಣ, ಬೋಚಣ, ಕೇತಣ, ಬಾಮ, ಬಲಕಿ, ರೇವೋಜ,
ಪೀರಣ್ಣ, ತಾಣಗುಂದೂರು ಹರಿಷ, ಸರಸ್ವತೀದಾಸೇತ್ಯಾದಿ ಪ್ರತಿಭಾ
ಶಿಲ್ಪಿಗಳೂ; ಹೊಯ್ಸಳಮಾರ್ಗದ ವಾಸ್ತುಶಿಲ್ಪದ ಮೇಲ್ಪಙ್ಕ್ತಿಯಾದ
ಸೋಮನಾಥಪುರದ ಕೇಶವದೇವಾಲಯವನ್ನು ಮಲ್ಲಿತಮ್ಮ, ಬಲ್ಲಿ
ಯ, ಚೌಡಯ, ಬಾಮಯ, ಮಸಣಿತಮ್ಮ, ಲೋಹಿತ, ಭರಮಯ,
ನಂಜಯ್ಯ, ಯಳಮಸಯ ಮುಂತಾದ ಸಮರ್ಥಶಿಲ್ಪಿಗಳೂ, ನಿರ್ಮಿಸಿ
ದರು. ಸೂಡಿಯ ಶಿಲ್ಪಿ ಶಂಕರಾರ್ಯನೂ, ಕುರುವತ್ತಿಯ ಚಾವು
ಡೋಜನೂ ಅದ್ಭುತ ರೂಪಕಾರಿಗಳಾಗಿದ್ದರು.

ಈ ಬಗೆಯ ಅಪೂರ್ವಪ್ರತಿಭಾ ಶಿಲ್ಪಿಗಳ ಜನನಕ್ಕೂ, ಆನಂದ
ಸೌಂದರ್ಯಗಳ ರೂಪನಿರ್ಮಾಣಶಕ್ತಿಗಳಂತಿರುವ ದೇವಾಲಯ
ಗಳ ಸೃಷ್ಟಿಗೂ, ಕಾರಣಕರ್ತರಾದ ಚಾಳುಕ್ಯ ಹೊಯ್ಸಳ ಚಕ್ರವ
ರ್ತಿಗಳಿಗೆ ಕೇವಲ ಕನ್ನಡಿಗರೇಕೆ, ಭಾರತೀಯರೆಲ್ಲರೂ ಎಷ್ಟು ಕೃತ

ಜ್ಞರಾಗಿದ್ದರೂ ಅಲ್ಪವೆ. ಈ ಜಾಣ್ಮೆಯು ಶಿಲ್ಪಾಣಿ, ಭಾವದರ್ಪಣ, ಲಾವಣ್ಯಾಗಾರ, ಧರ್ಮದ ನೆಲೆವೀಡುಗಳ ರೂಪವನ್ನು ಕಂಡು ರಸಿಕರು ಒಳಗಣ್ಣು ತೆರೆಸಿ, ಆನಂದಾಮೃತವನುಂಡು ಆತ್ಮವನ್ನು ತಣಿಸಿರುವರು. ಅನೇಕ ದೇಶೀಯ ವಿದೇಶೀಯ ಶಾಸ್ತ್ರಜ್ಞರೂ, ಕಲಾವಿದರೂ ಈ ಸೌಂದರ್ಯ ಸಂಪತ್ತನ್ನು ಕುರಿತು ವರ್ಣಿಸಿರುವುದನ್ನು ಎತ್ತಿ ಬರೆಯಲಿದು ಸ್ಥಳವಲ್ಲ. ಈ ಕಾಲದ ಕಲಾಕೌಶಲ್ಯವನ್ನು ಕಂಡು ಆಧುನಿಕ ಕಲಾವಿಶಾರದರು ಆಶ್ಚರಿಗೊಂಡು, ಬೆಪ್ಪರಾಗಿ, ಅವುಗಳ ಮುಂದೆ ಮೂಕರಂತೆ ನಿಂತು ಹೋಗುವರು.

ಹೆಚ್ಚೇಕೆ ಈ ಸೌಂದರ್ಯಸೌಧಗಳನ್ನು ನಿರ್ಮಿಸುವ ಉದ್ಯೋಗದಲ್ಲಿ ಮಣ್ಣಿಗಾಗಿ ಅಗಿದ ಗುಣಿಗಳು ಕೆರೆಗಳಾದುವಂತೆ, ಕಲ್ಲಿಗಾಗಿ ಕೊರೆದ ಬೆಟ್ಟಗುಡ್ಡಗಳು ನೆಲಸಮವಾದುವಂತೆ, ಗಾಡಿಯ ಬಂಡಿಗಳು ಹರಿದ ದಾರಿಗಳು ನೀರ್ಗಾಲುವೆಗಳಾದುವಂತೆ!

ಈ ಕಾಲದಲ್ಲಿ ಕಲಾಕುಶಲತೆಯು ಸರ್ವತೋಮುಖವಾಗಿತ್ತು. ಚಾಳುಕ್ಯ ಹೊಯ್ಸಳರ ಶಾಸನಗಳನ್ನು ನೋಡಿದವರಿಗೆ ಕನ್ನಡ ಅಕ್ಷರದ ರಮ್ಯತೆಯು ಗೋಚರವಾದೀತು. ಖಗಮೃಗ, ಪುಷ್ಪಲತಾದಿಗಳನ್ನು ಅಕ್ಷರಗಳೊಂದಿಗೆ ಜೋಡಿಸಿ ಕೆತ್ತುವ ಕಲಾವಿದರಿದ್ದರು. ಒಂದೇ ಓಲೆಯಗರಿಯ ಮೇಲೆ ಮಹಾಕಾವ್ಯವೆನಿಸಿದ ಗೋಗ್ರಹಣವನ್ನು ಬರೆದ ಲಿಪಿಜಾಣನ ಕರಕೌಶಲ್ಯವನ್ನು ಊಹಿಸಲು ಸಾಧ್ಯವೆ?

ಗಾಂಧರ್ವವಿದ್ಯೆಗೂ ತಕ್ಕ ಉತ್ತೇಜನವಿತ್ತೆಂಬುದು ಅರಸರು ಅಲ್ಲಲ್ಲಿ ಗಾಂಧರ್ವಿಗರಿಗೂ, ಸೂಳೆವಾಳರಿಗೂ, ನಟ್ಟುವೋಜರಿಗೂ, ವಂಶಿಗ ವೈಣಿಗರಿಗೂ, ಆಟಕೂಟಗಳಿಗೂ ಬಿಟ್ಟ ದತ್ತಿಗಳಿಂದಲೇ ಸ್ಪಷ್ಟವಾಗುತ್ತದೆ. ಹೊಯ್ಸಳ ವೀರಬಲ್ಲಾಳನಿಗೆ 'ಸಂಗೀತ ಪ್ರಸಂಗಭಂಗಿ'ಯೆಂಬ ಬಿರುದಿತ್ತು. ಚಾಳುಕ್ಯ ಸೋಮೇಶ್ವರನಿಗೆ ಶಾಸ್ತ್ರದಲ್ಲೂ ಸಂಪೂರ್ಣ ಪಾಂಡಿತ್ಯವಿತ್ತೆಂಬುದು ಅವನ ಮಾನಸೋಲ್ಲಾಸ

ದಿಂದಲೇ ಗೊತ್ತಾಗುತ್ತದೆ. ಸಂಗೀತರತ್ನಾಕರದ ಕರ್ತನಾದ ಶಾರ್ಙದೇವನಿದ್ದುದು ಯಾದವ ರಾಮಚಂದ್ರನ ಆಸ್ಥಾನದಲ್ಲೇ.

ಕನ್ನಡ ಕವಿಚಕ್ರವರ್ತಿಗಳೆಂಬ ಬಿರುದಪ್ರಖ್ಯಾತರಾದ ರನ್ನ, ಜನ್ನರಿದ್ದುದು ಈ ಯುಗದಲ್ಲೇ. ವಿಷ್ಣುವರ್ಧನನ ಆಸ್ಥಾನದಲ್ಲಿ ರಾರಾಜಿಸುತ್ತಿದ್ದ ಕವಿಮಂಡಲಿಯನ್ನಾಗಲೇ ಪಾಠಕರಿಗೆ ಪರಿಚಯ ಮಾಡಿಸಿದ್ದಾಯಿತು. ಸೋಮೇಶ್ವರ, ಸೋಮನಾಥ, ದಾಮೋದರ ಚಿದಾನಂದಾದಿ ಕವಿಶ್ರೇಷ್ಠರು ಹೊಯ್ಸಳ ಸೋಮೇಶ್ವರನಾಸ್ಥಾನ ದಲ್ಲಿದ್ದರು. 'ಕನ್ನಡಜಾಣ' 'ವರ್ಣಕವಿ' ಇತ್ಯಾದಿ ಬಿರುದುಳ್ಳ ಬಿಜ್ಜಯ ನಾಯಕನು ಕಲಚುರಿ ಸೋವಿಯ ಮಾಂಡಲಿಕನಾಗಿದ್ದನು.

ವಿಕ್ರಮಾಂಕದೇವ ಚರಿತೆಯನ್ನು ಬರೆದ ಬಿಲ್ಹಣನೂ, ವ್ರತ ಖಂಡವನ್ನು ರಚಿಸಿದ ಹೇಮಾದ್ರಿಯೂ ಈ ಕಾಲದವರೆ. ಜ್ಯೋತಿಶ್ಶಾಸ್ತ್ರಪಾರಂಗತರಾದ ಮಾಹೇಶ್ವರ, ಭಾಸ್ಕರ, ಲಕ್ಷ್ಮೀಧರ, ಚಂಗ ದೇವರು ಯಾದವರಾಸ್ಥಾನದಲ್ಲಿದ್ದರು.

ಧಾರ್ಮಿಕದೃಷ್ಟಿಯಿಂದ ಕರ್ಣಾಟಕದಲ್ಲಿ ಈ ಕಾಲವು ಬಹಳ ಕ್ರಾಂತಿಕಾರಕವಾದುದೇ ಸರಿ. ಬಿಟ್ಟಿದೇವನು ಜೈನಮತವನ್ನು ನಿರಾಕರಿಸಿ, ರಾಮಾನುಜಾಚಾರ್ಯನಿಂದ ಶ್ರೀವೈಷ್ಣವಮತವನ್ನು ಸ್ವೀಕರಿಸಿದಂದಿನಿಂದ ಹೊಯ್ಸಳಸಾಮ್ರಾಜ್ಯವೆಲ್ಲ ಬದಲಾಯಿಸಿತು. ಬಸವನ ಜನನವೂ, ವೀರಶೈವಮತಪ್ರಚಾರವೂ ಕನ್ನಡ ಜನಜೀವನದಲ್ಲಿ ವಿದ್ಯುತ್ತನ್ನುಂಟುಮಾಡಿದುದೇ ಅಲ್ಲದೆ ಪಾಮರರಲ್ಲಿ ನೈತಿಕಜ್ಞಾನವನ್ನೂ ನಿತ್ಯಾಚರಣೆಯಲ್ಲಿ ಶೀಲವನ್ನೂ ಹೆಚ್ಚಿಸಿತು.

ಈಕಾಲದ ರಾಜ್ಯಾಂಗವ್ಯವಸ್ಥೆಯನ್ನು ವರ್ಣಿಸಲು ಹೊರತರೆ ತುದಿಮೊದಲಿಲ್ಲವಾದೀತು. ವ್ಯವಸ್ಥಾನೀತಿಯಲ್ಲಿ ಈಕಾಲದಲ್ಲ ಹೊಸ ಬದಲಾವಣೆಗಳೇನೂ ಆಗದಿದ್ದರೂ ಆ ವ್ಯವಸ್ಥೆಯನ್ನು ಕಾರ್ಯತಃ ತೋರಿಸುವುದರಲ್ಲಿ ಚಾಳುಕ್ಯರೂ, ಹೊಯ್ಸಳರೂ ಮಹಾ ಜಾಣ್ಮೆಯನ್ನು ತೋರ್ಪಡಿಸಿದರು. ಸಾಮ್ರಾಜ್ಯವೆಲ್ಲವೂ ನಾಡುಗಳಾದುವು.

ಒಂದೊಂದು ನಾಡೊಬ್ಬ ಮಾಂಡಲಿಕನ ವಶದಲ್ಲಿತ್ತು. ಆಯಾಯಾ
ನಾಡಿನ ಸುವ್ಯವಸ್ಥೆಯ ಬಗ್ಗೆ ಆ ಮಾಂಡಲಿಕನು ಜಾಗರೂಕತೆ
ಯನ್ನು ವಹಿಸಿ ಪ್ರಜೆಗಳ ಮತ್ತು ಸಾಮ್ರಾಜ್ಯದ ಸುಖ ಸಂಪತ್ತಿನಲ್ಲೇ
ಗಮನವನ್ನಿಟ್ಟಿದ್ದನು. ದಂಡನಾಯಕ, ಸಂಧಿವಿಗ್ರಹಿ, ಕೋಟೆಯ
ಯಂತ್ರವಾಹಕ, ಹಿರಿಯ ಭಂಡಾರಿ, ಅಚ್ಚುಪನ್ನಾಯದ ಅಧಿಷ್ಠಾ
ಯಕ, ಮುದ್ರಾಧಿಕಾರಿ, ಕಟಕೋಪಾಧ್ಯಾಯ, ತಂತ್ರಪಾಲ, ಆಸ್ಥಾ
ನವಸ್ತುನಾಯಕ, ಶ್ರೀಕರಣ, ಸೇನಬೋವ ಇತ್ಯಾದಿ ಅಧಿಕಾರ ಸ್ಥಾ
ನಗಳನ್ನು ಕಂಡಮಾತ್ರಕ್ಕೇ ರಾಜ್ಯಾಂಗದ ಒಂದೊಂದು ಶಾಖೆಯೂ
ಬಹು ಸಮರ್ಪಕವಾಗಿ, ಮೇಧಾವಿಗಳ ನಾಯಕತ್ವದಲ್ಲಿ, ತನ್ನ ಕರ್ತ
ವ್ಯವನ್ನು ನಿರ್ವಹಿಸುತ್ತಿತ್ತೆಂಬುದು ವಾಚಕರಿಗೆ ತಿಳಿಯದೆ ಇರದು.

೧೧-೧೨ನೆಯ ಶತಮಾನದಲ್ಲಿ ಕರ್ಣಾಟಕದ ರಾಷ್ಟ್ರೀಯತ್ವವು
ಸರ್ವಾಂಗಸೌಷ್ಠವವನ್ನು ಪಡೆದಿತ್ತೆಂಬುದರಲ್ಲಿ ಲೇಶವೂ ಸಂದೇಹ
ವಿಲ್ಲ. ಆದರೆ ೧೩ ನೆಯ ಶತಮಾನಾಂತ್ಯದಿಂದ ಕರ್ಣಾಟಕದ ಅವನ
ತಿಗೆ ಆರಂಭವಾಯಿತು. ಸಮಾಜದ ಬಿಕ್ಕಟ್ಟು ತಪ್ಪಿತು; ನೀತಿಗೆ
ಲೋಪ ಬಂತು; ದೂರದರ್ಶಿತ್ವವೂ, ಹೃದಯ ವೈಶಾಲ್ಯವೂ ಮಾ
ಯವಾಗುತ್ತ ಬಂತು. ಯಾವುದಾದರೊಂದು ಅಂಗವಾಗಲಿ ಎಲ್ಲ
ವಿಷಯಗಳಲ್ಲೂ ಮುಂದುವರಿದು ಉನ್ನತಿಯ ಪರಮಾವಧಿಯನ್ನು
ಮುಟ್ಟಿತೆಂದರೆ ಕೂಡಲೇ ಅವನತಿಯು 'ಜಾತಸ್ಯ ಮರಣಂ ಧ್ರುವಂ'
ಎಂಬಂತೆ ಸಿದ್ಧವಾಗಿಯೇ ಇರುವುದು. ಈ ೧೩ ನೆಯ ಶತಮಾನಾಂ
ತ್ಯದಲ್ಲಿ, ಕರ್ಣಾಟಕ ದೇಶದಲ್ಲಿ, ಸರ್ವತೋಮುಖವಾದ ಅವನತಿ
ಯುಂಟಾಯಿತು. ಇದಕ್ಕೆ ಮುಸಲ್ಮಾನೀಯರ ಅವಾಂತರವು
ಮುಖ್ಯ ಕಾರಣವಾದರೂ, ಸಮಾಜ ಜೀವನದಲ್ಲೇ ಒಂದು ಬಗೆಯ
ವ್ಯಾಧಿಯು ಹುಟ್ಟಿ, ಅದು ಉಲ್ಬಣಾವಸ್ಥೆಗೆ ಬಂದಿತ್ತೆಂಬುದನ್ನು
ನಾವು ಮರೆಯಬಾರದು. ಈ ವ್ಯಾಧಿಗೆ ಯಾರು ಹೇಗೆ ಚಿಕಿತ್ಸೆ
ಯನ್ನು ವಿಧಿಸಿದರೋ ಮುಂದೆ ನೋಡೋಣ.

## ನಾಲ್ಕನೆಯ ಅಧ್ಯಾಯ

### ೧ ವಿಜಯನಗರ ಸಾಮ್ರಾಜ್ಯ

### ಸಂಗಮವಂಶ ಅಥವಾ ರಾಜ್ಯಸ್ಥಾಪನೆ

ಪದಿನಾಲ್ಕನೆಯ ಶತಮಾನಾರಂಭದಲ್ಲಿ ದಕ್ಷಿಣದೇಶದಲ್ಲಿ ಉಂಟಾದ ರಾಜಕೀಯ ಮತ್ತು ಸಾಮಾಜಿಕ ಉತ್ಪಾತಗಳನ್ನು ಹಿಂದಿನ ಅಧ್ಯಾಯದಲ್ಲೇ ತಿಳಿದೆವು. ವಿರುದ್ಧ ಸಂಸ್ಕೃತಿ ಮತ್ತು ವಿರುದ್ಧ ನಾಗರಿಕತೆಗಳು ಸಂಧಿಸುವ ಕಾಲದಲ್ಲಿ ಮೊದಲು ಮೊದಲು ಜನಜೀವನದಲ್ಲಿ ಅರಿಷಡ್ವರ್ಗಗಳು ಅಗ್ರಸ್ಥಾನವನ್ನು ವಹಿಸುವವು; ಧರ್ಮಸಾಂಕರ್ಯವೂ ನೀತಿಲೋಪವೂ ಅನಿವಾರ್ಯವು ; ಲೌಕಿಕ ವೈದಿಕ ವ್ಯವಹಾರಗಳೆರಡೂ ಕೇವಲ ನೈಚ್ಯಾವಸ್ಥೆಯನ್ನು ಹೊಂದುವುವು. ದಕ್ಷಿಣದೇಶದಲ್ಲೆಲ್ಲ ಆರ್ಯ ದ್ರಾವಿಡರ ಕೀರ್ತಿಯನ್ನೆಸೆಯುತ್ತ, ಸನಾತನ ಧರ್ಮದ ಜ್ಯೋತಿಯನ್ನು ಬೆಳಗಿಸುತ್ತಿದ್ದ ಯಾದವ, ಹೊಯ್ಸಳ ಗಣಪತಿ ವಂಶಗಳೆಲ್ಲವೂ ನಿರ್ನಾಮವಾದುವು. ರಾಜಕೀಯ ಸ್ವಾತಂತ್ರ್ಯವಿನಾಶವಂತಿರಲಿ ಪ್ರಪ್ರಥಮದಲ್ಲಿ ದಕ್ಷಿಣದೇಶಕ್ಕೆ ಬಂದ ಮಹಮ್ಮದೀಯ ಜಂಝೂನಿಲವು ಆರ್ಯಧರ್ಮಕ್ಕೇ ಚ್ಯುತಿಯನ್ನು ತರುವಂತಿತ್ತು.

**ಹಿಂದುಗಳ ಸ್ವಾತಂತ್ರ್ಯೋದ್ಯಮ** :—ಕರ್ಣಾಟಕದೇಶದಲ್ಲಿ ಅನಾಯಕವುಂಟಾಯಿತು ; ಸುಖವಿಲ್ಲವಾಯಿತು. ಸುತ್ತಲೂ ಮುತ್ತುತ್ತ ಒತ್ತುತ್ತ ಬರುತ್ತಲಿದ್ದ ಪರದೇಶೀಯರೂ, ಪರಮತಾನುಯಾಯಿಗಳೂ ಆದ ಮಹಮ್ಮದೀಯರ ಕಾಟವು ಹೆಚ್ಚಿತು. ಸಮಾಜದಲ್ಲುಂಟಾದ ವ್ಯಾಧಿಯು ದಿನದಿನಕ್ಕೂ ಹೆಚ್ಚುತ್ತಿತ್ತು. ಹಿಂದೂಗಳೆಲ್ಲರಿಗೂ ಉಂಟಾದ ಈ ನೋವು ಅವರೆಲ್ಲರನ್ನೂ ಏಕದೃಷ್ಟಿಯಿಂದ ನೋವನ್ನುಂಟುಮಾಡುತ್ತಿದ್ದ ವ್ಯಕ್ತಿಯ ಕಡೆ ನೋಡುವಂತೆ ಮಾಡಿತು. ಹಿಂದೂಗಳೆಲ್ಲರೂ ಒಂದಾದರು ಸ್ವರಾಜ್ಯಸ್ಥಾಪನೆಗೂ, ಸ್ವಧರ್ಮಸ್ಥಾಪನೆಗೂ ಕ್ಷಾತ್ರಬಲವೂ ಬ್ರಹ್ಮಬಲವೂ ಎರಡೂ ಬೇಕಾಗಿತ್ತು. ಹುಕ್ಕಬುಕ್ಕರಲ್ಲಿ ಕ್ಷಾತ್ರತೇಜಸ್ಸೂ, ಮಾಧವ ಸಾಯಣರಲ್ಲಿ

ಬ್ರಹ್ಮತೇಜಸ್ಸೂ ಉಂಟಾಗಿ ಇವೆರಡೂ ಕಾರ್ಯಕ್ಷೇತ್ರದಲ್ಲಿ ಸೇರಿ ದುವು. ಕೂಡಲೇ ಕರ್ಣಾಟಕದಲ್ಲಿ, ಅದೇಕೆ, ಅಖಿಲದಕ್ಷಿಣದೇಶದಲ್ಲಿ ಸ್ವದೇಶ ಸ್ವಧರ್ಮಗಳು ಸ್ಥಾಪನೆಯಾದುವು. ಅದರ ಫಲವೇ ತುಂಗ ಭದ್ರಾತೀರದಲ್ಲಿ, ವಿರೂಪಾಕ್ಷನ ಸನ್ನಿಧಿಯಲ್ಲಿ, ಪಂಪಾಕ್ಷೇತ್ರದಲ್ಲಿ, ನಿರ್ಮಿಸಲ್ಪಟ್ಟ ವಿಜಯನಗರ ಸಾಮ್ರಾಜ್ಯ.

**ರಾಜ್ಯಸ್ಥಾಪನೆ** :—ವಿಜಯನಗರವೆನ್ನುತ್ತಲೇ ಹುಕ್ಕ ಬುಕ್ಕ ವಿದ್ಯಾರಣ್ಯರೆಂಬ ಮೂವರ ಹೆಸರು ಎಲ್ಲರ ನೆನಪಿಗೂ ಥಟ್ಟನೆ ಬರುತ್ತದೆ. ಇವರನ್ನು ಕುರಿತ ಕಥೆಗಳನ್ನರಿಯದವರೇ ಅಪೂರ್ವ. ನಾವೀಗ ರಾಜ್ಯಸ್ಥಾಪನಾವಿಚಾರವಾದ ಕಥೆಗಳಲ್ಲೊಂದನ್ನು ಸಂಕ್ಷೇಪವಾಗಿ ಸಂಗ್ರಹಿಸಲಿರುವೆವು. ಹುಕ್ಕನು ತುಂಗಭದ್ರಾತೀರದ ಅರಣ್ಯದಲ್ಲಿ ಬೇಟೆಯಾಡಲು ಒಮ್ಮೆ ಹೋಗಿದ್ದನು. ಆಗ ಅವನು ಒಂದು ನಾಯಿಯು ಹುಲಿಯನ್ನೂ ಸಿಂಹವನ್ನೂ ಅಟ್ಟಿಕೊಂಡು ಬರುತ್ತಿದ್ದುದನ್ನೂ, ಮೊಲವೊಂದು ಆ ನಾಯಿಯ ಮೇಲೆ ಬೀಳುತ್ತಿದ್ದುದನ್ನೂ ಕಂಡು, ಈ ವಿಚಿತ್ರವ್ಯಾಪಾರಕ್ಕಾಗಿ ಆಶ್ಚರ್ಯಗೊಂಡು, ಮುಂದುವರಿಯಲು, ದಾರಿಯಲ್ಲಿ ತಪಶ್ಚರ್ಯೆಯಲ್ಲಿದ್ದ ಯತಿಯೊಬ್ಬನನ್ನು ಕಂಡನು. ಆ ಯತಿಗೆ ತಾನು ಕಂಡ ಸಮಾಚಾರವನ್ನು ತಿಳಿಸಿದನು. ಆಗಲಾ ಯತಿಯು ಒಳಗಣ್ಣಿನಿಂದಾಕ್ಷೇತ್ರದ ಮಹಿಮೆಯನ್ನರಿತು, ಅಲ್ಲೊಂದು ನಗರವನ್ನು ಕಟ್ಟುವಂತೆ ಹುಕ್ಕನಿಗೆ ಹೇಳಿದನು. ಅದೇ ರೀತಿಯಾಗಿ ಹುಕ್ಕನು ಪುರವೊಂದನ್ನು ಕಟ್ಟಿ ಅದಕ್ಕೆ ಆ ಯತಿಯ ಹೆಸರನ್ನಿಟ್ಟು, ಅದನ್ನು ತನ್ನ ರಾಜಧಾನಿಯನ್ನಾಗಿ ಮಾಡಿದನು. ಹುಕ್ಕನೇ ಹರಿಹರ, ಯತಿಯೇ ವಿದ್ಯಾರಣ್ಯ ಆ ನಗರವೇ ವಿದ್ಯಾನಗರ ಅಥವಾ ವಿಜಯನಗರ.

ಈ ಕಥೆಗಳಂತಿರಲಿ. ವಿಜಯನಗರ ಸಾಮ್ರಾಜ್ಯಸ್ಥಾಪನಾ ವಿಚಾರವಾಗಿ ತಿಳಿದು ಬಂದಿರುವ ಹಲಕೆಲವು ಚರಿತ್ರಾಂಶಗಳನ್ನು ಪರೀಕ್ಷಿಸುವ. ಹರಿಹರನೂ ಅವನ ಸೋದರರೂ ಓರಂಗಲ್ಲುಗಣಪತಿಗಳಲ್ಲಿ ಕೋಶಾಧ್ಯಕ್ಷರಾಗಿದ್ದು ಹೊಯ್ಸಳ ಸಾಮ್ರಾಜ್ಯಾನಂತರ ಅವರು ಆನೆ

ಗೊಂಡಿಯ ಬಳಿ ಕೋಟೆಯೊಂದನ್ನು ಕಟ್ಟಿ, ಸುತ್ತಮುತ್ತಲಿನ ದೇಶ ವೆಲ್ಲವನ್ನೂ ಆಕ್ರಮಿಸಿ, ವಿಜಯನಗರ ರಾಜ್ಯಕ್ಕೆ ಮೂಲ ಪುರುಷ ನಾದನೆಂದು ಹಲವರ ಊಹೆ. ಮತ್ತೆ ಹಲವು ಶಾಸನಾಧಾರಗಳಿಂದ ಹುಕ್ಕಬುಕ್ಕರೇ ಮೊದಲಾದ ಸೋದರರಿಗೂ, ಹೊಯ್ಸಳ ಸಾಮ್ರಾ ಜ್ಯಕ್ಕೂ ಇದ್ದ ಸಂಬಂಧವು ಕೊಂಚ ಮಟ್ಟಿಗೆ ಹೊರಬೀಳುತ್ತದೆ. ದ್ವಾರಸಮುದ್ರದ ಪತನಾನಂತರ ಮುಮ್ಮಡಿ ಬಳ್ಳಾಳನು ಹೊಸ ಪಟ್ಟಣವನ್ನು ಕಟ್ಟಿ, ಅಲ್ಲಿ ತನ್ನ ಮಗನಾದ ವೀರವಿರೂಪಾಕ್ಷ ಬಳ್ಳಾ ಳನಿಗೆ ಪಟ್ಟಾಭಿಷೇಕವನ್ನು ಮಾಡಿದನೆಂದು ಹಿಂದೆಯೇ ಹೇಳಿದೆವು. ಅಲ್ಲದೆ ಹರಿಹರ ಸೋದರರು ಹೊಯ್ಸಳರ ಕಾಲದಲ್ಲಿ ಸಾಮಂತ ಪ್ರಭುಗಳಾಗಿ ಆಳುತ್ತಿದ್ದಂತೆ ತಿಳಿಯಬರುತ್ತದೆ. ಇಷ್ಟೇ ಅಲ್ಲದೆ ಹುಕ್ಕ ಬುಕ್ಕರ ಮೊದಲು ಮೊದಲಿನ ಶಾಸನಗಳಲ್ಲಿ 'ಮಹಾಮಂಡ ಲೇಶ್ವರ' ರೆಂಬದಾಗಿ ಹೇಳಿದೆಯೇ ವಿನಾ 'ರಾಜ'ನೆಂದಾಗಲಿ 'ಮಹಾ ರಾಜ' ನೆಂದಾಗಲಿ ಹೇಳಿಲ್ಲ. ಇದಲ್ಲದೆ ಹೊಯ್ಸಳರಿಗೂ ವಿಜಯನ ಗರ ಸ್ಥಾಪಕರಿಗೂ ರಕ್ತಸಂಬಂಧವಿರುವಂತೆ ಕಾಣಬರುತ್ತದೆ. ಮುಮ್ಮಡಿ ಬಳ್ಳಾಳನ ಮಗನಾದ ವಿರೂಪಾಕ್ಷ ಬಳ್ಳಾಳನು (ಬಲ್ಲಪ ದಂಡನಾಯಕ) ಹರಿಹರನ ಅಳಿಯನಾಗಿದ್ದನು. ಈ ಕಾರಣಗಳಿಂದ ವಿಜಯನಗರ ಸ್ಥಾಪನಾ ವಿಚಾರದಲ್ಲಿ ಇದುವರೆಗೆ ನಮಗಿರುವ ತಿಳು ವಳಿಕೆಯು ಸಾಧುವಲ್ಲವೆಂಬುದು ಸ್ಪಷ್ಟ. ಬುಕ್ಕನು ಹೊಯ್ಸಳ ಸಾಮ್ರಾಜ್ಯದ ಪೂರ್ವ ಮತ್ತು ಮಧ್ಯ ಭಾಗಗಳನ್ನೂ; ಹರಿಹರನು ಪಶ್ಚಿಮ ಭಾಗಗಳನ್ನೂ; ಕಂಪಣನು ನೆಲ್ಲೂರು ಕಡಪಾ ಜಿಲ್ಲೆಗ ಳನ್ನೂ; ಮಾರಪನು ಶಿವಮುಗ್ಗಿ, ಉತ್ತರ ಕನ್ನಡ ಪ್ರಾಂತಗಳನ್ನೂ; ಬುಕ್ಕನ ಮಗನಾದ ಇಮ್ಮಡಿ ಕಂಪಣನು ತಮಿಳು ದೇಶವನ್ನೂ ಆಳುತ್ತಿದ್ದರು. ಹೊಯ್ಸಳ ಸಾಮ್ರಾಜ್ಯವು ಸಡಿಲವಾಗುತ್ತಿದ್ದಾಗ ಆ ಸಾಮ್ರಾಜ್ಯದ ಸಾಮಂತರನೇಕರು ಸ್ವತಂತ್ರರಾಗಲೆತ್ನಿಸುತ್ತಿ ದ್ದರು. ಅವರಲ್ಲಿ ವಿಜಯನಗರ ರಾಜ್ಯ ಸ್ಥಾಪಕರೂ ಒಬ್ಬರು.

ಮುಮ್ಮಡಿ ಬಳ್ಳಾಳನು ಮಧುರೆಯ ಮಹಮ್ಮದೀಯರೊಂದಿಗೆ ಕಾದಾಡುತ್ತಿರಲು, ಹುಕ್ಕ ಬುಕ್ಕ ಸೋದರರೆಲ್ಲರೂ ಏಕವಾಗಿ ಮಹಾ

ಪ್ರತಿಭಾಶಾಲಿಗಳೂ, ತೇಜೋವಂತರೂ ಆದ ಮಾದರಸ ಅಥವಾ ಮಾಧವ (ವಿದ್ಯಾರಣ್ಯ) ಸಾಯಣ, ಭೋಗನಾಥರೆಂಬ ರಾಜನೀತಿ ವಿಶಾರದರ ಸಹಾಯದಿಂದ, ಮಹಮ್ಮದೀಯರ ಕೈವಶವಾಗುತ್ತಿದ್ದ ಹೊಯ್ಸಳ ರಾಜ್ಯವನ್ನು ಉದ್ಧರಿಸಿ, ಕ್ರಿ. ಶ. ೧೩೩೬ ಸುಮಾರಿನಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರು. ರಾಜಕೀಯ ಸ್ವಾತಂತ್ರ್ಯ ಸ್ಥಾಪನಾ ದೃಷ್ಟಿಯಿಂದ ಈ ಸಾಮ್ರಾಜ್ಯ ಸ್ಥಾಪನೆಯು ದಕ್ಷಿಣ ದೇಶದ ಇತಿಹಾಸದಲ್ಲಿ ಗಣಿಸಲ್ಪಡತಕ್ಕದಾದರೆ, ಹಿಂದೂ ಸಮಾಜ ಸಂಸ್ಕೃತಿ ಧರ್ಮಗಳ ಉದ್ಧಾರ ದೃಷ್ಟಿಯಿಂದ ಈ ಸಾಮ್ರಾಜ್ಯ ಸ್ಥಾಪನೆಯು ಭರತ ಖಂಡದ ಇತಿಹಾಸದಲ್ಲೇ ದ್ವಿಗುಣವಾಗಿ ಗಣಿಸಲ್ಪಡತಕ್ಕದು.

ಹುಕ್ಕ ಬುಕ್ಕರ ಅಥವಾ ಹರಿಹರನ ವಂಶಕ್ಕೆ ಸಂಗಮ ವಂಶವೆಂದು ಹೆಸರು. ಹರಿಹರನ ತಂದೆಯ ಹೆಸರೇ ಈ ಮನೆಗೆ ಬಂತು. ಇವರು ಯಾದವವಂಶದವರೆಂದು ತಿಳಿಯ ಬರುತ್ತದೆ. ಇವರದು ವರಾಹಲಾಂಛನ. ಶ್ರೀ ವಿರೂಪಾಕ್ಷನೇ ಮನೆದೇವರು.

ಹರಿಹರನ ತರುವಾಯ ಅವನ ತಮ್ಮನಾದ ಬುಕ್ಕನು ಕ್ರಿ. ಶ. ೧೩೫೪ ರಲ್ಲಿ ಸಿಂಹಾಸನಾರೂಢನಾದನು. ಹರಿಹರನ ಕಾಲದಲ್ಲಿ ರಾಜ್ಯವಿಸ್ತಾರವಾಗಿತ್ತಷ್ಟೆ. ನೀತಿ ವಿಶಾರದರಾದ ಮಾಧವ ಸಾಯಣರ ಸಹಾಯದಿಂದ ದಿನದಿನಕ್ಕೂ ರಾಜ್ಯವಿಸ್ತಾರವಾಗುತ್ತಿದ್ದುದು ಮಾತ್ರವೇ ಅಲ್ಲದೆ ಸಾಮ್ರಾಜ್ಯದ ವೈಭವವೂ, ಗೌರವವೂ ಹೆಚ್ಚುತ್ತಿತ್ತು. ಬುಕ್ಕನಿಗೆ ಇಮ್ಮಡಿ ಹರಿಹರ, ಇಮ್ಮಡಿ ಕಂಪ, ಸಂಗಮ, ವಿರೂಪಾಕ್ಷ, ಭಾಸ್ಕರ, ಮಲ್ಲಿನಾಥರೆಂಬ ಮಕ್ಕಳಿದ್ದರು. ಇವರೆಲ್ಲರೂ ಮಾಂಡಲಿಕರಾಗಿ ಸಾಮ್ರಾಜ್ಯದ ಒಂದೊಂದು ಭಾಗದ ಆಡಳಿತವನ್ನು ನಡೆಸುತ್ತಿದ್ದರು.

**ವಿಜಯನಗರವೂ ಮಹಮ್ಮದೀಯರೂ** :—ಕ್ರಿ. ಶ. ೧೩೪೭ ಸುಮಾರಿನಲ್ಲಿ ಬಹಮನಿ ರಾಜ್ಯಸ್ಥಾಪನೆಯಾಯಿತು. ಅದರೂ ಮೊದಲು ಮೊದಲು ಬಹಮನಿ ಅರಸರಿಗೂ ವಿಜಯನಗರದ

ಸರಿಗೂ ದ್ವೇಷವಿರಲಿಲ್ಲ. ಅಲ್ಲಾಉದ್ದೀನನ ಅನಂತರ ಬಂದ ಮಹಮ್ಮದ್‌ಷಹನ ಕಾಲದಲ್ಲಿ ಈ ಎರಡು ರಾಜ್ಯಗಳಿಗೂ ಮನಸ್ತಾಪವುಂಟಾಯಿತು. ಹರಿಹರನ ತರುವಾಯ ಇಮ್ಮಡಿ ಹರಿಹರನೂ ಅವನಾದ ಮೇಲೆ ಅವನ ಮಗನಾದ ಪ್ರತಾಪದೇವರಾಯನೂ ಪಟ್ಟಕ್ಕೆ ಬಂದರು. ಈ ದೇವರಾಯನ ಕಾಲದಲ್ಲೇ ಬಹಮನೀ ಸುಲ್ತಾನರೊಂದಿಗೆ ಕಲಹಕ್ಕೆ ಮೊದಲಾದುದು. ತುಂಗಭದ್ರೆಯಿಂದ ಉತ್ತರಕ್ಕೆ ರಾಜ್ಯವಿಸ್ತಾರ ಮಾಡಲು ಪ್ರಯತ್ನಿಸಿದುದೇ ಬಹಮನೀ ಅರಸರೊಂದಿಗೆ ಕಲಹಕ್ಕೆ ಮುಖ್ಯಕಾರಣ. ಇಮ್ಮಡಿ ಹರಿಹರನೂ ಬಹಮನೀ ಅರಸರಿಗೆ ಆಗಲೇ ನವೀನ ಹಿಂದೂ ಉದ್ಯಮದ ಪ್ರಭಾವವನ್ನು ತೋರ್ಪಡಿಸಿದನು. ಪ್ರತಾಪ ದೇವರಾಯನ ಅನಂತರ ಇಮ್ಮಡಿ ದೇವರಾಯನು ಕರ್ಣಾಟ ಸಿಂಹಾಸನವನ್ನು ಏರಿ ಪ್ರೌಢ ಪ್ರತಾಪ ದೇವರಾಯ, ಗಜಬೇಂಟೆಕಾರ ಎಂಬದಾಗಿ ಖ್ಯಾತಿಗೊಂಡು ಸಂಗಮ ವಂಶದರಸರಲ್ಲಿ ಮಹಾ ಶೂರನೆನಿಸಿದನು. ವಿಜಯನಗರದ ಕೋಟೆಯನ್ನು ಭದ್ರಪಡಿಸಿದನು ; ರಾಜನಗರಿಯನ್ನು ವಿಸ್ತರಿಸಿ ಅಲಂಕರಿಸಿದನು. ರಾಜನೀತಿವಿಶಾರದರ ಹೇಳಿಕೆಯಮೇಲೂ, ಮಹಮದೀಯರ ಸಂಪರ್ಕದಿಂದುಂಟಾದ ಅನುಭವದಿಂದಲೂ, ಕರ್ಣಾಟಕ ಸೈನ್ಯವನ್ನು ಬಲಪಡಿಸಿ ಸುಧಾರಣೆಗಳನ್ನು ಮಾಡಿದನು. ಈ ಕಾರ್ಯಕ್ಕಾಗಿಯೇ ತುರ್ಕಿಯ ಸೈನಿಕರನ್ನು ನೇಮಿಸಿದನು. ಅವರಿಗೆ ರಾಜನಗರಿಯಲ್ಲಿ ಬೇಕಾದ ಸೌಕರ್ಯಗಳನ್ನು ಕಲ್ಪಿಸಿಕೊಟ್ಟನು.

ಬಹುಮನೀಸುಲ್ತಾನರಿಗೂ ಸಂಗಮವಂಶೀಯರಿಗೂ ಮನಸ್ತಾಪಗಳು ಹುಟ್ಟಿದಂತೆ ತಿಳಿದವು. ಕ್ರಿ. ಶ. ೧೪೧೭ ಸುಮಾರಿನಲ್ಲಿ ಪ್ರತಾಪ ದೇವರಾಯನು ಯುದ್ಧಭೂಮಿಯಲ್ಲಿ ಸುಲ್ತಾನನನ್ನು ಸೋಲಿಸಿ, ಬಿಜಾಪುರ ಪ್ರಾಂತ್ಯವನ್ನು ಸ್ವಾಧೀನಪಡಿಸಿಕೊಂಡನು. ಈ ಸಂದರ್ಭದಲ್ಲಿ ಸೋತು ಹಿಂದಿರುಗಿದ ಫಿರೂಜನು ಕಾಲವಾದನು.

ಸದ್ಯಕ್ಕೆ ಮಹಮ್ಮದೀಯರ ಕಾಟವು ವಿಜಯನಗರಕ್ಕೆತಪ್ಪಿತು. ಈ ಸಮಯದಲ್ಲಿ ಇಮ್ಮಡಿ ದೇವರಾಯನು ಆಂಧ್ರಕರ್ಣಾಟಕ

ರಾಜ್ಯವನ್ನು ವಿಸ್ತರಿಸಿ, ಶೂರರೂ ನೀತಿವಿಶಾರದರೂ ಆದ ಪ್ರಾಂತ ಲಿಕರನ್ನು ಅಡಳಿತಕ್ಕೆ ನೇಮಿಸಿ, ಮಧುರ, ಲಕ್ಷ್ಮೀಧರ ಮೊದಲಾದ ಕವಿಜನಗಳಿಗಾಶ್ರಯನಾಗಿದ್ದು, ಶೈವವೈಷ್ಣವ ಮತಗಳೆರಡಕ್ಕೂ ಗೆಗೆ ಏಕರೀತಿಯಾದ ಪ್ರೋತ್ಸಾಹವನ್ನು ಕೊಟ್ಟು, ಕೀರ್ತಿವಂತನಾದನು. ಇವನಿಗೆ ಪೊನ್ನಲದೇವಿ ಸಿಂಹಳದೇವಿ ಯೆಂಬಿಬ್ಬರು ಅರಸಿಯರಿದ್ದರು. ಪೊನ್ನಲದೇವಿಯ ಮಗನಾದ ಮಲ್ಲಿಕಾರ್ಜುನನು ಕ್ರಿ. ಶ. ೧೪೪೬ ರಲ್ಲಿ ಪಟ್ಟಕ್ಕೆ ಬಂದು ೨೦ ವರ್ಷಗಳ ಕಾಲ ಆಡಳಿತವನ್ನು ನಡೆಸಿದನು. ಅವನನಂತರ ಸಿಂಹಳದೇವಿಯ ಮಗನಾದ ವಿರೂಪಾಕ್ಷನು ರಾಜ್ಯಾಧಿಕಾರವನ್ನು ವಹಿಸಿದನು. ಆದರೇನು ಸ್ತ್ರೀಲೋಲನೂ, ಮಧುಪಾನ ಮತ್ತನೂ ಆದ ವಿರೂಪಾಕ್ಷನ ಆಳ್ವಿಕೆಯ ವಿಚಕ್ಷಣೆಯನ್ನು ಹೇಳಬೇಕಾದುದಿಲ್ಲ. ಸ್ವಾರ್ಥಪರರಾದ ಸಾಮಂತರು ಸ್ವತಂತ್ರರಾದರು. ಮಹಮ್ಮದೀಯರು ಪ್ರಬಲರಾಗಿ ಸುತ್ತುಮುತ್ತಲೂ ರಾಜ್ಯವನ್ನು ಮುತ್ತಿದರು.

## ಸಾಳುವವಂಶ ಅಥವಾ ರಾಜ್ಯವಿಸ್ತಾರ

ಆಗ ವಿಜಯನಗರದ ಪೂರ್ವಭಾಗಕ್ಕೆಲ್ಲ (ಆಂಧ್ರದೇಶ) ಸಂಗಮವಂಶೀಯರ ಕೈಕೆಳಗಿನ ಸಾಳುವಮನೆತನದ ಸಾಮಂತರು ಒಡೆಯರಾಗಿದ್ದರು. ವಿರೂಪಾಕ್ಷನ ಕಾಲದಲ್ಲಿ ಅಲ್ಲಿ ಸಾಳುವ ನರಸಿಂಹನೆಂಬುವನು ಆಳುತ್ತಿದ್ದನು. ವಿಜಯನಗರದರಮನೆಯಲ್ಲಿ ಆಗಬಾರದ ಕೆಲಸಗಳಾಗುತ್ತ ಬಂತು. ವಿರೂಪಾಕ್ಷನನ್ನು ಕೊಂದು ಅವನ ಹಿರಿಯಮಗನಾದ ರಾಜಶೇಖರನು ಸಿಂಹಾಸನವನ್ನೇರಿದನು. ಇದನ್ನು ಕಂಡು ಸಹಿಸದ ಕಿರಿಯುವನಾದ ಇಮ್ಮಡಿ ವಿರೂಪಾಕ್ಷನು ಅಣ್ಣನನ್ನು ಕೊಂದನು. ಹೀಗೆ ಕೊಲೆಗಳು ನಡೆಯುತ್ತಿರಲು ಪ್ರಬಲ ಸಾಮಂತನಾದ ಸಾಳುವ ನರಸಿಂಹನು ಸೈನ್ಯವೆಲ್ಲವನ್ನೂ ಸ್ವಾಧೀನ ಪಡಿಸಿಕೊಂಡು ಭ್ರಾತೃಹಂತಕನೂ, ಹೇಡಿಯೂ ಆದ ಇಮ್ಮಡಿ ವಿರೂಪಾಕ್ಷನನ್ನು ಒದ್ದೋಡಿಸಿ, ತಾನೇ ರಾಜ್ಯವನ್ನಪಹರಿಸಿ, ಸಾಮ್ರಾಜ್ಯಕ್ಕೆ ಮಹಮ್ಮದೀಯರಿಂದ ಬಂದೊ

ದಗಬಹುದಾಗಿದ್ದ ಆಪತ್ತನ್ನು ಪರಿಹರಿಸಿದನು. ಈ ದೃಷ್ಟಿಯಿಂದ ಸಾಳುವ ನರಸಿಂಹನ ರಾಜ್ಯಾಪಹಾರವು ದೇಶಕ್ಕೆ ಸುಖಪ್ರದವಾಯಿತು.

ಇವರಿಗೆ ಸಾಳುವರೆಂಬ ಹೆಸರು ಹೇಗೆ ಬಂತೋ ಗೊತ್ತಿಲ್ಲ. ಇಮ್ಮಡಿ ಹರಿಹರನಿಗೆ ಸಾಳುವ ಗುಂಡನೆಂಬುವನು ಮಂತ್ರಿಯಾಗಿದ್ದನು. ಇವನದು ಚಂದ್ರವಂಶವೆಂದು ಹೇಳಲ್ಪಟ್ಟಿದೆ. ಇವನಿಗೆ ಮಂಗರಾಜನು ಹುಟ್ಟಿದನು. ಇವನಿಗೆ ಗೌತರಾಜನೂ, ಗೌತನಿಗೆ ಗುಂಡರಾಜನೂ ಹುಟ್ಟಿದರು. ಈ ಗುಂಡರಾಜನ ಮಗನೇ ಸಾಳುವ ನರಸಿಂಹನು. ಇವನು ಸು. ಕ್ರಿ. ಶ. ೧೪೭೯ ರಲ್ಲಿ ಸರ್ವಾಧಿಕಾರವನ್ನು ವಹಿಸಿದನು. ಪರರಾಯರು ಅದುವರೆಗೆ ಅಪಹರಿಸಿದ್ದ ರಾಜ್ಯವೆಲ್ಲವನ್ನೂ ಪಡೆದನು.

**ವಿಜಯಯಾತ್ರೆ**:—ಈಶ್ವರನೆಂಬುವನೂ ಅವನ ಮಗನಾದ ನರಸರಾಯನೂ ಇವನಿಗೆ ಸೇನಾನಾಯಕರಾಗಿದ್ದರು. ಇವರ ಸಹಾಯದಿಂದ ನರಸಿಂಹನು ವಿಜಯಯಾತ್ರೆ ಹೊರಟು ಪಾರಸೀಕರನ್ನು ಮಟ್ಟಹಾಕಿ, ತಮಿಳುದೇಶವನ್ನೆಲ್ಲ ವಶಪಡಿಸಿಕೊಂಡು ಹಿಂದಿರುಗಿದನು. ರಾಯಚೂರು, ಉದಯಗಿರಿ, ಕೊಡವೀಡು ಈ ಮೂರು ದುರ್ಗಗಳು ವಿನಾ ಮಿಕ್ಕದೇಶವೆಲ್ಲವನ್ನೂ ಸಾಧಿಸಿ ಸಾಮ್ರಾಜ್ಯಕ್ಕೆ ಗೌರವವನ್ನು ತಂದು, ಪ್ರಜೆಗಳನ್ನಾದರಿಸಿ, ಪ್ರಭುಗಳನ್ನು ಗೌರವಿಸಿ, ವಿದ್ವಜ್ಜನರನ್ನು ಸನ್ಮಾನಿಸಿ, ರಾಜ್ಯಭಾರಮಾಡಿದನು. ಆಗ ಈ ದೇಶದೊಂದಿಗೆ ವ್ಯಾಪಾರಕ್ಕೆ ಮೊದಲು ಮಾಡಿದ ಪಾಶ್ಚಿಮಾತ್ಯರೂ, ಮುಹಮ್ಮದೀಯ ಲೇಖಕರೂ, ವಿಜಯನಗರ ರಾಜ್ಯವನ್ನು 'ನರಸಿಂಗರಾಜ್ಯ' ವೆಂದು ಕರೆದರು.

ಪ್ರೌಢ ಪ್ರತಾಪ ದೇವರಾಯನ ಕಾಲದಲ್ಲಿ ಪೆಟ್ಟುತಿಂದ ಬಹಮನೀ ಸುಲ್ತಾನರು ವಿಜಯನಗರದರಸರಿಗೆ ಸದಾ ಹಿಂಸೆಯನ್ನು ಉಂಟುಮಾಡುತ್ತಿದ್ದರು. ನರಸಿಂಹನ ಕಾಲದಲ್ಲಿ ಬಹಮನೀ ಸುಲ್ತಾನರ ಬೆನ್ನು ಮುರಿಯಿತು. ಮುಹಮ್ಮದ್ ಷಹನ ಅನಂತರ ಬಹ

ಮನೀ ರಾಜ್ಯದಲ್ಲುಂಟಾದ ಅಂತಃಕಲಹಗಳಿಂದಲೂ, ದಿನದಿನಕ್ಕೂ ಬಲವಾಗುತ್ತಿದ್ದ ವಿಜಯನಗರದ ದಂಡಯಾತ್ರೆಗಳಿಂದಲೂ ಬಹಮನೀ ರಾಜ್ಯವು ಒಡೆಯಿತು. ಬಿಜಾಪುರ, ಅಹಮ್ಮದ್ನಗರ, ಗೋಲಕೊಂಡ, ಬೀರಾರ್ ಮತ್ತು ಬಿದರೆ ಎಂಬ ಐದು ರಾಜ್ಯಗಳಾದವು.

ನರಸನ ಅವಸಾನಕಾಲದಲ್ಲಿ ಬಾಲಕರಾದ ತನ್ನ ಮಕ್ಕಳನ್ನು, ಸೇನಾನಾಯಕನೂ, ಪ್ರಮುಖ ಸಾಮಂತನೂ ಆದ ನರಸರಾಯನಿಗೆ ಒಪ್ಪಿಸಿದನು. ನರಸಿಂಹನ ಮರಣಾನಂತರ ಅವನ ಹಿರಿಯಮಗನಾದ ಇಮ್ಮಡಿ ನರಸಿಂಹನನ್ನು ಸಿಂಹಾಸನದ ಮೇಲೆ ಕೂಡಿಸಿ ಸರ್ವಾಧಿಕಾರವನ್ನೂ ನರಸರಾಯನೇ ನಡೆಸುತ್ತಿದ್ದನು. ಕಡೆಕಡೆಗೆ ಅವನನ್ನು ಮೂಲೆಗೆ ಕೂಡಿಸಿ ತಾನೇ ಅರಸನಾದನು

## ತುಳುವಂಶ ಅಥವಾ ಸಾಮ್ರಾಜ್ಯ ವೈಭವ

ಸಾಳ್ವರಿಂದ ರಾಜ್ಯಾಪಹಾರ ಮಾಡಿದ ನರಸನು ತುಳುವಂಶಕ್ಕೆ ಸೇರಿದವನು. ಈಗಿನ ದಕ್ಷಿಣ ಕನ್ನಡವೇ ತುಳುದೇಶವೆಂಬುದನ್ನು ಹೊಸದಾಗಿ ಹೇಳಬೇಕಾಗಿಲ್ಲ. ಈ ವಂಶದ ಈಶ್ವರನಿಗೆ ನರಸಿಂಹನು ಹುಟ್ಟಿದನು. ಇವನಿಗೆ ತಿಪ್ಪಾಜಿ, ನಾಗಲಾದೇವಿ ಯೆಂಬಿಬ್ಬರು ಹೆಂಡಿರಿದ್ದರು. ತಿಪ್ಪಾಜಿಯ ಹೊಟ್ಟೆಯಲ್ಲಿ ವೀರನರಸಿಂಹನೂ, ನಾಗಲಾದೇವಿಯ ಹೊಟ್ಟೆಯಲ್ಲಿ ವಿಖ್ಯಾತ ಕೃಷ್ಣದೇವರಾಯನೂ ಜನಿಸಿದರು. ವೀರನರಸಿಂಹನೂ ಕೆಲವು ಕಾಲ ರಾಜ್ಯಭಾರ ಮಾಡಿದಂತೆ ಕಾಣಬರುತ್ತದೆ. ಕ್ರಿ. ಶ. ೧೫೦೮ ಸುಮಾರಿನಲ್ಲಿ ಕೃಷ್ಣದೇವರಾಯನು ವಿಜಯನಗರ ಸಿಂಹಾಸನವನ್ನಲಂಕರಿಸಿದನು. ಇವನ ಮಂತ್ರಿಯೂ, ರಾಜಗುರುವೂ ಆದ ತಿಮ್ಮರಸ ಅಥವಾ ಅಪ್ಪಾಜಿಯ ಹೆಸರನ್ನರಿಯದವರಿಲ್ಲ.

**ಕೃಷ್ಣದೇವರಾಯ** :—ಕೃಷ್ಣದೇವರಾಯನು ಸಿಂಹಾಸನವನ್ನೇರುತ್ತಲೇ ತನ್ನ ಸೋದರರನ್ನೂ, ಸೋದರಸುತರನ್ನೂ ಹಿಡಿದು ಚಂದ್ರಗಿರಿಯಲ್ಲಿ ಬಂಧಿಸಿ, ಸಿಂಹಾಸನದ ಮೇಲೆ ತನ್ನಿರುವಿಕೆಯನ್ನು

ಬಲಪಡಿಸಿಕೊಂಡನು. ಮುದ್ರಾಮಾತ್ಯನಂತಿದ್ದ ತಿಮ್ಮರಸನೇ ಇವನಿಗೆ ಮಂತ್ರಿಯೆಂದಮೇಲೆ ಆತನಿತ ವಿಚಕ್ಷಣೆಯನ್ನು ಹೇಳಬೇಕಾದುದಿಲ್ಲ.

**ದಕ್ಷಿಣ ದಿಗ್ಯಾತ್ರೆ**:—ಸಿಂಹಾಸನಕ್ಕೆ ಬಂದ ೪-೫ ವರ್ಷಗಳಲ್ಲೇ ಕೃಷ್ಣದೇವರಾಯನು ದಕ್ಷಿಣ ದಿಕ್ಕಿಗೆ ದಂಡಯಾತ್ರೆ ಹೊರಟನು. ಉಮ್ಮತ್ತೂರು, ಶಿವಸಮುದ್ರ, ಶ್ರೀರಂಗಪಟ್ಟಣಗಳನ್ನು ಹಿಡಿದನು. ಅಂದಿನಿಂದ ಶ್ರೀರಂಗಪಟ್ಟಣವು ವಿಜಯನಗರದ ಮಾಂಡಲಿಕನೊಬ್ಬನ ಮುಖ್ಯನಗರಿಯಾಯಿತು. ದಕ್ಷಿಣ ಕರ್ಣಾಟಕ ದೇಶಕ್ಕೆಲ್ಲ ಅದು ರಾಜಧಾನಿಯಾಯಿತು. ಅಲ್ಲಿಂದ ಮುಂದೆ ಕಾವೇರಿಯನ್ನು ದಾಟಿ ಚೋಳ, ಚೇರ, ಪಾಂಡ್ಯ, ಮಲಯಾಳ ದೇಶಗಳನ್ನೂ ಹೊಕ್ಕು ಅಲ್ಲಿ ಹಣ್ಣೆಲೆಗಳಂತಿದ್ದ ರಾಜಮನೆತನದವರನ್ನುರುಳಿಸಿ, ಆ ಪ್ರಾಂತ್ಯವೆಲ್ಲವನ್ನೂ ಮೂರು ನಾಡುಗಳಾಗಿ ವಿಭಾಗಿಸಿ, ಒಂದೊಂದು ಭಾಗವನ್ನೂ ಒಬ್ಬೊಬ್ಬ ಸಾಮಂತನ ವಶಕ್ಕೊಪ್ಪಿಸಿದನು.

**ಮಹಮ್ಮದೀಯರೊಂದಿಗೆ ಮೈತ್ರಿ** :—ಬಹಮನೀರಾಜ್ಯನಾಶಾನಂತರ ಐದು ಮಹಮ್ಮದೀಯ ರಾಜ್ಯಗಳಾದುವಷ್ಟೆ. ಅವುಗಳಲ್ಲಿ ಬಿಜಾಪುರ ರಾಜ್ಯವು ಪ್ರಬಲಕ್ಕೆ ಬಂತು. ಆ ರಾಜ್ಯದ ಎರಡನೆಯ ಸುಲ್ತಾನನಾದ ಇಸ್ಮೇಲ್ ಆದಿಲ್‌ಷಹನು ಕೃಷ್ಣದೇವರಾಯನನ್ನು ಮಟ್ಟಹಾಕಬೇಕೆಂದು ಪ್ರಯತ್ನಿಸಿದನು. ಕೃಷ್ಣದೇವರಾಯನೂ ತನ್ನ ಕೈಸವಿಯನ್ನು ಇಸ್ಮೇಲನಿಗೆ ತೋರಿಸಲು ಬಯಸಿದನು. ಕ್ರಿ. ಶ. ಸು. ೧೫೨೦ ರಲ್ಲಿ ಉಭಯಪಕ್ಷದವರಿಗೂ ರಾಯಚೂರು ಬಳಿ ಘೋರಯುದ್ಧವಾಯಿತು. ಕರ್ಣಾಟಕ ಜಯಲಕ್ಷ್ಮಿಯ ಪೂರ್ಣಾನುಗ್ರಹವಿದ್ದ ಕೃಷ್ಣದೇವರಾಯನು ಮಹಮ್ಮದೀಯರನ್ನು ಸಂಪೂರ್ಣವಾಗಿ ಸೋಲಿಸಿದನು. ಆದರೂ ಅವರೊಂದಿಗೆ ವೈರವನ್ನು ಬೆಳಸದೆ ಬಿಜಾಪುರ ವಿಜಯನಗರಗಳಿಗೆ ಎಂದಿಗೂ ಪರಸ್ಪರ ವೈಷಮ್ಯಗಳುಂಟಾಗದೆ ಇರಲು ತಕ್ಕ ಸಂಧಿಯನ್ನು ಮಾಡಿಕೊಂಡನು. ಈ ಮೈತ್ರಿಯು ಕಡೆಯವರೆಗೂ ನಡೆದು ಬಂತು.

ಕೃಷ್ಣದೇವರಾಯನು ಸಂಧಿವಿಗ್ರಹ ಚತುರನಾಗದೆ, ರಾಯಚೂರು ವಿಜಯದಿಂದ ತಲೆತಿರುಗಿದವನಾಗಿ, ಬಿಜಾಪೂರ ಸುಲ್ತಾನನೊಂದಿಗೆ ಬದ್ಧವೈರವನ್ನು ಬೆಳೆಸಿದ್ದರೆ ಐವರು ಸುಲ್ತಾನರೂ ಕೂಡಲೇ ಒಂದಾಗುತ್ತಿದ್ದರು. ೪೫ ವರ್ಷಗಳ ಅನಂತರ ನಡೆಯಲಿದ್ದ ತಾಳೀಕೋಟೆಯ ಯುದ್ಧವು ಈಗಲೇ ನಡೆದು ಹೋಗುತ್ತಲಿತ್ತು. ಇದರಿಂದಲೇ ಕೃಷ್ಣದೇವರಾಯನ ದೂರದರ್ಶಿತ್ವವೂ, ರಾಜನೀತಿ ನೈಪುಣ್ಯತೆಯೂ, ಸಾಮ್ರಾಜ್ಯ ರಚನಾರಹಸ್ಯ ಜ್ಞಾನವೂ ಹೊರಬೀಳುತ್ತದೆ.

**ಪೂರ್ವದಿಗ್ಯಾತ್ರೆ** :—ಸಾಮ್ರಾಜ್ಯ ವಿಸ್ತಾರ ಕಾರ್ಯಧುರೀಣನೂ, ಅಸಹಾಯಶೂರನೂ ಆದ ಕೃಷ್ಣದೇವರಾಯನು ಕೃಷ್ಣಾ ಗೋದಾವರೀ ನದಿಗಳ ಮಧ್ಯದೇಶವಾದ ವೆಂಗೀ, ರಾಜಮಹೇಂದ್ರದಿಂದ ಕಟಕಪುರಿಯವರೆಗಿನ ಕಳಿಂಗ, ಈ ಪೂರ್ವದೇಶವನ್ನು ಸಾಧಿಸಲು ದಂಡೆಯಾತ್ರೆ ಹೊರಟನು. ಮೊಟ್ಟಮೊದಲು ಉದಯಗಿರಿಯನ್ನು ಮುತ್ತಿ ಪ್ರಹರೇಶ್ವರ ಮಹಾಪಾತ್ರನನ್ನು ಜಯಿಸಿದನು ; ಕೊಂಡವೀಡು, ವಿನುಕೊಂಡ, ಬೆಲ್ಲಂಕೊಂಡ, ನಾಗಾರ್ಜುನಕೊಂಡ, ಅದ್ದಂಕಿ ಮೊದಲಾದನೇಕ ದುರ್ಗಗಳನ್ನು ಸ್ವಾಧೀನಪಡಿಸಿಕೊಂಡು ವೀರಭದ್ರ ಗಜಪತಿ, ಕಸವಾಪಾತ್ರ ಮೊದಲಾದವರಿಗೆ ಅಭಯಹಸ್ತವನ್ನು ಕೊಟ್ಟನು; ಕನಕಗಿರಿಯನ್ನು ಹಿಡಿದನು ; ಪೊಟ್ನೂರ ಬಳಿ ಜಯಸ್ತಂಭವನ್ನು ಹಾಕಿದನು ; ಮತ್ಸ್ಯವಂಶೀಯ ಒಡ್ಡಾದಿರಾಜರನ್ನು ಮುಟ್ಟಹಾಕಿದನು ; ಉತ್ಕಲದೇಶವನ್ನು ಸೇರಿ ಕಟಕಪುರಿಯನ್ನು ಸುಟ್ಟು ಬೂದಿಮಾಡಿದನು ; ಹೆಚ್ಚೇಕೆ ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯವು ಉತ್ತರದಲ್ಲಿ ಕೃಷ್ಣಾನದಿಯವರೆಗೂ, ಪೂರ್ವದಲ್ಲಿ ಕಟಕದವರೆಗೂ, ಪಶ್ಚಿಮದಲ್ಲಿ ಸಾಲ್ಸೆಟ್ಟಿನವರೆಗೂ, ದಕ್ಷಿಣದಲ್ಲಿ ರಾಮೇಶ್ವರದವರೆಗೂ ಹಬ್ಬಿತ್ತು. ಕೃಷ್ಣದೇವರಾಯನು ಪೂರ್ವದಿಗ್ಯಾತ್ರೆಯಲ್ಲಿ ಗಜಪತಿಗಳೊಂದಿಗೆ ಮಾತ್ರವೇ ಅಲ್ಲದೆ ತುರುಷ್ಕರೊಂದಿಗೂ ಯುದ್ಧಮಾಡಿದನು.

ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯವನ್ನು ನಿಜವಾಗಿ ಆಂಧ್ರಕರ್ಣಾಟಕ ಸಾಮ್ರಾಜ್ಯವೆಂದು ಕರೆಯ

ಬೇಕು. ಇವನು ಸುಮಾರು ೨೦ ವರ್ಷಗಳ ಕಾಲ ಮಹಾವೈಭವ ದಿಂದ ಚಕ್ರಾಧಿಪತ್ಯವನ್ನು ಮಾಡಿದನು. ಅವನ ಕಾಲದ ವಿಜಯ ನಗರಿಯ ಸೌಭಾಗ್ಯವನ್ನಾಗಲಿ, ಸಾಮ್ರಾಜ್ಯವ್ಯವಸ್ಥೆಯ ವಿಚಕ್ಷಣೆ ಯನ್ನಾಗಲಿ ವರ್ಣಿಸಲಿದು ಸಮಯವಲ್ಲ.

ಕೃಷ್ಣದೇವರಾಯನು ಸ್ವಯಂ ಕವಿ. ಸರಸಕವಿತಾವಿಲಾಸ ಲಾಲಸನಾದಿವನಾಸ್ಥಾನದಲ್ಲಿ ಸಂಸ್ಕೃತಾಂಧ್ರಕರ್ಣಾಟ ಕವಿಗಳನೇಕ ಮಂದಿಯಿದ್ದರು. ಅವರಲ್ಲಿ ಅಪ್ಪಯದೀಕ್ಷಿತ, ಪೆದ್ದನ, ತಿಮ್ಮಣ ಕವಿಗಳು ಅಗ್ರಗಣ್ಯರು. ಭುವನವಿಜಯಾಖ್ಯವೆಂಬಿವನಾಸ್ಥಾನ ದಲ್ಲಿ ಅಷ್ಟದಿಗ್ಗಜಗಳಿದ್ದರು (ಕವಿಗಳು). ಇವನಿಗೆ ಆಂಧ್ರಭೋಜ ನೆಂದು ಹೆಸರು. ಕೃಷ್ಣದೇವರಾಯನೇ ಸಂಸ್ಕೃತದಲ್ಲಿ ಜಾಂಬವ ತೀಕಲ್ಯಾಣ, ತೆಲುಗಿನಲ್ಲಿ ಆಮುಕ್ತಮಾಲ್ಯದ ಮೊದಲಾದ ಗ್ರಂಥಗ ಳನ್ನು ರಚಿಸಿರುವನು.

ಇವನು ಪೂರ್ವದಿಗ್ಯಾತ್ರಾಕಾಲದಲ್ಲಿ ಗಜಪತಿ ರಾಜಪುತ್ರಿ ಯೊಬ್ಬಳನ್ನು ಮದುವೆಯಾದನು. ದಕ್ಷಿಣ ದೇಶಕ್ಕೆ ದಂಡೆತ್ತಿ ಬಂದ ಕಾಲದಲ್ಲಿ ಶ್ರೀರಂಗಪಟ್ಟಣದಲ್ಲಿದ್ದ ಮೈಸೂರು ಮನೆತನದ ರಾಜ ಪುತ್ರಿಯೊಬ್ಬಳನ್ನು ಕೈಹಿಡಿದಂತೆ ಹಲವರು ಹೇಳುವರು. ಅಂತು ಇವನು ಅನೇಕ ಸಾಮಂತರೊಂದಿಗೆ ವಿವಾಹ ಬಾಂಧವ್ಯವನ್ನು ಕಲ್ಪಿ ಸಿಕೊಂಡನು. ಇವನಿಗೆ ತಿರುಮಲನೆಂಬೊಬ್ಬ ಮಗನೂ, ತಿರುಮ ಲಾಂಬಾ ಎಂಬೊಬ್ಬ ಮಗಳೂ ಇದ್ದರು. ತಿರುಮಲನು ಬಾಲ್ಯದಲ್ಲೇ ಕಾಲವಶನಾದನು. ತಿರುಮಲಾಂಬೆಯನ್ನು ಆರವೀಡು ವಂಶದ ರಾಮರಾಯನು ಮದುವೆಯಾದನು.

**ವಿಜಯನಗರವೂ ಅನಾಯಕವೂ** :—ಕ್ರಿ. ಶ. ಸು. ೧೫೨೯ ರಲ್ಲಿ ಸಾರ್ವಭೌಮ ಕೃಷ್ಣದೇವರಾಯನು ಕಾಲವಾದನು. ಅನಾಯಕತೆಗೆ ಆರಂಭವಾಯಿತು. ಅಳಿಯ ರಾಮರಾಯನು ಸರ್ವಾ ಧಿಕಾರಿಯಾಗಿದ್ದನಾದ ಕಾರಣ, ಕೃಷ್ಣದೇವರಾಯನ ಮಲತಾಯಿ ಓಬಾಂಬೆಯ ಕಿರಿಯ ಮಗ ರಂಗನ ಕೂಸಿಗೆ ಸದಾಶಿವನೆಂದು ಹೆಸ

ರಿಟ್ಟು, ಅವನನ್ನು ಸಿಂಹಾಸನದ ಮೇಲೆ ಕೂಡಿಸಿ, ತಾನೇ ರಾಜ್ಯಾಡಳಿತವನ್ನು ನಡೆಸುತ್ತ ಬಂದನು. ಆದರೆ ಓಬಾಂಬೆಯ ಹಿರಿಯ ಮಗನಾದ ಅಚ್ಯುತನು, ಸದಾಶಿವನನ್ನು ತಳ್ಳಿ ತಾನು ಪಟ್ಟಕ್ಕೆ ಬಂದು ೧೨ ವರ್ಷಗಳ ಕಾಲ ರಾಜ್ಯವಾಳಿದನು. ಅನಂತರ ಅಚ್ಯುತನ ಮಗ ವೆಂಕಟಾದ್ರಿಯನ್ನು ಕೊಂದು ಸದಾಶಿವನೇ ಅರಸಾದನು. ಆದರೆ ಹೆಸರಿಗೆ ಮಾತ್ರ ಅವನು ಅರಸನಾಗಿದ್ದನು. ಸಾಮ್ರಾಜ್ಯ ಸೂತ್ರಗಳೆಲ್ಲವೂ ಅಳಿಯ ರಾಮರಾಯನ ಕೈಲಿತ್ತು.

**ಸಾಮ್ರಾಜ್ಯವೂ ಐವರು ಸುಲ್ತಾನರೂ** :— ರಾಮರಾಯನು ಕೃಷ್ಣದೇವರಾಯನ ಕಾಲದಿಂದಲೂ ಸಾಮ್ರಾಜ್ಯವಿಸ್ತಾರ ಕಾರ್ಯದಲ್ಲಿ ಉದ್ಯುಕ್ತನಾಗಿದ್ದನು. ಒಳ್ಳೆಯ ಶಕ್ತಿವಂತ; ಯುಕ್ತಿಪರ. ತನ್ನಾಳ್ವಿಕೆಯಲ್ಲಿ ರಾಜ್ಯವಿಸ್ತಾರವನ್ನು ಮಾಡಿ, ಸಾಮಂತರೆಲ್ಲರಿಂದಲೂ ಕಪ್ಪಕಾಣಿಕೆಗಳನ್ನು ತೆಗೆದನು. ಅಷ್ಟೇ ಅಲ್ಲದೆ ಬಹಮನೀ ಸುಲ್ತಾನರ ದೇಶಗಳನ್ನೂ ಹೊಕ್ಕನು. ಆಗ ಸುಲ್ತಾನರು ಅಂತಃಕಲಹಗಳಿಂದ ಇವನನ್ನು ಎದುರಿಸಲು ಕೈಲಾಗದಿದ್ದರು. ರಾಮರಾಜನು ಐವರು ಸುಲ್ತಾನರಲ್ಲೇ ಕಲಹವನ್ನು ತಂದು ಹಾಕಿದನು. ಒಮ್ಮೆ ಬಿಜಾಪುರದ ಸುಲ್ತಾನನಿಗೆ ತಾನೇ ಸಹಾಯಮಾಡಿ ಅಹಮನ್ನಗರದ ಸುಲ್ತಾನನನ್ನು ಸೋಲಿಸಿದನು. ದಕ್ಷಿಣ ದೇಶದಲ್ಲೆಲ್ಲ ಇವನನ್ನು ಎದುರಿಸುವವರೆ ಇಲ್ಲವಾಯಿತು.

ಈ ಬಗೆಯ ಏಕಚ್ಛತ್ರಾಧಿಪತ್ಯವನ್ನು ಕಂಡು ಮಹಮ್ಮದೀಯರು ಎಷ್ಟುಕಾಲ ಸುಮ್ಮನಿರಲಾದೀತು. ರಾಮರಾಯನು ಕೃಷ್ಣರಾಯನಂತೆ ದೂರದರ್ಶಿಯಲ್ಲವಾದ ಕಾರಣ ಅಹಂಕಾರ ಮತ್ತನಾಗಿ ಮಹಮ್ಮದೀಯರೆಲ್ಲರ ಹಗೆತನಕ್ಕೆ ಇಡಾದನು.

**ತಾಳೀಕೋಟೆ** :—ಕ್ರಿ. ಶ. ಸ. ೧೫೬೪ ರಲ್ಲಿ ಬಹಮನಿ ಸುಲ್ತಾನರೆಲ್ಲರೂ ಒಂದಾಗಿ ಹಿಂದೂ ಸಾಮ್ರಾಜ್ಯವನ್ನು ಧ್ವಂಸಮಾಡಲು ನಿಶ್ಚಯಿಸಿದರು; ಸರ್ವಭಕ್ಷಕನಾದ ರಾಮರಾಜನನ್ನು ಕೊಲ್ಲಲು ಮನಸಮಾಡಿದರು. ಮೊದಲಿನಿಂದಲೂ ಸ್ನೇಹದಿಂದಿದ್ದ

ಬಿಜಾಪುರ ಸುಲ್ತಾನರೂ ಈ ಸಂಧಿಗೊಳಗಾದರು. ಐವರು ಸುಲ್ತಾನರ ಸೈನ್ಯವೂ ಒಂದಾಗಿ ವಿಜಯನಗರ ಸಾಮ್ರಾಜ್ಯದ ಮೇಲೆ ಧಾಳಿ ಹೊರಟಿತು.

ಅಧಿಕಾರ ಮತ್ತನಾದ ರಾಮರಾಜನು ಮಹಮದೀಯರ ರಣಸಿದ್ಧತೆಯ ಕಡೆಗೆ ಗಮನ ಕೊಡಲಿಲ್ಲ. ಐವರಲ್ಲಿ ಪರಸ್ಪರ ಕಲಹಗಳಿರುವವರೆಗೆ ಮಾತ್ರ ತನ್ನ ಪದವಿಗೆ ಚ್ಯುತಿಯಿಲ್ಲ; ಅವರೊಂದಾದರೆ ಸಾಮ್ರಾಜ್ಯ ಸುಖಕ್ಕೆ ಸಂಚಕಾರಬರುವುದರಲ್ಲಿ ಸಂದೇಹವಿಲ್ಲೆಂಬುದನ್ನು ಲೆಕ್ಕಿಸಲಿಲ್ಲ. ಮಹಮ್ಮದೀಯರು ಸೈನ್ಯಸಮೇತರಾಗಿ ಹೊರಟರೆಂಬ ಸುದ್ದಿಯನ್ನು ಕೇಳುತ್ತಲೇ ರಾಮರಾಜನು ತನ್ನ ಸೋದರರಾದ ತಿರುಮಲರಾಯ, ವೆಂಕಟರಾಯರನ್ನು ಸೈನ್ಯದೊಂದಿಗೆ, ಮಹಮ್ಮದೀಯರ ಶೀಘ್ರಾಗಮನವನ್ನು ಅಡ್ಡಿಮಾಡಲು ಕಳುಹಿಸಿದನು. ಕೂಡಲೇ ವಯೋವೃದ್ಧನಾದರೂ ತಾನೂ ಸೈನ್ಯ ಸಮೇತನಾಗಿ ಮಹಮ್ಮದೀಯರನ್ನೆದುರಿಸಲು ಹೊರಟನು. ಬಿಜಾಪುರದ ಆದಿಲ್‌ಷಹ, ಬಿದರಿನ ಬರೀದ್‌ಷಹ, ಗೋಲಕೊಂಡೆಯ ಕುತುಬ್‌ಷಹ, ಅಹಮನ್ನಗರದ ನಿಜಾಂಷಹರೇ ಸ್ವಯಂ ತಮ್ಮತಮ್ಮ ಸೈನ್ಯಗಳ ನಾಯಕತ್ವವನ್ನು ವಹಿಸಿದ್ದರು. (ಕ್ರಿ. ಶ. ೧೫೬೫) ತಾಳೀಕೋಟೆಯ ಬಳಿ ಉಭಯ ಸೈನ್ಯಗಳೂ ಸಂಧಿಸಿದುವು. ಘೋರ ಸಂಗ್ರಾಮವಾಯಿತು. ಯುದ್ಧದ ಜಯಾಪಜಯಗಳನ್ನು ಊಹಿಸುವುದು ಕಷ್ಟವಾಗಿತ್ತು. ಆಗ ರಾಮರಾಜನಿದ್ದ ಪಲ್ಲಕ್ಕಿಯಮೇಲೆ ಮದಿಸಿದ ಆನೆಯೊಂದು ನುಗ್ಗಿತು. ರಾಮರಾಜನು ಕೆಳಕ್ಕೆಬಿದ್ದನು. ವಿಜಯನಗರದ ಸೈನ್ಯದಲ್ಲಿ ಗಲಿಬಿಲಿಯುಂಟಾಯಿತು. ಕೂಡಲೇ ಮಹಮ್ಮದೀಯರು ರಾಮರಾಜನನ್ನು ಕೈಸರೆಹಿಡಿದು, ಅವನ ತಲೆಯನ್ನು ಕತ್ತರಿಸಿ, ಭಲ್ಲೆಕ್ಕೆ ಚುಚ್ಚಿ ಪ್ರದರ್ಶಿಸಿದರು. ಸರ್ವನಾಶವಾಯಿತೆಂದರಿತು, ಭಯಭ್ರಾಂತರಾಗಿ, ವಿಜಯನಗರಸೈನಿಕರು ರಣರಂಗವನ್ನು ಬಿಟ್ಟು ಓಡಿದರು. ಮಹಮ್ಮದೀಯರು ಜಯಶಾಲಿಗಳಾದರು. ಕರ್ಣಾಟಕ ಸಾಮ್ರಾಜ್ಯವು ಚೇತರಿಸಿಕೊಳ್ಳಲಾರದಂತಹ ಅಧಃಪಾತಳಕ್ಕೆ ಬಿತ್ತು. ಮಹಮ್ಮದೀಯರು ಕೂಡಲೇ ವಿಜಯನಗ

ರಿಯನ್ನು ಹೊಕ್ಕು ಇದ್ದುಬದ್ದುದೆಲ್ಲವನ್ನೂ ದೋಚಿಕೊಂಡು ಹೋದರು. ವಿಜಯನಗರವು ಹಾಳಾಯಿತು.

## ಕರ್ಣಾಟಕ ವಂಶವೂ ಸಾಮ್ರಾಜ್ಯ ವಿನಾಶವೂ

ವಿಜಯನಗರ ನಾಶನಾನಂತರ ಕರ್ಣಾಟಕ ಸಾಮ್ರಾಜ್ಯ ಲಕ್ಷ್ಮಣವು ಮಾಯವಾಯಿತು. ಸಾಮಂತರನೇಕರು ಸ್ವತಂತ್ರರಾಗಲು ಸಿದ್ಧರಾಗಿದ್ದರು. ರಾಜವಂಶೀಯರಂತೂ ಸದಾ ಮುಹಮ್ಮದೀಯರ ಭಯದಲ್ಲೇ ಇದ್ದರು. ಹೆಸರಿಗೆ ಸದಾಶಿವರಾಯನು ಕೆಲಕಾಲ ರಾಜನಾಗಿದ್ದನಾದರೂ ರಾಮರಾಜನ ಹಿರಿಯ ತಮ್ಮನಾದ ತಿರುಮಲರಾಯನು ಪೆನುಗೊಂಡೆಯಲ್ಲೂ, ಕಿರಿಯ ತಮ್ಮನಾದ ವೆಂಕಟಾದ್ರಿಯು ಚಂದ್ರಗಿರಿಯಲ್ಲೂ ಅಧಿಕಾರ ಮಾಡುತ್ತಿದ್ದರು. ಕ್ರಿ. ಶ. ೧೫೭೪ ಸುಮಾರಿನಲ್ಲಿ ತಿರುಮಲನ ಹಿರಿಯ ಮಗನಾದ ಮೊದಲನೆಯ ಶ್ರೀರಂಗರಾಯನು ಪಟ್ಟಕ್ಕೆ ಬಂದನು. ಇವನ ಕಾಲದಲ್ಲಿ ಮುಹಮ್ಮದೀಯರು ಪೆನುಗೊಂಡೆಯನ್ನು ಮುತ್ತಿದರಾದರೂ ಬಹು ಬೇಗ ಓಡಿಸಲ್ಪಟ್ಟವರಾದರು. ಇವನ ತರುವಾಯ ತಮ್ಮನಾದ ಮೊದಲನೆಯ ವೆಂಕಟಪತಿರಾಯನು ಅಧಿಕಾರವನ್ನು ವಹಿಸಿ, ರಾಜಧಾನಿಯನ್ನು ಚಂದ್ರಗಿರಿಗೆ ಬದಲಾಯಿಸಿದನು. ಇವನ ಕಾಲದಲ್ಲಿ ಸಾಮ್ರಾಜ್ಯವೆಲ್ಲ ಸಂಪೂರ್ಣವಾಗಿ ಸಡಲಿತು. ದಕ್ಷಿಣದಲ್ಲಿ ಮೈಸೂರಿನ ಒಡೆಯರೂ, ಪಶ್ಚಿಮದಲ್ಲಿ ಕೆಳದಿಯ ನಾಯಕರೂ ಸ್ವತಂತ್ರರಾದರು. ತಮಿಳು ದೇಶದಲ್ಲಿ ಮಧುರೆಯ ನಾಯಕರು ಸಾಮ್ರಾಜ್ಯ ಶೃಂಖಲಗಳಿಂದ ಮುಕ್ತರಾದರು. ಇಮ್ಮಡಿ ವೆಂಕಟಪತಿರಾಯ, ಇಮ್ಮಡಿ ಶ್ರೀರಂಗದೇವರಾಯರ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯವು ನಾಮಾವಶೇಷವಾಯಿತು. ಶ್ರೀರಂಗರಾಯನು ಕ್ರಿ. ಶ. ೧೬೪೦ ಸುಮಾರಿನಲ್ಲಿ ಮದರಾಸನ್ನು ಇಂಗ್ಲೀಷರಿಗೆ ಕೊಟ್ಟನು. ೧೬೪೬ ಸುಮಾರಿನಲ್ಲಿ ಗೋಲಕೊಂಡೆಯ ಸುಲ್ತಾನನು ಚಂದ್ರಗಿರಿಯನ್ನು ಆಕ್ರಮಿಸಿ ಶ್ರೀರಂಗರಾಯನನ್ನು ಓಡಿಸಿದನು. ಶ್ರೀರಂಗನು ನಿಲ್ಲಲು ನೆಲೆಯಿಲ್ಲದೆ ತನ್ನ ಸಾಮಂತನಾದ ಕೆಳದಿಯ ನಾಯಕನ ಬಳಿಗೆ ಬಂದನು. ಅವನ

ಸಹಾಯದಿಂದ ಶ್ರೀರಂಗಪಟ್ಟಣವನ್ನು ಸ್ವಾಧೀನಪಡಿಸಿಕೊಳ್ಳಲು ಪ್ರಯತ್ನಿಸಿದನಾದರೂ ಅದು ಸಾಧ್ಯವಾಗಲಿಲ್ಲ. ಹಾಗೂ ಹೀಗೂ ಜೀವಿಸುತ್ತಿದ್ದು ಇವನೂ ಕಾಲವಾದನು. ಇಂದಿಗೂ ಇವನ ವಂಶೀಯರು ಆನೆಗೊಂದಿಯಲ್ಲಿ ಇರುವರು.

---

## ೨ ಕರ್ಣಾಟಕ ರಾಜ್ಯಗಳು

ವಿಜಯನಗರ ಸಾಮ್ರಾಜ್ಯ ನಾಶನಾನಂತರ ದಕ್ಷಿಣ ದೇಶದಲ್ಲಿ ಅನೇಕ ಸಣ್ಣ ಪುಟ್ಟ ರಾಜ್ಯಗಳು ತಲೆಹಾಕಿದುವೆಂದು ತಿಳಿದೆವು. ಅವು ಗಳಲ್ಲಿ ಕರ್ಣಾಟಕ ದೇಶದಲ್ಲಿನ ರಾಜ್ಯಗಳ ಪೂರ್ವೋತ್ತರ ಪರಿಚಯವು ನಮಗೆ ಅತ್ಯವಶ್ಯಕ.

### (೧) ಕೆಳದಿಯ ನಾಯಕರು

ಈ ಮನೆತನದವರಿಗೆ ಇಕ್ಕೇರಿಯ ನಾಯಕರು ಅಥವಾ ಬಿದನೂರು ನಾಯಕರು ಎಂಬದಾಗಿಯೂ ಹೆಸರುಂಟು. ಆರಗ, ಚಂದ್ರಗುತ್ತಿ, ಶಿವಮುಗ್ಗಿಯ ಜಿಲ್ಲೆ, (ದಕ್ಷಿಣಕನ್ನಡ) ಮಂಗಳೂರು ಬಾರಕೂರು ರಾಜ್ಯಗಳು ಈ ನಾಯಕರ ಪ್ರಭುತ್ವದೊಳಗಡಗಿದ್ದುವು.

**ರಾಜ್ಯಸ್ಥಾಪನೆ** :—ವಿಜಯನಗರದ ಸದಾಶಿವರಾಯನ ಕಾಲದಲ್ಲಿ ಈ ವಂಶದ ಮೂಲಪುರುಷನಾದ ಸದಾಶಿವನಾಯಕನು ಘಟ್ಟದಸೀಮೆಯಲ್ಲಿ ಸಾಮಂತನಾಗಿ ನೇಮಿಸಲ್ಪಟ್ಟನು. ಇವನ ತರುವಾಯ ಚಿಕ್ಕ ಸಂಕಣ್ಣನಾಯಕ ದೊಡ್ಡ ಸಂಕಣ್ಣನಾಯಕರು ಪ್ರಭುತ್ವಮಾಡಿದರು. ತಾಳೀಕೋಟೆಯ ಯುದ್ಧವಾದನಂತರ ವೆಂಕಟಪ್ಪನಾಯಕನು ಸ್ವತಂತ್ರನಾದನು. ರಾಜಧಾನಿಯನ್ನು ಕೆಳದಿಯಿಂದ ಇಕ್ಕೇರಿಗೆ ತಂದನು. ಇವನು ಬಹುಶೂರನು. ಪಶ್ಚಿಮಕ್ಕೆ ಹೊನ್ನಾವರದವರೆಗೂ, ಉತ್ತರಕ್ಕೆ ಮಾಸೂರಿನವರೆಗೂ ಪೂರ್ವಕ್ಕೆ ಕವಲೆದುರ್ಗದವರೆಗೂ, ದಕ್ಷಿಣಕ್ಕೆ ಮಲಬಾರಿನವರೆಗೂ ರಾಜ್ಯವನ್ನು ವಿಸ್ತರಿಸಿದನು. ರಾಜ್ಯಾಡಳಿತದಲ್ಲಿ ಹೆಚ್ಚು ಆಸಕ್ತಿಯನ್ನು

ತೋರಿಸಿದನು. ಶೃಂಗೇರೀ ಮಠವನ್ನು ಪುನರುದ್ಧಾರ ಮಾಡಿದನು. ಗೋವೆಯ ಪೋರ್ಚುಗೀಸರು, ಇಂಗ್ಲೀಷರಿಗೂ, ಡಚ್ಚರಿಗೂ ವ್ಯಾಪಾರಕ್ಕೆ ಪಶ್ಚಿಮ ತೀರದಲ್ಲಿ ಅವಕಾಶ ಕೊಡಬಾರದೆಂದು ನಿಶ್ಚಯಿಸಿ, ವೆಂಕಟಪ್ಪನಾಯಕನೊಂದಿಗೆ ರಾಯಭಾರವನ್ನು ನಡೆಸಿದರು.

**ನಾಯಕರೂ ಬಿಜಾಪುರದ ಸುಲ್ತಾನರೂ**:—ಪ್ರಬಲನಾಗುತ್ತಿದ್ದ ವೆಂಕಟಪ್ಪನಾಯಕನನ್ನು ಮಟ್ಟಹಾಕಲು ಬಿಜಾಪುರದ ಸುಲ್ತಾನರು ರಣದುಲ್ಲಾಖಾನನನ್ನು ಕಳುಹಿಸಿದರು. ಆದರೆ ರಣದುಲ್ಲಾಖಾನನು ಸೋತು ಹಿಂದಿರುಗಿದನು. ವೆಂಕಟಪ್ಪನಾಯಕನ ತರುವಾಯ ಪಟ್ಟಕ್ಕೆ ಬಂದ ವೀರಭದ್ರಪ್ಪನಾಯಕನ ಕಾಲದಲ್ಲಿ ಬಿಜಾಪುರದ ಪಾದುಷಹರು ಮತ್ತೆ ನಾಯಕರಾಜ್ಯವನ್ನು ಪ್ರವೇಶಿಸಿ, ದಾಂಧಲೆಯನ್ನು ಮಾಡಿದರಾದರೂ, ದಂಡನಾಯಕನಾದ ಶಿವಪ್ಪನಾಯಕನ ಸಹಾಯದಿಂದ ವೀರಭದ್ರನು ಮಹಮ್ಮದೀಯರನ್ನು ಹೊಡೆದೋಡಿಸಿದನು. ಇವನು ವಿಜಯನಗರದ ಇಮ್ಮಡಿ ವೆಂಕಟಪತಿರಾಯನಿಗೆ ಬಲಗೈಯಾಗಿದ್ದನು. ಇವನ ಕಾಲದಲ್ಲೇ ರಾಜಧಾನಿಯು ಇಕ್ಕೇರಿಯಿಂದ ಬಿದನೂರಿಗೆ ಬಂದುದು.

**ಶಿವಪ್ಪನಾಯಕ**:—ಕ್ರಿ. ಶ. ೧೬೪೫ ಸುಮಾರಿನಲ್ಲಿ ಪಟ್ಟಕ್ಕೆ ಬಂದ ಶಿವಪ್ಪನಾಯಕನೇ ಈ ಮನೆತನದಲ್ಲಿ ಪ್ರಖ್ಯಾತನಾದವನು. ವೀರಭದ್ರನ ಆಳ್ವಿಕೆಯಲ್ಲೇ ಇವನು ತುಳು, ಮಲೆಯಾಳ ಕೊಡಗು ರಾಜ್ಯಗಳನ್ನು ಸಾಧಿಸಿದನು. ಗದ್ದುಗೆಯನ್ನೇರಿದಮೇಲೆ ರಾಜ್ಯವನ್ನೂ ಇನ್ನೂ ವಿಸ್ತರಿಸಿದನು. ಇವನ ಕಾಲದ ಬಿದನೂರಿನ ಸಂಪತ್ತನ್ನು ವೈಖರಿಯನ್ನೂ ಹೇಳಲಾಗದು. ಅಪಾರವಾದ ಸೈನ್ಯವಿತ್ತು. ಸುಮಾರು ಮೂವತ್ತುಸಾವಿರ ಈಸಾಯಿಗಳೇ ಇವನ ಪ್ರಜೆಗಳಾಗಿದ್ದರು. ಇವನು ಏರ್ಪಡಿಸಿದ ರಾಜಾದಾಯ ವ್ಯವಸ್ಥೆಯು ಬಹಳ ಸಮರ್ಪಕವಾಗಿತ್ತು. ಅದಕ್ಕೆ ಶಿವಪ್ಪನಾಯಕನ ಶಿಸ್ತೆಂದು ಹೆಸರು. ಧರ್ಮಪರಾಯಣನಾದ ಶಿವಪ್ಪನಾಯಕನು ಶೃಂಗೇರಿ ಮಠಕ್ಕಿದ್ದ ಬಾಧೆಗಳನ್ನೆಲ್ಲ ಪರಿಹರಿಸಿ, ಅದಕ್ಕೆ ತಾನೂ ಅನೇಕ ದತ್ತಿಗಳನ್ನು ಬಿಟ್ಟನು.

ವಿಜಯನಗರದ ಇಮ್ಮಡಿ ಶ್ರೀರಂಗರಾಯನು ಶಿವಪ್ಪನಾಯಕನ ಮರೆಹೊಕ್ಕನು. ಅವನ ಪರವಾಗಿ ಶಿವಪ್ಪನು ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದನಾದರೂ ಅದರಿಂದೇನೂ ಫಲವಾಗಲಿಲ್ಲ.

**ಕೆಳದಿಯ ನಾಯಕರ ಕೊನೆಗಾಲ** :—ಶಿವಪ್ಪನಾಯಕನ ಅನಂತರ ಭದ್ರಪ್ಪನಾಯಕ, ಮೊದಲನೇ ಸೋಮಶೇಖರ ನಾಯಕ, ಬಸಪ್ಪ ನಾಯಕರು ಆಡಳಿತವನ್ನು ನಡೆಸಿದರೂ, ಪುಣೆಯ ಮರಾಠರು, ಬಿಜಾಪುರದ ಸುಲ್ತಾನರು, ಮೈಸೂರಿನ ಒಡೆಯರು ಇವರ ಮುಂದೆ ನಾಯಕರಾಜ್ಯವನ್ನು ಸ್ಥಿರವಾಗಿ ನಿಲ್ಲಿಸಲು ಅವರಿಂದಾಗಲಿಲ್ಲ. ಭದ್ರಪ್ಪನಾಯಕನ ಕಾಲದಲ್ಲಿ ಮುಹಮ್ಮದೀಯರು ಬಿದನೂರನ್ನೇ ಮುತ್ತಿದರು ; ಮರಾಟರು ರೇವುಪಟ್ಟಣಗಳೆಲ್ಲವನ್ನೂ ಕೊಳ್ಳೆಹೊಡೆದರು. ಸೋಮಶೇಖರನು ನೀತಿಬಾಹಿರನಾದಕಾರಣ ರಾಜ್ಯವನಾಯಕವಾಯಿತು. ಕಡೆಗೆ ಅವನಿಗೆ ದುರ್ಮರಣವೂ ಉಂಟಾಯಿತು. ಅನಂತರ ಅವನ ಅರಸಿಯಾದ ಚನ್ನಮ್ಮಾಜಿಯು ಅಡಳಿತವನ್ನು ಕೈಕೊಂಡು ಮೈಸೂರೊಡೆಯನಾದ ಚಿಕ್ಕದೇವರಾಜನೊಂದಿಗೆ ಮೈತ್ರಿಯನ್ನು ಬೆಳೆಸಿ, ಸಂಧಿಯನ್ನು ಮಾಡಿಕೊಂಡಳು. ಅವಳ ತರುವಾಯ ದತ್ತುಮಗನಾದ ಬಸಪ್ಪನಾಯಕನು ವಿಚಕ್ಷಣೆಯಿಂದ ಸುಮಾರು ೧೫ ವರ್ಷಗಳಕಾಲವಾಳಿ ಕಾಲವಾದನು.

ಬಸಪ್ಪನಾಯಕನ ತರುವಾಯ ನಾಯಕರ ಇತಿಹಾಸವು ಮುಗಿಯಿತು. ರಾಜ್ಯವೆಲ್ಲವೂ ಮೈಸೂರೊಡೆಯರ ವಶವಾಯಿತು. ವಿಜಯನಗರದ ಅನಂತರ ಪ್ರಾಮುಖ್ಯತೆಗೆ ಬಂದ ಈ ಕೆಳದಿರಾಜ್ಯವು ೧೦೦-೧೫೦ ವರ್ಷಗಳಕಾಲ ಹೆಣಗಾಡಿ ಕಡೆಗೆ ಮೈಸೂರು ಒಡೆಯರ ರಾಜ್ಯದಲ್ಲಿ ಸೇರಿಹೋಯಿತು.

## (೨) ಮೈಸೂರಿನ ಒಡೆಯರು

**ಶ್ರೀರಂಗಪಟ್ಟಣವೂ ವಿಜಯನಗರದ ರಾಜಪ್ರತಿನಿಧಿಗಳೂ** :—ಕೃಷ್ಣದೇವರಾಯನ ಕಾಲದಿಂದಲೂ ಶ್ರೀರಂಗಪಟ್ಟಕ್ಕೆ

ಪ್ರಾಮುಖ್ಯತೆಯುಂಟಾಯಿತೆಂದೂ, ಅಲ್ಲಿ ಒಬ್ಬ ರಾಜಪ್ರತಿನಿಧಿಯಿದ್ದ ನೆಂದೂ ಹಿಂದೆಯೇ ಓದಿದ್ದಾಯಿತು. ತಾಳೀಕೋಟೆಯ ಅನಂತರ ಸಾಮ್ರಾಜ್ಯವಿಭಾಗವಾಯಿತಷ್ಟೆ. ಆಗ ಶ್ರೀರಂಗರಾಯನ ತಮ್ಮ ನಾದ ರಾಮರಾಯನು ಕರ್ಣಾಟಕ ದೇಶಕ್ಕೆ ಒಡೆಯನಾಗಿ ಶ್ರೀರಂಗ ಪಟ್ಟಣದಲ್ಲಿ ಆಳುತ್ತಿದ್ದನು. ಇವನು ಕಾಲವಾದಾಗ ಇವನ ಮಗ ನಾದ ತಿರುಮಲರಾಯನು ಕೇವಲ ಬಾಲಕನಾಗಿದ್ದನು. ಇದೇ ಸಮಯವೆಂದು ತಿಳಿದು ಶ್ರೀರಂಗರಾಯನ ತರುವಾಯ ಪಟ್ಟಕ್ಕೆ ಬಂದ ವೆಂಕಟರಾಯನು ತಿರುಮಲನನ್ನು ಓಡಿಸಿ ಕರ್ಣಾಟಕರಾಜ್ಯ ವೆಲ್ಲವನ್ನೂ ಅಪಹರಿಸಬೇಕೆಂದು ಯೋಚಿಸಿದನು. ಶ್ರೀರಂಗಪಟ್ಟದ ಸರ್ವಾಧಿಕಾರವು ತಿರುಮಲನ ದಂಡನಾಯಕನಾದ ರೇವಟಿ ವೆಂಕ ಟನ ಅಧೀನದಲ್ಲಿತ್ತು.

ಮೈಸೂರಿನ ಒಡೆಯರು ಪ್ರಬಲರಾಗುತ್ತಿದ್ದರು. ಈ ಕಾಲಕ್ಕೆ ಸರಿಯಾಗಿ ಶೂರನಾದ ರಾಜಒಡೆಯನು ಮೈಸೂರಿನ ಗದ್ದುಗೆಯ ನ್ನೇರಿದನು. ವೆಂಕಟಪತಿರಾಯನು ಶ್ರೀರಂಗಪಟ್ಟಣವನ್ನು ತಾನು ಅಪಹರಿಸುವ ಉದ್ದೇಶ್ಯದಿಂದ ರಾಜಒಡೆಯನೊಂದಿಗೆ ಸಂಧಿಯನ್ನು ಮಾಡಿಕೊಂಡು, ಅವನನ್ನು ಶ್ರೀರಂಗಪಟ್ಟಣದ ರಾಜಪ್ರತಿನಿಧಿಯ ನ್ನಾಗಿ ನೇಮಿಸಿದನು. ಮೈಸೂರು ರಾಜ್ಯವನ್ನು ಕಟ್ಟಲು ಕಂಕಣ ಬದ್ಧನಾಗಿದ್ದ ರಾಜಒಡೆಯನಿಗೆ ಇದಕ್ಕಿಂತಲೂ ಸಮಯವೆ. ಕೂಡ ಲೇ ಶ್ರೀರಂಗಪಟ್ಟಣವನ್ನು ಮುತ್ತಿ ಕ್ರಿ. ಶ. ೧೬೧೦ ರಲ್ಲಿ ಅದನ್ನು ಸ್ವಾಧೀನಪಡಿಸಿಕೊಂಡನು. ಆವಿನಿಂದ ಮೈಸೂರೊಡೆಯರು ಬಹಳ ಪ್ರಬಲರಾದರು. ಈ ಒಡೆಯರ ಪೂರ್ವೋತ್ತರವನ್ನು ವಿಚಾ ರಿಸುವುದೇ ನಮ್ಮ ಪ್ರಥಮ ಕರ್ತವ್ಯ.

**ಒಡೆಯರ ಪೂರ್ವೋತ್ತರ** :—ಈ ಒಡೆಯರ ವಂಶಕ್ಕೆ ಯದುರಾಯನೆಂಬುವನೇ ಮೂಲ ಪುರುಷನು. ಇವನು ಕ್ರಿ. ಶ. ೧೩೯೯ ಸುಮಾರಿನಲ್ಲಿ ತಮ್ಮನಾದ ಕೃಷ್ಣನೊಂದಿಗೆ ಉತ್ತರ ದೇಶ ದಿಂದ ಮೈಸೂರು ಪ್ರಾಂತಕ್ಕೆ ಬಂದು ರಾಜ್ಯಸ್ಥಾಪನೆಯನ್ನು ಮಾಡಿ

ದನೆಂದೂ, ಇವನದು ಯಾದವವಂಶವೆಂದೂ ಒಂದು ಐತಿಹ್ಯ ವುಂಟು. ಬಹುತರ ಹೊಯ್ಸಳ ಸಾಮ್ರಾಜ್ಯದನಂತರ ಉಂಟಾದ ರಾಜಕೀಯ ಉತ್ಪಾತದ ಕಾಲದಲ್ಲಿ, ಆ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಈ ಯದುರಾಯನು ದಕ್ಷಿಣಕ್ಕೆ ಬಂದು, ಅನುಕೂಲ ಸಮಯವೊದಗಲು ಮೈಸೂರಿಗೊಡೆಯನಾದಂತೆ ತೋರಿಬರುತ್ತದೆ.

ಹದಿನಾಲ್ಕನೆಯ ಶತಮಾನಾಂತ್ಯದಲ್ಲಿ ಹದಿನಾಡಿನಲ್ಲಿ ಚಾಮರಾಜನೆಂಬುವನೊಬ್ಬನು ಆಳುತ್ತಿದ್ದು, ಗಂಡುಮಕ್ಕಳಿಲ್ಲದೆಹೆಂಡತಿಯನ್ನೂ ಮಗಳನ್ನೂ ಬಿಟ್ಟು ಕಾಲವಾದನು. ರಾಜ್ಯಾಡಳಿತವು ದಳವಾಯಿ ಮಾರನಾಯಕನ ಕೈಗೆ ಬಿತ್ತು. ಮಾರನಾಯಕನು ಚಾಮರಾಜನ ಮಗಳನ್ನು ಮದುವೆಯಾಗಿ ಹದಿನಾಡಿಗೆ ತಾನೇ ಅರಸಾಗಲು ಯತ್ನಿಸಿದನು. ಇದು ರಾಣಿಗೂ, ರಾಜಪುತ್ರಿಗೂ ಸರಿಬೀಳಲಿಲ್ಲ. ಮಾರನಾಯಕನ ನಡತೆಯು ಪ್ರಜೆಗಳಿಗೂ ಸರಿತೋರಲಿಲ್ಲ. ಪ್ರಜೆಗಳೂ ರಾಣಿವಾಸದವರೂ ಸೇರಿ ಮಾರನಾಯಕನನ್ನು ಕೊಲ್ಲಲು ಪ್ರಯತ್ನಿಸಿದರು. ಆ ಕಾಲಕ್ಕೆ ಸರಿಯಾಗಿ ಯದುರಾಯನು ಅಲ್ಲಿಗೆ ಬಂದನು. ಇವನಾಗಮನವು ರಾಣೀವಾಸದವರಿಗೂ ಪ್ರಜೆಗಳಿಗೂ ಧೈರ್ಯವನ್ನುಹೆಚ್ಚಿಸಿತು. ಕೂಡಲೇ ಯದುರಾಯನು ಉಪಾಯದಿಂದ ಮಾರನಾಯಕನನ್ನು ಕೊಂದು, ರಾಜಪುತ್ರಿಯನ್ನು ಮದುವೆಯಾಗಿ, ಹದಿನಾಡಿಗೆ ಒಡೆಯನಾದನು. ಇವನು ೨೩ ವರ್ಷಗಳಿದ್ದು ಕಾಲವಾದನು. ಇವನ ಅನಂತರ ಹಿರೇಬೆಟ್ಟದ ಚಾಮರಾಜ, ತಿಮ್ಮರಾಜ, ಹಿರೇಚಾಮರಾಜರೆಂಬವರಾಳಿದರು. ಕ್ರಿ. ಶ. ೧೫೧೩ ರಲ್ಲಿ ಬೆಟ್ಟದ ಚಾಮರಾಜನು ರಾಜಧಾನಿಯನ್ನು ಹದಿನಾಡಿನಿಂದ ಮೈಸೂರಿಗೆ ಬದಲಾಯಿಸಿ, ಹೊಸದಾಗಿ ಕೋಟೆಯನ್ನು ಕಟ್ಟಿಸಿದನು. ಇದಕ್ಕೆ ಮೊದಲು ಮೈಸೂರಿಗೆ ಪುರಿಗೆರೆ ಯೆಂಬ ಹೆಸರಿತ್ತು. ಬೆಟ್ಟದ ಚಾಮರಾಜನು ತನ್ನ ಬಾಹು ಬಲದಿಂದ 'ಬಿರುದಂತೆಂಬರ ಗಂಡ' ನೆಂಬ ಹೆಸರನ್ನು ಪಡೆದನು. ಇವನು ಕ್ರಿ. ಶ. ೧೫೫೦ ರಲ್ಲಿ ಕಾಲವಾಗಲು ಹಿರಿಯ ಮಗನಾದ ತಿಮ್ಮರಾಜನು ಅಧಿಕಾರವನ್ನು ವಹಿಸಿದನು. ಅನಂತರ ತಿಮ್ಮರಾಜನ ತಮ್ಮನಾದ ಬೋಳ ಚಾಮರಾಜನು

ಕ್ರಿ. ಶ. ೧೫೭೬ ರಲ್ಲಿ ಸಿಂಹಾಸನವನ್ನೇರಿ ೨೪ ವರ್ಷಗಳ ಕಾಲ ರಾಜ್ಯ ವಾಳಿದನು. ಇವನೇ ಶ್ರೀರಂಗಪಟ್ಟಣದ ವಿಜಯನಗರದ ರಾಜ ಪ್ರತಿನಿಧಿಗೆ ಕಪ್ಪವನ್ನು ಒಪ್ಪಿಸದೆ ಹೋದವನು. ಇವನಿಗೆ ರಾಜ ಒಡೆಯ, ಬೆಟ್ಟದ ಚಾಮರಾಜ ಮತ್ತು ಮುಪ್ಪಿನ ದೇವರಾಜರೆಂದು ಮೂವರು ಮಕ್ಕಳಿದ್ದರು.

**ಮೈಸೂರು ರಾಜ್ಯಸ್ಥಾಪನೆ** :—ವಿಜಯನಗರದರಸರು ಕೈಲಾಗದವರಾದರು ; ಸಾಮಂತರು ಸ್ವಾರ್ಥಿಗಳಾದರು; ಮೊಗಲರ ಕಾಟದಿಂದಬಿಜಾಪುರ, ಗೋಲಕೊಂಡೆಯ ಸುಲ್ತಾನರಿಗೆ ಪುರಸತ್ತಿಲ್ಲವಾಯಿತು; ಈ ಸಮಯದಲ್ಲಿ ಮೈಸೂರಿನ ಒಡೆಯರು ರಾಜ್ಯವಿಸ್ತಾರ ಮಾಡಿ, ಸ್ವತಂತ್ರರಾಗಲು ಅವಕಾಶವಾಯಿತು. ಬೋಳ ಚಾಮರಾಜನ ಮಗನೇ ರಾಜಒಡೆಯನು ಇವನು ಹೇಗೆ ವಿಜಯನಗರದ ರಾಜ್ಯ ಪ್ರತಿನಿಧಿಯನ್ನು ಓಡಿಸಿ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡ ನೆಂಬುದನ್ನು ಮೊದಲೇ ತಿಳಿಸಿವ್ದಾಯಿತು. ನಿಜವಾಗಿಯೂ ಮೈಸೂರಿನ ಇತಿಹಾಸವು ಕ್ರಿ. ಶ. ೧೫೭೮ ರಲ್ಲಿ ಪಟ್ಟಕ್ಕೆಬಂದ ರಾಜಒಡೆಯನ ಕಾಲದಿಂದ ಮೊದಲಾಗುತ್ತದೆ. ಅಂದಿನಿಂದ ಮೈಸೂರಿಗೆ ಒಂದು ರಾಜ್ಯವೆಂದು ಕರೆಯುವುದು ಯೋಗ್ಯವಾಗಿ ಕಾಣಬರುತ್ತದೆ. ವೆಂಕಟಪತಿರಾಯನಿಗೂ ತಿರುಮಲರಾಯನಿಗೂ ಇದ್ದ ಮನಸ್ತಾಪದಲ್ಲಿ ರಾಜಒಡೆಯನು ಪ್ರಬಲನಾದನು. ಶ್ರೀರಂಗಪಟ್ಟಣವೂ, ಚನ್ನಪಟ್ಟಣವೂ ಇವನ ವಶವಾಯಿತು. ಅಲ್ಲದೆ ಕಳಲೆ, ಬಿಳುಗುಳ, ಬೆಳಕೆರೆ, ಹುಲ್ಲನಹಳ್ಳಿ, ಮೂಗೂರು ಪ್ರಭುಗಳೊಂದಿಗೆ ವಿವಾಹ ಬಾಂಧವವನ್ನು ಬೆಳೆಸಿದನು. ಇವನನ್ನು ಎದುರಿಸಿದ ಅಮ್ಮಚವಾಡಿ, ಕನ್ನಂಬಾಡಿ, ತಲಕಾಡು, ಕಾರುಗಹಳ್ಳಿ ಪ್ರಭುಗಳನ್ನು ಮಟ್ಟ ಹಾಕಿದನು. ಇವನ ರಾಜ್ಯಾಡಳಿತವು ಬಹಳ ಚನ್ನಾಗಿತ್ತು. ಮೈಸೂರು ಅರಮನೆಯಲ್ಲಿ ದಸರಾಮಹೋತ್ಸವವನ್ನು ವಿಜೃಂಭಣೆಯಿಂದ ನಡೆಸಲು ಮೊದಲಿಟ್ಟವನಿವನೆ.

ಜೀವಂತನಾಗಿರುವಾಗಲೇ ಇವನ ನಾಲ್ವರು ಮಕ್ಕಳೂ ಕಾಲವಾದರು. ಅವಸಾನಕಾಲದಲ್ಲಿ ತಮ್ಮಂದಿರನ್ನು ಒಪ್ಪಿಸಿ, ತನ್ನ

ಮೊಮ್ಮಗನಾದ ಚಾಮರಾಜನಿಗೆ ಪಟ್ಟವನ್ನೊಪ್ಪಿಸಿದನು. ಈ ಚಾಮರಾಜನು ಕ್ರಿ. ಶ. ೧೬೧೭ ರಿಂದ ೧೬೩೭ ರವರೆಗೆ ಆಳಿದನಾದರೂ ದಳವಾಯಿಯೂ ಮುಖ್ಯಮಂತ್ರಿಯೂ ಚಿಕ್ಕಪ್ಪನೂ ಆದ ಬೆಟ್ಟದ ಒಡೆಯನಿಗೂ ಚಾಮರಾಜನಿಗೂ ಮನಸ್ತಾಪವೂ, ವೈರವೂ ಇದ್ದಿ ಇತ್ತು. ಒಮ್ಮೆ ಚಾಮರಾಜನನ್ನು ಕೊಲ್ಲಲು ಬೆಟ್ಟದಒಡೆಯನು ಪ್ರಯತ್ನಿಸಿ, ಭಗ್ನಮನೋರಥನಾಗಿ, ಚಾಮರಾಜನ ಕೈಗೆಬಿದ್ದು ಕಣ್ಣುಗಳನ್ನು ಕಳೆದುಕೊಂಡನು. ಬೆಟ್ಟದಒಡೆಯನ ಅನಂತರ ದಳವಾಯಿ ಪದವಿಗೆ ನಾಲ್ವರು ಬಂದರು. ಕಡೆಯವನಾದ ವಿಕ್ರಮನು ಬೆಟ್ಟದಒಡೆಯನ ಮಗನು. ಚಾಮರಾಜನು ದಳವಾಯಿಗಳ ಕೈಗೆ ಬೀಳದೆ ಬಿಂಕದಿಂದ ರಾಜ್ಯವಾಳಿ ಮಕ್ಕಳಿಲ್ಲದೆ ಕ್ರಿ. ಶ. ೧೬೩೭ ರಲ್ಲಿ ಕಾಲವಾದನು.

ಅದೇ ವರ್ಷದಲ್ಲೇ ಚಾಮರಾಜನ ಚಿಕ್ಕಪ್ಪನಾದ ಇಮ್ಮಡಿರಾಜನು ಪಟ್ಟಕ್ಕೆ ಬಂದನು. ಇವನು ಹುಡುಗನಾಗಿದ್ದನಾಗಿ ದಳವಾಯಿ ವಿಕ್ರಮನು ಅವನ ಮೇಲೆ ಸರ್ವಾಧಿಕಾರವನ್ನು ಮಾಡಲು ಬಯಸಿದನು. ಇದು ಇಮ್ಮಡಿರಾಜನಿಗೆ ಸರಿಬೀಳಲಿಲ್ಲ. ಕೂಡಲೇ ವಿಕ್ರಮನು ಅವನಿಗೆ ವಿಷವನ್ನಿಡಿಸಿ ಕೊಲ್ಲಿಸಿದನು. ಅನಂತರ ರಾಜಪದವಿಗೆ ಯಾರು ಬರಬೇಕೆಂಬ ಪ್ರಶ್ನೆಬಂತು. ಕೂಡಲೇ ರಾಜಒಡೆಯನ ತಮ್ಮ ಬೆಟ್ಟದಚಾಮರಾಜನ ಮಗನಾದ (ಕ್ರಿ. ಶ. ಸು. ೧೬೩೮ ) ಕಂಠೀರವ ನರಸರಾಜನು ಸಿಂಹಾಸನವನ್ನೇರಿದನು.

**ಕಂಠೀರವ ನರಸರಾಜ** :—ಮೈಸೂರು ರಾಜ್ಯದರಸರಲ್ಲಿ ಮೊದಲನೆಯವನು ರಾಜಒಡೆಯನಾದರೆ ಎರಡನೆಯವನೇ ಕಂಠೀರವ ನರಸರಾಜನು. ಮಿಕ್ಕವರೆಲ್ಲರೂ ಮೈಸೂರುದೇಶದ ಇತಿಹಾಸ ದೃಷ್ಟಿಯಿಂದ ಅಷ್ಟುಗಣಿಸಲ್ಪಡತಕ್ಕವರಲ್ಲ. ಕಂಠೀರವನರಸರಾಜನೂ ಇವನ ಅನಂತರ ಬಂದ ಚಿಕ್ಕದೇವರಾಜನೂ ಮೈಸೂರು ರಾಜ್ಯ ನಿರ್ಮಾಣಕರ್ತರೆಂದರೆ ಅದು ಅತಿಶಯೋಕ್ತಿಯಾಗಲಾರದು.

ಕಂಠೀರವನರಸರಾಜನು ಚತುರನಾದುದರಿಂದ ಕೂಡಲೇ ದಳವಾಯಿ ವಿಕ್ರಮನನ್ನು ಕೊಲ್ಲಿಸಿ, ಆ ಸ್ಥಾನಕ್ಕೆ ಬೇರೊಬ್ಬನನ್ನು

ನೇಮಿಸಿದನು. ರಾಜವರ್ಗಕ್ಕೆ ಸೇರಿದವರಿಗೆ ಈ ಪದವಿಯನ್ನು ಕೊಟ್ಟರೆ ತಾನೇತಾನಾಗುವರೆಂದು ತಿಳಿದು ದಳವಾಯಿ ಪದವಿಯನ್ನು ದೂರಬಂಧುಗಳಿಗೂ, ಬಂಧುವರ್ಗಕ್ಕೆ ಸೇರದವರಿಗೂ ಕೊಡುತ್ತಾಬಂದು, ಸರ್ವಾಧಿಕಾರವನ್ನೂ ತನ್ನ ಕೈಯಲ್ಲೇ ಇರಿಸಿಕೊಂಡನು. ಇವನು ಒಳ್ಳೇ ಶೂರ ; ಜಟ್ಟಿಕಾಳಗದಲ್ಲಿ ಖ್ಯಾತಿಪಡೆದವನು.

ಮೊಟ್ಟಮೊದಲು ಟಂಕಸಾಲೆಯನ್ನಿಟ್ಟು ಪನ್ನನ್ನು ಅಚ್ಚುಹಾಕಿಸಿ ದೇಶದಲ್ಲೆಲ್ಲಾ ಅವುಗಳನ್ನು ಉಪಯೋಗಕ್ಕೆ ತರುವಂತೆ ಮಾಡಿದ ಮೈಸೂರರಸನಿವನೆ. ಈ ಒಂದು ಉದಾಹರಣೆಯಿಂದಲೇ ದಕ್ಷಿಣದೇಶದಲ್ಲಿ ಮೈಸೂರಿನ ಸ್ಥಾನದ ಬಲವು ಗೋಚರವಾಗುತ್ತದೆ.

**ಮೈಸೂರು ದೇಶವೂ ಬಿಜಾಪುರದ ಸುಲ್ತಾನರೂ:**— ಇಕ್ಕೇರಿಯ ವೀರಭದ್ರನಾಯಕನ ಸಾಮಂತ ಪಾಳಯಗಾರರೂ ಕಂಠೀರವ ನರಸರಾಜನ ಸಾಮಂತ ಒಡೆಯರೂ ತಮ್ಮತಮ್ಮ ರಾಜರನ್ನು ಎದುರಿಸಿ, ಸೋತು ಬಿಜಾಪುರದ ಪಾದುಷಹನ ಸಹಾಯವನ್ನು ಕೋರಿದರು. ಆಗ ಪಾದುಷಹನು ರಣದುಲ್ಲಾಖಾನನೊಂದಿಗೆ ಸೈನ್ಯವನ್ನು ಕೊಟ್ಟು ಶ್ರೀರಂಗಪಟ್ಟಣದ ಕೋಟೆಯನ್ನು ಹಿಡಿಯುವಂತೆ ಹೇಳಿಕಳುಹಿಸಿದನು. ರಣದುಲ್ಲಾಖಾನನು ಬಂದು ಇಕ್ಕೇರಿ, ಶಿರ್ಯ, ಬೆಂಗಳೂರು ಮುಂತಾದ ಕೋಟೆಗಳನ್ನು ವಶಪಡಿಸಿಕೊಂಡು ಶ್ರೀರಂಗಪಟ್ಟಣವನ್ನು ಸಮೀಪಿಸಿದನು. ಕಂಠೀರವ ನರಸರಾಜನು ಅಪಾರಸೈನ್ಯದಿಂದ ಬಂದು ರಣದುಲ್ಲಾಖಾನನೊಂದಿಗೆ ಯುದ್ಧವು ಸಲ್ಲದೆಂದು ತಿಳಿದು ಕಾವೇರಿಯಿಂದ ಉತ್ತರಕ್ಕಿರುವ ದೇಶವೆಲ್ಲವನ್ನೂ ಬಿಜಾಪುರದರಸರಿಗೆ ಬಿಡುವಂತೆಯೂ, ಅದರಮೇಲೆ ಆಡಳಿತವನ್ನು ಮಾತ್ರ ತಾನು ನಡೆಸಿ ರಾಜಾದಾಯವನ್ನು ಅವರಿಗೆ ಕೊಡುವಂತೆಯೂ ರಣದುಲ್ಲಾಖಾನನೊಂದಿಗೆ ಕೌಲುಮಾಡಿಕೊಂಡನು. ಆದರೆ ಕೌಲಿನಂತೆ ನಡೆಯಲಿಲ್ಲವಾದಕಾರಣ ಪಾದುಷಹನು ಖಾನ್ ಜಹಾನ್ ಮತ್ತು ಮುಸ್ತಫಾಖಾನರನ್ನು ಶ್ರೀರಂಗಪಟ್ಟಣ

ವನ್ನು ಆಕ್ರಮಿಸಲು ಕಳುಹಿಸಿದನು. ಮಹಮ್ಮದೀಯ ಪ್ರಯತ್ನವು ಸಫಲವಾಗಲಿಲ್ಲ. ಹೇಮಾಜೀಪಂತ ಮತ್ತು ಅಬ್ದುಲ್ಲಾಖಾನರು ಸುತ್ತಮುತ್ತಲಿನ ರಾಜ್ಯವನ್ನು ಕೊಳ್ಳೆಹೊಡೆದರು. ಕಂಠೀರವನರಸರಾಜನು ಮಹಮ್ಮದೀಯರನ್ನೆದುರಿಸಿ ಅವರನ್ನು ಸೇರೆಯಿಂದ ಹೊರಗಿಟ್ಟನು; ಮಧುರೆಯ ನಾಯಕನನ್ನೆದುರಿಸಿ ಸತ್ಯಮಂಗಲ ಮೊದಲಾದ ಪ್ರಾಂತ್ಯಗಳನ್ನು ಸಂಪಾದಿಸಿದನು; ಕೊಡಗಿನ ನಂಜರಾಜನನ್ನೆದುರಿಸಿ ಅವನ ರಾಜಧಾನಿಯಾದ ಪಿರಿಯಾಪಟ್ಟಣವನ್ನು ಹಿಡಿದನು. ೨೦ ವರ್ಷಗಳಕಾಲ ಅಹರ್ನಿಶಿಯೂ ರಾಜ್ಯವಿಸ್ತರಣಕಾರ್ಯದಲ್ಲಿ ಉದ್ಯುಕ್ತನಾಗಿದ್ದು, ರಾಜ್ಯದ ಸಂಪತ್ತನ್ನು ಹೆಚ್ಚಿಸಿ ಕ್ರಿ. ಶ. ೧೬೫೯ ರಲ್ಲಿ ಕಾಲವಾದನು.

ರಾಜಒಡೆಯನಕಿರಿಯ ತಮ್ಮ ಮುಪ್ಪಿನ ದೇವರಾಜನ ಮಗನಾದ ದೊಡ್ಡದೇವರಾಜನು ಪಟ್ಟಕ್ಕೆ ಬಂದು ೧೨ ವರ್ಷಗಳ ಕಾಲ ಪಾಳಿದನು. ಇವನಾಳ್ವಿಕೆಯಲ್ಲಿ ಇಕ್ಕೇರಿಯ ಶಿವಪ್ಪನಾಯಕನೂ, ಮಧುರೆಯ ಚೊಕ್ಕಲಿಂಗನಾಯಕನೂ ಇಬ್ಬರೂ ವಿಜಯನಗರದ ಶ್ರೀರಂಗರಾಯನನ್ನು ಮುಂದಿಟ್ಟುಕೊಂಡು, ಶ್ರೀರಂಗಪಟ್ಟಣ ರಾಜ್ಯವನ್ನು ಅವನಿಗೆ ಕೊಡಿಸಿಕೊಡುವ ನೆವದಿಂದ ಮೈಸೂರುದೇಶವನ್ನು ಹೊಕ್ಕರು. ವೀರನಾದ ಚಿಕ್ಕದೇವರಾಯನ ಸಹಾಯದಿಂದ ದೊಡ್ಡದೇವರಾಜನು ಇವರಿಬ್ಬರನ್ನೂ ಮಟ್ಟಹಾಕಿ ಅವರಿಬ್ಬರ ರಾಜ್ಯದಿಂದಲೂ ಹಲವು ಪ್ರಾಂತಗಳನ್ನು ಪಡೆದನು.

**ಚಿಕ್ಕದೇವರಾಜ ಒಡೆಯ** :—ದೊಡ್ಡದೇವರಾಜನು ಕ್ರಿ. ಶ. ೧೬೭೨ ರಲ್ಲಿ ಕಾಲವಾಗಲು ಚಿಕ್ಕದೇವರಾಯನು ಸಿಂಹಾಸನವನ್ನೇರಿ ಸುಮಾರು ೩೨ ವರ್ಷಗಳ ಕಾಲ ರಾಜ್ಯಾಧಿಕಾರ ಮಾಡಿ ಮೈಸೂರು ರಾಜ್ಯವನ್ನು ವಿಸ್ತರಿಸಿ, ದಕ್ಷಿಣ ಹಿಂದೂಸ್ಥಾನದಲ್ಲೆಲ್ಲ ಈ ರಾಜ್ಯಕ್ಕೆ ಶ್ರೇಷ್ಠಪದವಿಯನ್ನು ಸಂಪಾದಿಸಿದನು. ಡಿಹಲಿಯ ಸಿಂಹಾಸನದ ಮೇಲೆ ಔರಂಗಜೇಬನಿರಲು, ಮಹಾರಾಷ್ಟ್ರದಲ್ಲಿ ಶಿವಾಜಿಯು ಪ್ರಬಲನಾಗುತ್ತಿರಲು, ಚಿಕ್ಕದೇವರಾಯನು ಮೈಸೂರುರಾಜ್ಯಸೂತ್ರಗಳನ್ನು ಧರಿಸಿದನು.

ಬಿಜಾಪುರದ ಸುಲ್ತಾನರು ಸದಾ ಮೈಸೂರಿಗೆ ಕಿರುಕುಳವನ್ನುಂಟುಮಾಡುತ್ತಿದ್ದರಾದರೂ ಮೊಗಲರ ಕಾಟದಿಂದವರಿಗೆ ಇತ್ತಲಾಗಿ ಪ್ರವೇಶಮಾಡಲು ಅವಕಾಶವೇ ಇರಲಿಲ್ಲ. ಷಾಜಿ, ಶಿವಾಜಿಗಳೂ ಕೂಡ ಬೆಂಗಳೂರನ್ನು ದಾಟಿ ಬರಲಿಲ್ಲ. ಈ ಸಂದರ್ಭದಲ್ಲಿ ಜಾಣನಾದ ಚಿಕ್ಕದೇವರಾಜನು ಸಣ್ಣಪುಟ್ಟರಾಜ್ಯಗಳನ್ನೂ, ಪಾಳಯಪಟ್ಟುಗಳನ್ನೂ ತನ್ನರಾಜ್ಯಕ್ಕೆ ಸೇರಿಸಿದನು. ಇವನ ರಾಜ್ಯವು ದಕ್ಷಿಣದಲ್ಲಿ ತಿರುಚನಾಪಳ್ಳಿಯವರೆಗೂ, ಹಬ್ಬಿತು. ಪಶ್ಚಿಮದಲ್ಲಿ ಕೆಳದಿಯ ನಾಯಕರನ್ನು ಸೋಲಿಸಿದನು.

ರಾಜ್ಯವಿಸ್ತಾರಕಾರ್ಯವಾದಮೇಲೆ ರಾಜ್ಯಾಡಳಿತದ ಕಡೆಗೆ ಗಮನವನ್ನು ಕೊಟ್ಟನು. ಜೈನ ವಿಶಾಲಾಕ್ಷ ಪಂಡಿತನೇ ಇವನಿಗೆ ಮುಖ್ಯಾಮಾತ್ಯನಾಗಿದ್ದನು. ತಿರುಮಲಯ್ಯಂಗಾರ್ಯನೇ ಪ್ರಧಾನನಾಗಿದ್ದನು. ಇವನು ದಳವಾಯಿಗಳಿಗೆ ಯಾವ ಅಧಿಕಾರವನ್ನೂ ಕೊಡಲಿಲ್ಲ. ದೇಶವೆಲ್ಲ ೮೪ ಗಡಿಗಳಾಗಿ ವಿಭಾಗಿಸಲ್ಪಟ್ಟಿತು. ಒಂದೊಂದು ಗಡಿಗೊಬ್ಬ ಸುಭಾದಾರನಿದ್ದನು. ಮುಖ್ಯವಾಗಿ ಸರಕಾರವೆಲ್ಲ ೧೮ ಶಾಖೆಗಳಾಗಿ ವಿಭಾಗಿಸಲ್ಪಟ್ಟಿತು. ಅದಕ್ಕೇ 'ಅಠಾರಾಕಛೇರಿ' ಎಂದು ಹೆಸರು. ಸಾರಾಂಶವಿಷ್ಟು. ಇವನ ಆಡಳಿತ ಸುಧಾರಣೆಗಳಿಂದ ಸರಕಾರದ ಕೆಲಸಗಳು ಸಮರ್ಪಕವಾಗಿ ನಡೆಯುತ್ತ ಬಂದುವು; ದೇಶದಲ್ಲಿ ಸುಖವೂ ಶಾಂತಿಯೂ, ಸಂಪತ್ತೂ ಹೆಚ್ಚಿತು; ಸಹಜವಾಗಿ ಸರಕಾರದ ಆದಾಯವೂ ಹೆಚ್ಚಿತು.

ಚಿಕ್ಕದೇವರಾಯನು ದೆಹಲಿಯ ಮೊಗಲರಾಸ್ಥಾನಕ್ಕೆ ರಾಯಭಾರವನ್ನು ಕಳುಹಿಸಿ, ಸುಲ್ತಾನನಿಂದ ಪುರಸ್ಕೃತನಾದನೆಂದರೆ ಅವನ ಯಶಸ್ಸು ಎಷ್ಟಿರಬಹುದು; ಮೈಸೂರಿನ ಕೀರ್ತಿ ಎಷ್ಟಿರಬಹುದು!

ಚಿಕ್ಕದೇವರಾಯನು ಶ್ರೀವೈಷ್ಣವ ಮತವನ್ನು ಸ್ವೀಕರಿಸಿ, ಅನೇಕ ವೈಷ್ಣವಾಲಯಗಳನ್ನು ಕಟ್ಟಿಸಿದನು; ವಿಶಿಷ್ಟಾದ್ವೈತಸಿದ್ಧಾಂತ ಪ್ರಚಾರಕ್ಕೆ ಬೇಕಾದ ಸೌಕರ್ಯಗಳನ್ನುಂಟುಮಾಡಿದನು. ಇವನಾ

ಸ್ಥಾನವು ನೂರಾರು ಕವಿಗಳಿಗಾಕರವಾಗಿತ್ತು. ತಾನೇ ಕವಿ; ಸಾವಿರಾರು ಗ್ರಂಥಗಳಿವನ ಆಸ್ಥಾನದಿಂದ ಹೊರಬಿದ್ದವು.

ಹೀಗೆ ಚಿಕ್ಕದೇವರಾಯನು ರಾಜಒಡೆಯನಿಂದ ಸ್ಥಾಪಿಸಲ್ಪಟ್ಟ ಮೈಸೂರು ದೇಶವನ್ನು ವಿಸ್ತರಿಸಿ, ಹತ್ತಾರು ಪಾಳಯಗಾರರನ್ನೂ, ಒಡೆಯರನ್ನೂ ಸಾಮಂತರನ್ನಾಗಿಮಾಡಿ, ಮಧುರೆಯನಾಯಕರನ್ನು ಸದೆಬಡಿದು, ಬಿಜಾಪುರದ ಸುಲ್ತಾನರಿಗೆಡಗೊಡದೆ, ಔರಂಗಜೇಬನಿಂದ ಬಹುಮಾನಿಸಲ್ಪಟ್ಟವನಾಗಿ, ಮೈಸೂರಿಗೊಂದು ವ್ಯಕ್ತಿತ್ವವನ್ನುಂಟುಮಾಡಿ ಕ್ರಿ. ಶ. ೧೭೦೪ ರಲ್ಲಿ ಸ್ವರ್ಗಸ್ಥನಾದನು.

**ದಳವಾಯಿಗಳ ದುಷ್ಪ್ರವರ್ತನೆ**:—ಚಿಕ್ಕದೇವರಾಯನ ಮರಣಾನಂತರ ಮೈಸೂರೊಡೆಯರ ಅವನತಿಗೆ ಮೊದಲಾಯಿತು ಮೂಲೆಯಲ್ಲಡಗಿದ್ದ ದಳವಾಯಿಗಳು ಮೇಲಕ್ಕೆದ್ದರು. ಸರ್ವಾಧಿಕಾರವನ್ನು ವಹಿಸಿದರು. ಒಬ್ಬರ ಹಿಂದೊಬ್ಬರುಬಂದ ಕಾಂತಯ್ಯ ನಂಜರಾಜ, ಬಸವರಾಜ, ನಂಜರಾಜ, ದೊಡ್ಡರಾಜ, ಕಳಲೆವಿರೇರಾಜಯ್ಯ, ದೇವರಾಜಯ್ಯ ಮುಂತಾದ ಸ್ವಾರ್ಥಪರರಾದ ದಳವಾಯಿಗಳ ದುಷ್ಪ್ರವರ್ತನೆಯು ಹೆಚ್ಚಿತು. ಮನಬಂದಂತೆ ಇವರು ರಾಜರನ್ನು ಸಿಂಹಾಸನದ ಮೇಲೆ ಕೂಡಿಸುವುದು ಸಿಂಹಾಸನದಿಂದ ಓಡಿಸುವುದು ಈ ಆಟಕ್ಕೆ ಮೊದಲಿಟ್ಟರು. ಅರಸರಿವರ ಕೈಗೊಂಬೆಗಳಾದರು. ಹೆಚ್ಚೇಕೆ ಕ್ರಿ. ಶ. ೧೭೦೪ ರಿಂದ ೧೭೬೦ ರವರೆಗಿನಕಾಲವನ್ನು ದಳವಾಯಿಗಳಕಾಲವೆಂದು ಹೇಳಬಹುದು.

**ಮೈಸೂರೊಡೆಯರ ದೌರ್ಭಾಗ್ಯ**:—೧೭೦೪ ರಲ್ಲಿ ಮೂಕನಾದ ಕಂಠೀರವನು ಪಟ್ಟಕ್ಕೆ ಬಂದನು. ರಾಜ್ಯಸೂತ್ರಗಳೆಲ್ಲವೂ ದೇವರಾಜಯ್ಯ, ನಂಜರಾಜಯ್ಯ, ಕಳಲೆ ವೀರರಾಜಯ್ಯ, ಮೊದಲಾದವರ ಕೈಗೆ ಬಿದ್ದವು. ದಳವಾಯಿಗಳ ದಾಂಧಲೆಗೆ ಸಿಕ್ಕಿ ಸಾಕಾಗಿ ೧೭೧೪ ರಲ್ಲಿ ಕಂಠೀರವನು ಕಾಲವಾದನು. ಅದೇವರ್ಷದಲ್ಲೇ ದೊಡ್ಡಕೃಷ್ಣರಾಜನು ಪಟ್ಟಕ್ಕೆ ಬಂದನಾದರೂ ದಳವಾಯಿ ದೇವರಾಜ ನಂಜರಾಜರು ಸರ್ವ ಸ್ವತಂತ್ರರಾಗಿ ರಾಜನ ಮೂಗಿಗೆ ದಾರವನ್ನು

ಹಾಕಿ ಎಳೆಯಲಾರಂಭಿಸಿದರು. ರಾಜ್ಯಾಂತರ್ಗದ ವಿಚಾರಗಳು ಹೀಗಿರಲು ಸುತ್ತಮುತ್ತಲಿನ ಪ್ರಭುಗಳು ಮೈಸೂರನ್ನು ಮುತ್ತಲು ಉದ್ಯುಕ್ತರಾದರು.

ಮೊದಲು ಆರ್ಕಾಟು, ಕಡಪ, ಕರ್ನೂಲು, ಸಾವಂತಿಯ ನವಾಬರೂ, ಗುತ್ತಿಯ ಸಿದ್ಧೋಜೀ ಘೋರ್ಪಡೆಯೂ ಒಂದಾಗಿ ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದರು. ಮೈಸೂರರಸನಿವರೆಲ್ಲರಿಗೂ ಲಂಚವನ್ನು ಕೊಟ್ಟು ಹಿಂದಕ್ಕೆ ಕಳುಹಿಸಿದನು. ಅನಂತರ ಪೇಷ್ವೆ ಬಾಜೀರಾಯನು ಬಂದನು. ಅವನಿಗೂ ಕೈಬೆಚ್ಚಗೆಮಾಡಿ ಕಳುಹಿಸಿದ್ದಾಯಿತು. ಈ ಎರಡು ಉದಾಹರಣೆಗಳಿಂದಲೇ ಮೈಸೂರುದೇಶವು ಬಿದ್ದ ಗುಣಿಯ ಆಳವನ್ನು ಊಹಿಸಬಹುದು. ಪರರಾಯರ ಭೀತಿಯಿಂದ ದೇಶವನ್ನು ಸಂರಕ್ಷಿಸಿಕೊಳ್ಳುವುದಕ್ಕೆ ಕೂಡ ಮೈಸೂರಿಗೆ ಯೋಗ್ಯತೆ ಇಲ್ಲದಂತಾಯಿತು. ಈ ಅವಮಾನಾಗ್ನಿಯಲ್ಲಿ ಬೆಂದು, ದಳವಾಯಿಗಳ ಕೈಹಿಡಿಯಲ್ಲಿ ನೊಂದು, ದೊಡ್ಡಕೃಷ್ಣರಾಜನು ಮಕ್ಕಳಿಲ್ಲದೆ ೧೭೩೧ ರಲ್ಲಿ ಕಾಲವಾದನು. ದಳವಾಯಿಗಳ ಮಾರ್ಗವು ನಿರುಪಾಧಿಕವಾಯಿತು. ಕುಲಕ್ರಮಾಗತವಾಗಿ ಬಂದ ಮೈಸೂರರಸರ ಗದ್ದುಗೆಯ ಮೇಲೆ ದೂರಬಂಧುವಾದ ಚಾಮರಾಜನೆಂಬುವನನ್ನು ದಳವಾಯಿದೇವರಾಜ, ಸರ್ವಾಧಿಕಾರಿ ನಂಜರಾಜರು ಕೂಡಿಸಿದರು. ಸ್ವಲ್ಪಕಾಲದಲ್ಲೇ ಚಾಮರಾಜನು ಸ್ವತಂತ್ರಿಸಿ ನಡೆಯಲು ಮೊದಲಿಡಲು, ದಳವಾಯಿಗಳವನನ್ನು ರಾಣೀವಾಸದೊಂದಿಗೆ ಹಿಡಿದು, ಕಬ್ಬಾಳದುರ್ಗದಲ್ಲಿ ಬಂಧಿಸಿದರು. ಮೂರು ವರ್ಷದ ಕೂಸೊಂದನ್ನು ತಂದು ಚಿಕ್ಕಕೃಷ್ಣರಾಜನೆಂದು ಹೆಸರಿಟ್ಟು ಅದಕ್ಕೆ ಕಿರೀಟಧಾರಣವನ್ನು ಮಾಡಿದರು. ಸರ್ವಾಧಿಕಾರಿ ನಂಜರಾಜಯ್ಯನು ಕೆಲಸದಿಂದ ಮುಕ್ತನಾಗಲು ಅವನ ಸ್ಥಾನಕ್ಕೆ ದೇವರಾಜನ ತಮ್ಮನಾದ ಕರಾಚೂರಿ ನಂಜರಾಜನೇ ಬಂದನು. ಈ ಸೋದರರೇ ಆಗ ನಿಜವಾಗಿ ಮೈಸೂರರಸರಾದರು.

**ಭ್ರಾತೃಕಲಹವೂ ಹೈದರನ ರಾಜ್ಯಾಪಹಾರವೂ** :— ಬಹು ಬೇಗ ದೇವರಾಜ ನಂಜರಾಜರಿಗೆ ಕಲಹವುಂಟಾಯಿತು. ಈ

ಭ್ರಾತೃಕಲಹದಲ್ಲಿ ಚಿಕ್ಕಕೃಷ್ಣರಾಜನು ಸ್ವತಂತ್ರನಾಗಿ ದಳವಾಯಿಗಳ ಮೂಳೆ ಮುರಿಯಬೇಕೆಂದೆಣಿಸಿ, ಮೈಸೂರು ಸೈನ್ಯದಲ್ಲಿದ್ದು, ಹೆಸರನ್ನು ಪಡೆದು ನಂಜರಾಯ್ಯನ ಬಲಗೈಯ್ಯಾಗಿದ್ದ ಹೈದರನ ಸಹಾಯವನ್ನು ಅಪೇಕ್ಷಿಸಿದನು. ಹೈದರನು ಕೂಡಲೇ ಸಿದ್ಧನಾದನು. ದಳವಾಯಿಗಳ ದರ್ಪವಡಗಿತು. ಆದರೇನು, ಚಿಕ್ಕಕೃಷ್ಣದೇವರಾಜನು ಎಣಿಸಿದಂತಾಗಲಿಲ್ಲ. ದಳವಾಯಿಗಳ ಸ್ಥಾನವನ್ನೀಗ ಹೈದರನಾಕ್ರಮಿಸಿದನು. ಮುಂದಿನ ಅಧ್ಯಾಯದಲ್ಲಿ ರಾಜ್ಯಾಪಹಾರಕನಾದ ಹೈದರ್ ಮತ್ತು ಅವನ ಮಗ ಟೀಪುಸುಲ್ತಾನರ ಆಳ್ವಿಕೆಯನ್ನು ಅದರ ಪರಿಣಾಮವನ್ನು ನೋಡೋಣ.

---

## ಕೊಡಗು

**ಪೂರ್ವ ಇತಿಹಾಸ:**—ಕೊಡಗಿನ ಇತಿಹಾಸವು ಮೊದಲಿನಿಂದ ತುದಿಯುವರೆಗೂ ಮೈಸೂರು ಇತಿಹಾಸದೊಂದಿಗೇ ಸಂಬಂಧಿಸಿರುವುದರ ದೆಸೆಯಿಂದ ಇಲ್ಲೇ ಕೊಡಗಿನ ಚರಿತ್ರೆಯನ್ನು ಸಂಕ್ಷೇಪವಾಗಿ ಸಂಗ್ರಹಿಸಲಿಚ್ಛಿಸುವೆವು.

ಈ ದೇಶದ ಪ್ರಾಚೀನ ಇತಿಹಾಸವು ಚನ್ನಾಗಿ ತಿಳಿದು ಬಂದಿಲ್ಲ. ಮೊದಲು ಮೊದಲು ಕೊಡಗು ತಲಕಾಡಿನ ಗಂಗರಸರ ಆಳ್ವಿಕೆಗೆ ಒಳಪಟ್ಟಿದ್ದಿತು. ಕ್ರಿ. ಶ. ೧೧ ನೆಯ ಶತಮಾನದಿಂದ ಗಂಗರಸರನ್ನು ಚೋಳರು ಸೋಲಿಸಿದರಷ್ಟೆ. ಆಗ ಕೊಡಗು ಚೋಳರವಶಕ್ಕೆ ಬಂತು, ಕೊಂಗಳನಾಡಿನ ಕೊಂಗಾಳ್ವರು, ಚೋಳರಿಗೆ ಸಾಮಂತರಾಗಿದ್ದರು. ಹೊಯ್ಸಳರು ಪ್ರಬಲರಾದನಂತರ ಚೋಳರು ಪಲಾಯನಮಾಡಿದರು ಕೊಂಗಾಳ್ವರೂ ಮಾಯವಾದರು.

**ಚಂಗಾಳ್ವರು:**—ಚಂಗನಾಡಿನ ಚಂಗಾಳ್ವರು ೧೪ ನೆಯ ಶತಮಾನಾಂತ್ಯದವರೆಗೂ ಹೊಯ್ಸಳರಿಗಧೀನರಾಗಿದ್ದರು. ವಿಜಯನಗರ ಸಾಮ್ರಾಜ್ಯ ಸ್ಥಾಪನಾನಂತರ ಚಂಗಾಳ್ವರು, ನಂಜರಾಯ

ಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು, ವಿಜಯನಗರ ದರಸರಿಗೆ ಕಪ್ಪವನ್ನು ಕೊಡುತ್ತಿದ್ದರು. ತಾಳೀಕೋಟೆಯ ಅನಂ ತರ ಮೈಸೂರೊಡೆಯರು ಪ್ರಬಲರಾದರು. ಕ್ರಿ. ಶ. ೧೬೪೪ ರಲ್ಲಿ ಕಂಠೀರವ ನರಸರಾಜನಿಗೂ, ಚಂಗಾಳ್ವರ ಕಡೆಯರಸನಾದ ನಂಜ ರಾಜನಿಗೂ ಪಿರಿಯಾಪಟ್ಟಣದಬಳಿ ಯುದ್ಧವಾಯಿತು. ನಂಜ ರಾಜನು ಕಾಲವಾದನು.

**ಹಾಲೇರಿಯ ಅರಸರು** :—ಚಂಗಾಳ್ವರ ಪತನಾನಂತರ ಹಾಲೇರಿಯ ಮನೆತನದವರು ರಾಜ್ಯಸ್ಥಾಪನೆಯನ್ನು ಮಾಡಿದರು. ಮುದ್ದುರಾಜನೇ ಈ ಮನೆತನದ ಮೂಲಪುರುಷನು. ಮಡಕೇರಿಗೆ ಉತ್ತರದಲ್ಲಿರುವ ಹಾಲೇರಿಯಲ್ಲೇ ಆಳ್ವಿಕೆಯನ್ನವನು ಮೊದಲಿಟ್ಟ ನಾದಕಾರಣ ಈ ಮನೆತನಕ್ಕಾ ಊರ ಹೆಸರೇ ಬಂತು. ಬಿದನೂರಿನ ರಾಜವಂಶೀಯನೇ ಮುದ್ದುರಾಜನ ತಂದೆಯೆಂದು ಹಲವರ ಊಹೆ. ಹಾಲೇರಿಯರಸರು ಲಿಂಗಾಯಿತರು. ಕ್ರಿ. ಶ. ೧೬೮೧ ಸುಮಾರಿ ನಲ್ಲಿ ಮುದ್ದುರಾಜನು ರಾಜಧಾನಿಯನ್ನು ಮಡಕೇರಿಗೆ ತಂದು, ಅಲ್ಲಿ ಕೋಟೆಯನ್ನೂ ಅರಮನೆಯನ್ನೂ ಕಟ್ಟಿಸಿದನು. ಇವನ ತರುವಾಯ ೧೭೮೭ ರಲ್ಲಿ ಹಿರಿಯ ಮಗನಾದ ದೊಡ್ಡವೀರಪ್ಪನೂ ಅವನ ಅನಂ ತರ ೧೭೩೬ ರಲ್ಲಿ ದೊಡ್ಡವೀರಪ್ಪನ ಮೊಮ್ಮಗನಾದ ಚಿಕ್ಕವೀರ ಪ್ಪನೂ ಪಟ್ಟಕ್ಕೆ ಬಂದರು.

**ಸ್ವಯೂಥ ಕಲಹವೂ ಹೈದರನ ಪ್ರವೇಶವೂ** :—ಚಿಕ್ಕ ವೀರಪ್ಪನ ತರುವಾಯ (ಕ್ರಿ. ಶ. ೧೭೬೬) ಮುದ್ದುರಾಜನ ನಡು ಕಲು ಮಗ ಅಪ್ಪಾಜಿಯ ಕುಮಾರನಾದ ಇಮ್ಮಡಿ ಮುದ್ದುರಾಜನೂ ಕಿರಿಯ ಮಗ ನಂದಿರಾಜನ ಸುತ ಮುದ್ದಯ್ಯನೂ, ರಾಜ್ಯಕ್ಕಾಗಿ ಕೆಲಕಾಲ ಹೋರಾಡಿ, ಇಬ್ಬರ ಒಪ್ಪಿಗೆಯಿಂದ ಮುದ್ದಯ್ಯ ಮುದ್ದು ರಾಜರಿಬ್ಬರೂ ಕ್ರಿ. ಶ. ೧೭೭೦ ರವರೆಗೂ ಆಳಿದರು. ಅವರ ತರು ವಾಯ ಮತ್ತೆ ಕಲಹಕ್ಕಾರಂಭವಾಯಿತು. ಸಿಂಹಾಸನಕ್ಕೆ ತಾನಧಿ ಕಾರಿಯೆಂದು ಮುದ್ದುರಾಜನ ತಮ್ಮ ಲಿಂಗರಾಜನೂ, ತಾನಧಿಕಾರಿ

ಯೆಂದು ಮುದ್ದಯ್ಯನ ಮೊಮ್ಮಗ ದೇವಪ್ಪನೂ ಕಾದಾಡಿದರು. ದೇವಪ್ಪನು ಸಿಂಹಾಸನವನ್ನಾಕ್ರಮಿಸಿದನು. ಆಗ ಲಿಂಗರಾಜನು ಹೈದರನ ಸಹಾಯವನ್ನು ಪಡೆದು ದೇವಪ್ಪನನ್ನೋಡಿಸಿ ಕ್ರಿ. ಶ. ೧೭೭೫ ರಲ್ಲಿ ತಾನೇ ಪಟ್ಟಕ್ಕೆ ಬಂದನು.

**ಇಂಗ್ಲೀಷರಾಳ್ವಿಕೆ**:—ಲಿಂಗರಾಜನು ಹೈದರನಿಗೆ ಕೊಡಗಿನೊಳಗೆ ಕಾಲಿಡಲು ಅವಕಾಶ ಕೊಟ್ಟದ್ದೆ ತಪ್ಪಾಯಿತು. ಲಿಂಗರಾಜನ ತರುವಾಯ (೧೭೮೦) ಅವನ ಮಗನಾದ ವೀರರಾಜನು ಬಾಲಕನೆಂಬ ನೆವದಿಂದ ಕೊಡಗಿನ ಆಡಳಿತವನ್ನು ಹೈದರನೇ ವಹಿಸಿದನು. ರಾಜಮನೆತನದವರನ್ನು ಪಿರಿಯಾಪಟ್ಟಣದಲ್ಲಿ ಸೆರೆಯಲ್ಲಿಡಿಸಿದನು. ಅವನ ಅನಂತರ ಟೀಪುವು ಕೊಡಗಿನಲ್ಲಿದ್ದ ದಂಗೆಯನ್ನಡಗಿಸಿ, ಅಲ್ಲಿ ಮಹಮದೀಯ ಅಧಿಕಾರಿಗಳನ್ನು ನೇಮಿಸಿದನು.

ವೀರರಾಜನು ಸೆರೆಯಿಂದ ತಪ್ಪಿಸಿಕೊಂಡು, ಸಮಯ ಕಾದಿದ್ದು, ಇಂಗ್ಲೀಷರೊಂದಿಗೆ ಸೇರಿ, ಕ್ರಿ. ಶ. ೧೭೯೨ ರಲ್ಲಿ ಇಂಗ್ಲೀಷರ ಸಹಾಯದಿಂದ ಕೊಡಗಿಗೆ ಒಡೆಯನಾದನು. ಆದರೆ ಮೂವತ್ತು ವರ್ಷಗಳೊಳಗಾಗಿ ಕೊಡಗಿನ ಆಡಳಿತವು ಅನಾಯಕವಾಯಿತು. ೧೮೨೦ ರಲ್ಲಿ ಗದ್ದುಗೆಯನ್ನೇರಿದ ವೀರರಾಜನ ದುರ್ನಡತೆಯು ದುಸ್ಸಹವಾಯಿತು. ೧೮೩೪ ರಲ್ಲಿ ಇಂಗ್ಲೀಷರು ವೀರರಾಜನನ್ನು ಹಿಡಿದು, ವೆಲ್ಲೂರಿನಲ್ಲಿ ಬಂಧಿಸಿ, ರಾಜ್ಯಾಡಳಿತವನ್ನು ತಾವೇ ವಹಿಸಿದರು.

### ೩ ಬಿಜಾಪುರದ ಸುಲ್ತಾನರು

**ಬಿಜಾಪುರದ ರಾಜ್ಯಸ್ಥಾಪನೆ**:—ಕ್ರಿ. ಶ. ೧೩೪೭ ರಲ್ಲಿ (ಹಿಂದೂ) ವಿಜಯನಗರಕ್ಕೆ ಸರಿಸಮಾನವಾಗಿ ಬಹಮನೀರಾಜ್ಯವು (ಮಹಮ್ಮದೀಯ) ಸ್ಥಾಪಿತವಾಯಿತಷ್ಟೆ. ಆ ರಾಜ್ಯದ ಬಿಜಾಪುರ ಪ್ರಾಂತ್ಯಕ್ಕೆ ಕ್ರಿ. ಶ. ಸು. ೧೪೮೫ ರಲ್ಲಿ ಯೂಸಫನು ಅಧಿಕಾರಿಯಾಗಿ ನೇಮಿಸಲ್ಪಟ್ಟನು. ಬಹಮನೀ ಸುಲ್ತಾನರು ಬಲಹೀನರಾ

ದರು. ೧೪೮೧ ರಲ್ಲಿ ಬಹಮನೀ ರಾಜ್ಯದ ಕೀರ್ತಿಯನ್ನು ಎಂದಿಗೂ
ಮರೆಯದಂತೆ ಮಾಡಿದ ಮಹಮೂದ್ ಗವಾನನಿಗೆ ದುರ್ಮರಣ
ವೆಂದು ಉಂಟಾಯಿತೋ ಅಂದೇ ಬಹಮನೀ ರಾಜ್ಯವು ನಾಶವಾ
ಯಿತು. ಅಲ್ಲಲ್ಲಿನ ಅಧಿಕಾರಿಗಳು ಅಲ್ಲಲ್ಲೇ ಸ್ವತಂತ್ರರಾದರು. ಐದು
ರಾಜ್ಯಗಳಾದುವು. ಈ ಸಂದರ್ಭದಲ್ಲೇ ಬಿಜಾಪುರದ ಅಧಿಕಾರಿಯಾದ
ಯೂಸಫನು ಸ್ವತಂತ್ರನಾದುದು. ಬಹಮನೀ ರಾಜ್ಯದ ದುಸ್ಥಿತಿ
ಯನ್ನು ಕಂಡು ಕ್ರಿ.ಶ. ೧೪೮೯ ರಲ್ಲಿ ಯೂಸಫನು ಅದಿಲ್‌ಷಹನೆಂಬ
ಹೆಸರಿನಿಂದ ಬಿಜಾಪುರದ ಸುಲ್ತಾನನಾದನು. ಉತ್ತರಕ್ಕೆ ನೀರಾ,
ದಕ್ಷಿಣಕ್ಕೆ ತುಂಗಭದ್ರಾ, ಪೂರ್ವಕ್ಕೆ ಭೀಮಾ ಕೃಷ್ಣಾ ನದಿಗಳು
ಮತ್ತು ಪಶ್ಚಿಮಕ್ಕೆ ಸಮುದ್ರ, ಈ ರಾಜ್ಯಕ್ಕೆ ಮೇರೆಗಳಾಗಿದ್ದವು.
ದಕ್ಷಿಣ ದೇಶದ ೧೬ ನೆಯ ಶತಮಾನದ ಇತಿಹಾಸ ರಂಗಭೂಮಿ
ಯಲ್ಲಿ ಬಿಜಾಪುರವು ಪ್ರಧಾನ ಪಾತ್ರವನ್ನು ವಹಿಸಿತೆಂದು ಹೇಳಬೇಕು.
ಪಾಶ್ಚಿಮಾತ್ಯರಾದ ಪೋರ್ಚುಗೀಸರೂ, ಪ್ರೆಂಚರೂ ಇಬ್ಬರೂ
ಮೊಟ್ಟಮೊದಲು ತಲೆಯೆತ್ತಿದುದು ಅದಿಲ್‌ಷಾಹಿಗಳ ಆಶ್ರಯದಿಂದಲೆ.
ಗೋಬ್ರಾಹ್ಮಣ ಸಂರಕ್ಷಕನೂ, ಮರಾಠವೀರನೂ ಆದ ಶಿವಾಜಿಯು
ಮುಂದೆ ಭರತಖಂಡದ ಇತಿಹಾಸ ರಣರಂಗದಲ್ಲಿ ತೋರಿಸಿದ
ಶೌರ್ಯಪ್ರತಾಗಳನ್ನು ವೃದ್ಧಿಪಡಿಸಿಕೊಂಡುದು ಬಿಜಾಪುರವೆಂಬ
ವ್ಯಾಯಾಮಶಾಲೆಯಲ್ಲೆ.

ಮೊದಲು ಮೊದಲೀ ಅದಿಲಷಾಹಿಗಳು ಅಹಮನ್ನಗರ, ಬೀ
ರಾರ್, ಬೀದರ ಗೋಲಕೊಂಡ ಸುಲ್ತಾನರನ್ನು ಮಟ್ಟಹಾಕಿ
ರಾಜ್ಯವಿಸ್ತಾರವನ್ನು ಮಾಡಿದರು. ಇವರಿಗೂ ವಿಜಯನಗರದರಸ
ರಿಗೂ ಕಲಹಗಳಾಗುತ್ತಿದ್ದರೂ ರಾಯಚೂರು ಯುದ್ಧಾನಂತರ
(೧೫೨೦) ಎರಡು ರಾಜ್ಯಗಳಿಗೂ ಮೈತ್ರಿಯುಂಟಾಯಿತು.

ಕ್ಷಣಕ್ಷಣವೂ ವೃದ್ಧಿಹೊಂದುತ್ತಲಿದ್ದ ವಿಜಯನಗರ ಸಾಮ್ರಾ
ಜ್ಯದ ಉನ್ನತಿಯನ್ನು ಮಹಮ್ಮದೀಯರು ಸಹಿಸಲಾರದಾದರು.
ರಾಮರಾಜನ ದುರಹಂಕಾರವು ಮಿತ್ರನಾದ ಬಿಜಾಪುರದ ಅದಿಲ್‌ಷ

ಹನನ್ನೂ ಕೂಡ ರೇಗಿಸಿತು. ೧೫೬೫ ರಲ್ಲಿ ಬಹಮನೀ ಸುಲ್ತಾನ ರೈವರೂ ಕೂಡಿ ವಿಜಯನಗರ ಸಾಮ್ರಾಜ್ಯ ವಿನಾಶಕ್ಕೆ ಅಡಿಗಲ್ಲನ್ನು ಹಾಕಿದರು. ತಾಳೀಕೋಟೆಯ ತರುವಾಯ ಐವರು ಸುಲ್ತಾನರಲ್ಲಿ ಅದಿಲ್‌ಷಾಹಿ ಸುಲ್ತಾನರೇ ಬಲಿಷ್ಟರಾದರು. ಬಿಜಾಪುರವೇ ಐದು ರಾಜ್ಯಗಳಲ್ಲಿ ಜ್ಯೇಷ್ಠರಾಜ್ಯವಾಯಿತು. ಮಹಮ್ಮದ್ ಅದಿಲ್‌ಷಹನ ಕಾಲದಲ್ಲಿ (೧೬೩೭) ಮೊಗಲರೊಂದಿಗೆ ಕರಾರಾಗಿ ಬಿಜಾಪುರವು ದೆಹಲಿ ಸಾಮ್ರಾಜ್ಯದ ಸಾಮಂತರಾಜ್ಯವಾಯಿತು.

**ಬಿಜಾಪುರವೂ ಮೈಸೂರುದೇಶವೂ**:—ಕಂಠೀರವ ನರಸರಾಜ, ಇಕ್ಕೇರಿಯ ವೀರಭದ್ರನಾಯಕರ ಆಳ್ವಿಕೆಯಲ್ಲಿ ಅದಿಲಷಹನು ರಣದುಲ್ಲಾಖಾನ್ ಮತ್ತು ಷಾಜಿ (ಶಿವಾಜಿಯ ತಂದೆ) ಗಳನ್ನು ಅಪಾರವಾದ ಸೈನ್ಯದೊಂದಿಗೆ ರಾಜ್ಯವಿಸ್ತಾರಕ್ಕಾಗಿ ತುಂಗಭದ್ರೆಯಿಂದ ದಕ್ಷಿಣಕ್ಕೆ ಕಳುಹಿಸಿದನು. ಮತ್ತೆ ಖಾನ್‌ಖಹಾನ್ ಮತ್ತು ಮುಸ್ತಫಾಖಾನರು ಮೈಸೂರು ರಾಜ್ಯವನ್ನು ಪ್ರವೇಶಿಸಿದರು. ಕಂಠೀರವ ನರಸರಾಜ ನಾಳ್ವಿಕೆಯಲ್ಲಿ ಈ ವಿಷಯ ವಿಸ್ತಾರವಾಯಿತು.

**ಬಿಜಾಪುರವೂ ಮರಾಠರೂ**:—ಶಿವಾಜಿಯ ತಂದೆಯಾದ ಷಾಜಿಗೆ ಬಿಜಾಪುರದ ಸುಲ್ತಾನನು ಜಹಗೀರನ್ನು ಕೊಟ್ಟನು. ಅದಕ್ಕೆ ಪ್ರತಿಯಾಗಿ ಷಾಜಿಯೂ ಶಿವಾಜಿಯೂ ಬಿಜಾಪುರದ ಸುಲ್ತಾನರ ಸಾಮಂತರೂ ಸೇನಾನಾಯಕರೂ ಆಗಿದ್ದರು. ಷಾಜಿಯು ಮೈಸೂರು ತಂಜಾಊರುಗಳ ಹಲವು ಭಾಗಗಳನ್ನು ವಶಪಡಿಸಿಕೊಂಡನು. ಅವನ ತರುವಾಯ ಮಗನಾದ ವೆಂಕೋಜಿ ಅಥವಾ ಎಕ್ಕೋಜಿಯು ಈ ಪ್ರಾಂತ್ಯದಲ್ಲಿ ಆಳುತ್ತಿದ್ದನು. ಆದರೆ ಎಕ್ಕೋಜಿಯ ಸೋದರನಾದ ಶಿವಾಜಿಯು ಪ್ರಬಲನಾಗಿ, ಮೊಗಲರನ್ನೂ ಕೂಡ ಹೆದರಿಸಿ, ಎಕ್ಕೋಜಿಯನ್ನೂ ವಶಪಡಿಸಿಕೊಂಡು, ಅವನನ್ನು ತಂಜಾಊರಲ್ಲಿ ಬಿಟ್ಟನು. ಷಾಜಿಯುಕಾಲದಿಂದಲೂ ಶಿವಾಜಿಯು ವಿಜಯನಗರ ಸಾಮ್ರಾಜ್ಯವು ಹಾಳಾದುದು ಹಿಂದುತ್ವಕ್ಕೇ ಮೋಸ ಬಂತೆಂದು ತಿಳಿದು ಮತ್ತೆ ಹಿಂದೂಸಾಮ್ರಾಜ್ಯವನ್ನು ಕಟ್ಟುವ

ಪ್ರಯತ್ನದಲ್ಲಿದ್ದನು. ಅಂದಿನಿಂದಲೂ ಬಿಜಾಪುರದ ಸುಲ್ತಾನರೊಂದಿಗೆ ದ್ವೇಷಕ್ಕೆ ಮೊದಲಾಯಿತು. ಶಿವಾಜಿಯು ನಡತೆಗಾಗಿ ಷಾಜಿಗೆ ಸೆರೆಮನೆಯ ವಾಸವೂ ಆಯಿತು. ಸ್ವಾಮಿದ್ರೋಹಿಯಾದ ರುಸ್ತುಂಜಮಾನನ ಒಳಸಂಚಿನಿಂದ ಶಿವಾಜಿಯು ಬಿಜಾಪುರದ ಸುಲ್ತಾನರನ್ನು ಮುಟ್ಟಹಾಕಿದನು. ಬಿಜಾಪುರದ ಸುಲ್ತಾನ ಅಲಿಯು ಕ್ರಿ. ಶ. ೧೬೬೨ ರಲ್ಲಿ ಶಿವಾಜಿಯೊಂದಿಗೆ ಕೌಲುಮಾಡಿಕೊಳ್ಳಬೇಕಾಯಿತು. ಮೇಲೆ ಮೊಗಲರಕಾಟ, ಒಳಗೆ ವಿದ್ರೋಹಿಗಳ ಆಟ. ಈ ಮಧ್ಯೆ ಮರಾಠರು ಕೈಮೀರಿದರು. ಕ್ರಿ. ಶ. ೧೬೭೪ ರಲ್ಲಿ ಶಿವಾಜಿಯು ರಾಜನೇ ಆದನು.

**ಬಿಜಾಪುರವೂ ಮೊಗಲರೂ** :—ಬಹಮನೀ ರಾಜ್ಯದಲ್ಲಿ ಬಿಜಾಪುರವೇ ಬಲವಾದುದು. ದೆಹಲಿಯ ಮೊಗಲರಿಗೆ ದಕ್ಷಿಣದೇಶದ ಮೇಲೆ ಗಮನ ಬಿದ್ದಂದಿನಿಂದ ಬಿಜಾಪುರದ ಮೇಲೆ ಕಣ್ಣಿತ್ತು. ಮುಹಮ್ಮದ್ ಆದಿಲ್‌ಷಹನಕಾಲದಲ್ಲಿ ಮೊಗಲರು ಸೈನ್ಯದೊಂದಿಗೆ ಅಸಫ್‌ಖಾನನನ್ನೂ ಕಳುಹಿಸಿದರು. ಕ್ರಿ. ಶ. ೧೬೩೬ ರಲ್ಲಿ ಮೊಗಲರಿಗೆ ವರ್ಷಂಪ್ರತಿ ೨೦ ಲಕ್ಷದ್ರವ್ಯವನ್ನು ಕೊಡುವಂತೆ ಆದಿಲನು ಒಪ್ಪಬೇಕಾಯಿತು. ಇಮ್ಮಡಿ ಆದಿಲಷಹನ ಕಾಲದಲ್ಲಿ ಔರಂಗಜೇಬನೇ ಬಿಜಾಪುರವನ್ನು ಮುತ್ತಲು ಬಂದನು. ಆಗ ಅದು ಫಲಿಸಲಿಲ್ಲ.

ಕ್ರಿ. ಶ. ೧೬೬೫ ಸುಮಾರಿನಲ್ಲಿ ಬಿಜಾಪುರದ ಶತ್ರುವಾದ ಶಿವಾಜಿಯು ಪಾದಷಾ ಔರಂಗಜೇಬನೊಂದಿಗೆ ಸೇರಿ, ಬಿಜಾಪುರವನ್ನು ಮುತ್ತಿದನು. ಆಗ ಆದಿಲ್‌ಷಹನು ಸಂಧಿಮಾಡಿಕೊಂಡು ಮೊಗಲರಿಗೂ ಮರಾಠರಿಗೂ ಕಪ್ಪವನ್ನು ಕೊಡಲೊಪ್ಪಿದನು. ೧೬೭೬ ಸುಮಾರಿನಲ್ಲಿ ಮೊಗಲರು ಮತ್ತೆ ಬಿಜಾಪುರವನ್ನು ಪ್ರವೇಶಿಸಿದರು. ಆಗ ಶಿವಾಜಿಯು ಬಿಜಾಪುರದ ಸಹಾಯವಾಗಿ ನಿಂತು ಮೊಗಲರ ನ್ನೋಡಿಸಿದನು. ಈಸಹಾಯಕ್ಕಾಗಿ ಬಿಜಾಪುರದ ಹಲವುಪ್ರಾಂತಗಳು ಶಿವಾಜಿ ಸೇರಿದುವು.

ಕ್ರಿ. ಶ. ೧೬೮೦ ರಲ್ಲಿ ಶಿವಾಜಿಯು ಕಾಲವಾಗಲು ಔರಂಗಜೇಬನಿಗೆ ಆನಂದವಾಯಿತು. ಕೂಡಲೇ ತಾನೇ ಸೈನ್ಯಸಮೇತನಾಗಿ ಗೋಲಕೊಂಡೆಯನ್ನು ಹಿಡಿದು, ಬಿಜಾಪುರಕ್ಕೆ ಮುತ್ತಿಗೆಯನ್ನು ಹಾಕಿ, ಅದನ್ನು ಕೆಡವಿ, ಸಿಕಂದರನನ್ನು ಕೈಸೆರೆ ಹಿಡಿದನು. ನಿರ್ಭಾಗ್ಯನಾದ ಸಿಕಂದರನು ಸ್ವಲ್ಪಕಾಲದಲ್ಲೇ ಕಾಲವಾದನು. ಔರಂಗಜೇಬನ ಅನಂತರ ತುಂಗಭದ್ರೆಯಿಂದ ಉತ್ತರಕ್ಕಿರುವ ದೇಶವೆಲ್ಲ ಮರಾಠರ ಮತ್ತು ನಿಜಾಮನ ಪಾಲಾಯಿತು. ಅಲ್ಲದೆ ಕೊಲ್ಹಾಪುರ, ಸವಣೂರು. ಸತಾರ ಅರಸರರಿಗೂ ಅನೇಕ ಪ್ರಾಂತಗಳು ಸೇರಿದುವು. ಆದರೆ ೧೭೫೬ ರಲ್ಲಿ ಪೇಶ್ವೆಬಾಜೀರಾಯನು ಸವಣೂರು ನವಾಬನಿಂದ ೩೬ ಜಿಲ್ಲೆಗಳನ್ನು ಪಡೆದನು. ಹೆಚ್ಚು ಕಡಮೆ ಉತ್ತರ ಕರ್ಣಾಟಕವೆಲ್ಲವೂ ಮರಾಠರ ವಶವಾಯಿತು. ಬಾಜೀರಾಯನು ಮತ್ತೆ ಬಿಜಾಪುರದಕೋಟೆಗೆ ಮುತ್ತಿಗೆಹಾಕಿ ಕ್ರಿ. ಶ. ೧೭೬೦ ರಲ್ಲಿ ನಿಜಾಂ ಆಲಿಯಿಂದ ಬಿಜಾಪುರ ಪ್ರಾಂತವೆಲ್ಲವನ್ನೂ ಪಡೆದನು.

೧೭೬೦ ರಲ್ಲಿ ತುಂಗಭದ್ರೆಯಿಂದ ದಕ್ಷಿಣದ ಕರ್ಣಾಟಕವೆಲ್ಲವೂ ಒಡೆಯರ ಕೈ ತಪ್ಪಿ ಮುಹಮ್ಮದೀಯರ ಪಾಲಾಗುತ್ತಿರಲು, ತುಂಗಭದ್ರೆಯಿಂದ ಉತ್ತರದ ಕರ್ಣಾಟಕವೆಲ್ಲವೂ ಮುಹಮ್ಮದೀಯರ ಕೈ ತಪ್ಪಿ ಮರಾಠರ ಪಾಲಾಯಿತು.

## ೪ ಕಾಲಸ್ಥಿತಿ

ಹದಿನಾಲ್ಕನೆಯ ಶತಮಾನದಿಂದ ದಕ್ಷಿಣ ಹಿಂದೂಸ್ಥಾನದಲ್ಲಿ ರಾಜಕೀಯ ಸಾಮಾಜಿಕ, ಆರ್ಥಿಕ ಪ್ರಳಯಗಳಿಗೆ ತುದಿಮೊದಲೇ ಇಲ್ಲವಾಯಿತು. ಬಹಮನೀ ರಾಜ್ಯಸ್ಥಾಪನೆ, ಮರಾಠರ ಉದಯ, ಪಾಶ್ಚಿಮಾತ್ಯ ವ್ಯಾಪಾರಿಗಳ ಸಂಘಾನ ಮೊದಲಾದ ಅನೇಕ ಘಟನೆಗಳೊಂದೊಂದಾಗಿ ಬಂದೊದಗಿ ಕರ್ಣಾಟಕ ರಾಷ್ಟ್ರದ ಐಕ್ಯತೆಗೂ, ಶಾಂತಿಗೂ, ಸಂಪದಭಿವೃದ್ಧಿಗೂ ಭಂಗವನ್ನುಂಟುಮಾಡಿತು. ಪರಸ್ಪರ ವಿರುದ್ಧ ಸಂಸ್ಕೃತಿನಾಗರಿಕತೆಗಳ ಢಿಕ್ಕಿಹೊಡೆತದಿಂದ

ಸಮಾಜವು ನಡುಗಿ ಚೇತರಿಸಿಕೊಳ್ಳಲಾರದಾಯಿತು. ಸ್ವದೇಶ, ಸ್ವಧರ್ಮ ಸಂರಕ್ಷಣಾಕಾರ್ಯದಲ್ಲೇ ಜನರು ಅಹರ್ನಿಶಿಯೂ ನಿರತ ರಾಗಬೇಕಾಗಿ ಬಂತು. ಪರರಾಯರ ಭೀತಿಗಾಗಿ, ವಿಸ್ತಾರಸಾಮ್ರಾಜ್ಯ ಧುರಂಧರತೆಗಾಗಿ, ರಾಜರು ಅಪಾರವಾದ ಸೇನೆಗಳನ್ನು ಸಾಕಬೇಕಾಯಿತು. ಪ್ರಜೆಗಳ ಸಂಪತ್ತನ್ನು ವೃದ್ಧಿಮಾಡುವ ಉದ್ಯಮಗಳಿಗೆ ಉಪಯೋಗವಾಗುತ್ತಿದ್ದ ದೇಶದ್ರವ್ಯವು ನಿರರ್ಥಕವಾದ ಸೈನ್ಯಸಂರಕ್ಷಣೆಗಾಗಿ ವ್ಯಯವಾಗುತ್ತ ಬಂತು.

ರಾಜ್ಯವಿಸ್ತಾರವಾಗುತ್ತ ಆಗುತ್ತ ರಾಜ್ಯಾಂಗ ವ್ಯವಸ್ಥಾಪಕರಿಗೆ ಪ್ರಾಂತಿಕ ಅಥವಾ ರಾಷ್ಟ್ರೀಯ ದೃಷ್ಟಿಯು ಕಡಮೆಯಾಗುತ್ತ ಬಂತು; ಪ್ರಭುಗಳಿಗೂ ಪ್ರಜೆಗಳಿಗೂ ಇದ್ದ ಸಾಮೀಪ್ಯ ಸಂಬಂಧಕ್ಕೆ ಲೋಪ ಬಂತು. ಸರಕಾರವು ಸಡಲಿತು.

ಈ ಕಾಲದಲ್ಲಿ ಒಳದೇಶ ಪರದೇಶ ವ್ಯಾಪಾರವು ಹೆಚ್ಚಿತು. ವ್ಯಾಪಾರ ಸೌಕರ್ಯಗಳೂ ಹೆಚ್ಚಿದುವು. ಆದರೆ ಪರದೇಶ ವ್ಯಾಪಾರಿಗಳ ಪ್ರಾಧಾನ್ಯವೂ, ಸಂಧಾನವೂ ಹೆಚ್ಚುತ್ತಾ ಹೆಚ್ಚುತ್ತಾ ಒಳದೇಶದ ಸಂಪತ್ತು ಕರಗುತ್ತ ಬಂತೆಂಬುದನ್ನು ಮರೆಯಬಾರದು.

ವೈದಿಕ ಧರ್ಮೋದ್ಧಾರಕ್ಕಾಗಿ ವಿದ್ಯಾರಣ್ಯ, ಸಾಯಣ, ವ್ಯಾಸತೀರ್ಥ, ತಾತಾಚಾರ್ಯ ಮೊದಲಾದ ವಿಭೂತಿಗಳುದಯಿಸಿದರು; ಗೀರ್ವಾಣಾಂಧ್ರಕರ್ಣಾಟ ವಾಙ್ಮಯೋಜ್ಜೀವನಕ್ಕಾಗಿ ಮಧುಸೂದನ ಸರಸ್ವತಿ, ಅಪ್ಪಯ ದೀಕ್ಷಿತ, ವನಮಾಲಿ ಮಿಶ್ರ, ಅಲ್ಲಸಾನಿ ಪೆದ್ದನ, ಶ್ರೀನಾಥ, ಮಧುರ, ತಿಮ್ಮಣ್ಣ, ಚಿಕ್ಕದೇವರಾಯ ಮೊದಲಾದ ಕವಿಗಳು ಹುಟ್ಟಿದರು; ಭಕ್ತಿಸಂದೇಶ ಪ್ರಚಾರಕ್ಕಾಗಿ ಪುರಂದರ, ಕನಕರಂತಹ ಕವಿಸಂತರು ಜನ್ಮಧಾರಣವನ್ನು ಮಾಡಿದರು; ಆದರೆ ಜನ ಜೀವನದಲ್ಲಿ ಹಿಂದಿನ ಸ್ವರ್ಣಯುಗದ ತಾರುಣ್ಯವಾಗಲಿ, ಉತ್ಸಾಹವಾಗಲಿ, ಕಾರ್ಯಾರಂಭಗುಣವಾಗಲಿ ಇರಲಿಲ್ಲ. ರಾಷ್ಟ್ರೀಯಭಾವನಾಸೆಲೆಯು ಬತ್ತಿ ಹೋಗಿತ್ತು. 'ವಿಜಯನಗರ ಮಾರ್ಗ'ದ ದೇವಾಲಯಗಳೂ, ಗೋಪುರಗಳೂ ರೂಪುಗೊಂಡುವು; ಕಾವ್ಯ

ನಾಟಕ, ಶಾಸ್ತ್ರಾದಿಗ್ರಂಥಗಳು ಹೊರಬಿದ್ದುವು. ಆದರೇನು ಪ್ರಯೋಜನ. ಕರ್ಣಾಟಕ ರಾಷ್ಟ್ರದಲ್ಲಿ ಹಿಂದಿನ ಪ್ರತಿಭೆಯು ಹೋಗಿತ್ತು; ಭಾವನಾಶಕ್ತಿಗಭಾವವುಂಟಾಗಿತ್ತು; ಸೌಂದರ್ಯಾನುಭವಶಕ್ತಿಯು ಮಾಯವಾಗುತ್ತಿತ್ತು; ಜನರು ಶುದ್ಧಛಾಯೋಪಜೀವಿಗಳಾಗುತ್ತಿದ್ದರು. ಹೀಗಂದಮಾತ್ರಕ್ಕೆ ಈ ಕಾಲವು ಶುದ್ಧ 'ಶುಷ್ಕಯುಗ'ವೆಂದು ನಮ್ಮ ಅಭಿಪ್ರಾಯವಲ್ಲ. ಬೇರೆಬೇರೆ ರಾಷ್ಟ್ರೀಯಾಂಗಗಳಲ್ಲಿ ಪ್ರತಿಭಾಶಾಲಿಗಳೊಬ್ಬೊಬ್ಬರು ಹುಟ್ಟದರೂ ಜಾರುಗಲ್ಲಿನ ಮೇಲುರುಳುತ್ತಿದ್ದ ಜನಾಂಗದ ಮೇಲವರು ತಮ್ಮ ವರ್ಚಸ್ಸನ್ನು ಸಂಪೂರ್ಣವಾಗಿಯೂ ಸ್ಥಿರವಾಗಿಯೂ ಹಾಕಲು ಶಕ್ತರಾಗಲಿಲ್ಲ. ಇದಕ್ಕೆ ಕಾರಣವಿದೆಂದಾಗಲಿ ಅದೆಂದಾಗಲಿ ಹೇಳಲೆತ್ನಿಸುವುದು ಹುಚ್ಚು ಕೆಲಸ. ಒಟ್ಟೇನು ಸಮಾಜದಲ್ಲಿ ಶಾಂತಿ ಸ್ಥೈರ್ಯಗಳನ್ನುಂಟುಮಾಡುವುದರಲ್ಲೂ, ಬೇರೆ ಬೇರೆ ಮತಾನುಯಾಯಿಗಳಲ್ಲೂ, ಸಾಂಸ್ಕೃತಿಕರಲ್ಲೂ ಸೌರಸ್ಯವನ್ನುಂಟುಮಾಡುವುದರಲ್ಲೂ, ರಾಷ್ಟ್ರೀಯಶಕ್ತಿಯನ್ನೆಲ್ಲ ವಿನಿಯೋಗಿಸುವುದರಲ್ಲೇ ಈ ಕಾಲವೆಲ್ಲ ಕಳೆದುಹೋಯಿತು.

---

# ಐದನೆಯ ಅಧ್ಯಾಯ

## ಹೈದರನಾಯಕನೂ ಟೀಪುಸುಲ್ತಾನನೂ

ಚಿಕ್ಕದೇವರಾಯನ ಮರಣಾನಂತರ(೧೭೦೪) ಮೈಸೂರು ಒಡೆಯರು ನಿರ್ಬಲರಾಗಿ ದಳವಾಯಿಗಳಿಗೆ ಸರ್ವಾಧಿಕಾರವನ್ನೂ ಬಿಟ್ಟುಕೊಟ್ಟರು. ದೊಡ್ಡಕೃಷ್ಣರಾಜನಂತೂ ದಳವಾಯಿ ದೇವರಾಜ ಸರ್ವಾಧಿಕಾರಿ ನಂಜರಾಜರ ಹೇಳಿಕೆಯ ಆಳಾದನಷ್ಟೆ. ಈ ನಂಜರಾಜನು ಒಮ್ಮೆ ದೇವನಹಳ್ಳಿಗೆ ಮುತ್ತಿಗೆ ಹಾಕಿರಲು ಆ ಸಮಯದಲ್ಲಿ ಮಹಮ್ಮದೀಯ ಸೈನಿಕನೊಬ್ಬನು ಇವನ ಕಣ್ಣಿಗೆ ಬಿದ್ದನು. ಕೂಡಲೇ ಆ ಯುವಕನಿಗೆ ನಂಜರಾಜನ ಆಶ್ರಯವು ಸಿಕ್ಕಿತು. ಮೈಸೂರು ಸೈನ್ಯದಲ್ಲಿ ಯುವಕನಿಗೊಂದು ಹುದ್ದೆಯೂ ಸಿಕ್ಕಿತು. ೧೭೪೯ ಸುಮಾರಿನಲ್ಲಿ ಆಂಗ್ಲೇಯರ ಮಹಮ್ಮದಾಲಿಗೂ, ಫ್ರೆಂಚರ ಚಂದಾಸಾಹೇಬನಿಗೂ ಕಲಹಾರಂಭ ವಾಯಿತಷ್ಟೆ. ಆಗ ನಂಜರಾಜನು ಮೈಸೂರು ಸೈನ್ಯದೊಂದಿಗೆ ಚಂದಾಸಾಹೇಬನ ಸಹಾಯಕ್ಕಾಗಿ ಹೋದನು. ಆಗ ಆ ಮಹಮ್ಮದೀಯ ಯುವಕನೂ ಹೋಗಿ ಯುದ್ಧದಲ್ಲಿ ಮೈಸೂರಿಗೆ ಕೀರ್ತಿಯನ್ನು ತಂದನು. ಅವನೇ ಹೈದರನು.

**ಹೈದರನ ಪೂರ್ವೋತ್ತರ:**—ಹೈದರನ ತಾತ ಮುತ್ತಾತಂದಿರು ಪಂಜಾಬಿನಿಂದ ಬಂದು, ಗುಲ್ಬರ್ಗದೊಳಗೆ ಕೆಲಕಾಲವಿದ್ದು, ಅನಂತರ ಶೀರ್ಯದ ನವಾಬರಲ್ಲಿ ಉದ್ಯೋಗದಲ್ಲಿದ್ದು, ಕಡೆಗೆ ಕೋಲಾರವನ್ನು ಸೇರಿದರು. ಮಹಮ್ಮದಾಲಿಯು ಕಾಲವಾಗಲು ಅವನ ಹೆಂಡಿರು ಮಕ್ಕಳನ್ನು ಕಂಡು, ಕನಿಕರ ಪಟ್ಟು, ಕೋಲಾರದನಾಯಕನು ಫತ್ತೇಮಹಮ್ಮದನಿಗೊಂದು ಉದ್ಯೋಗವನ್ನು ಕೊಟ್ಟನು. ಕ್ರಮೇಣ ಇವನು ತನ್ನ ಸ್ವಶಕ್ತಿಯಿಂದ ಕೋಲಾರಕ್ಕೆ ಫೌಜುದಾರನಾದನು. ಬೂದೀಕೋಟೆಯು ಇವನಿಗೆ ಜಹಗೀರಾಗಿ ದೊರೆಯಿತು. ಇವನಿಗಿಬ್ಬರು ಮಕ್ಕಳಾದರು. ಕಿರಿಯವನೇ ಹೈದರನು. ಇವನು ೧೭೨೨ ರಲ್ಲಿ ಹುಟ್ಟಿದನು. ಹೈದರನು

೭-೮ ವರ್ಷದ ಬಾಲಕನಾಗಿರುವಾಗಲೇ ತಂದೆಯು ಕಾಲವಾದನು. ತಾಯಿಯು ಬಾಲಕರಾದ ಷಹಬಜ್ ಮತ್ತು ಹೈದರರನ್ನು ಕಟ್ಟಿಕೊಂಡು ಕಡುಕಷ್ಟಪಟ್ಟಳು. ಅನಂತರ ಸೋದರಮಾವನ ಪೋಷಣೆಗೊಳಗಾಗಿ ಷಹಬಜ್ ಹೈದರರಿಬ್ಬರೂ ಗರಿಕಟ್ಟಿಕೊಂಡರು. ಅನಂತರ ಮೈಸೂರು ಸೈನ್ಯದಲ್ಲಿ ಸೇರಿದರು. ಈ ಮೈಸೂರು ಸೈನ್ಯವು ದೇವನಹಳ್ಳಿಯನ್ನು ಮುತ್ತಿದ ಕಾಲದಲ್ಲಿ ಹೈದರನು ನಂಜರಾಜನ ದೃಕ್ಪಥಕ್ಕೆ ಬಿದ್ದನೆಂದು ಆಗಲೇ ತಿಳಿದೆವು.

**ಹೈದರನ ರಾಜ್ಯಾಪಹಾರ**:—ನಂಜರಾಜನ ಪ್ರೋತ್ಸಾಹದಿಂದ ಹೈದರನು ಮುಂದಕ್ಕೆ ಬಂದನು. ನಂಜರಾಜನು ಕೈಗೊಂಡಿದ್ದ ಯುದ್ಧ ಪ್ರಸಂಗಗಳಲ್ಲಿ ಹೈದರನಿಗೆ ಒಳ್ಳೆ ಶಿಕ್ಷಣವು ಸಿಕ್ಕಿತು. ಶೂರನಾದ ಇವನಿಗೆ ಸೇನಾನಾಯಕತ್ವವೂ ಬೇಗ ದೊರೆಯಿತು. ಇವನು ನಂಜರಾಜನ ಬಲಗೈಯಾದನು. ಅಕ್ಷರಜ್ಞನಲ್ಲವಾದರೂ ಇವನು ಪ್ರತಿಭಾಶಾಲಿ; ಶೂರ. ಮೈಸೂರು ಅರಸರಿಗೂ, ದಳವಾಯಿಗಳಿಗೂ ವೃದ್ಧಿಯಾಗುತ್ತಿದ್ದ ವೈಷಮ್ಯಗಳನ್ನೆಲ್ಲ ವಿಭಜಿಸಿ ಕಕ್ಷಿಗಳ ಬಲಾಬಲಗಳನ್ನು ಗುಣಿಸುತ್ತಿದನು. ಚಿಕ್ಕ ಕೃಷ್ಣರಾಜನು ದಳವಾಯಿಗಳ ದರ್ಪವನ್ನಡಿಗಿಸಿ, ರಾಜ್ಯಾಧಿಕಾರದಲ್ಲಿ ಪೂರ್ಣಸ್ವಾತಂತ್ರ್ಯವನ್ನು ಸಂಪಾದಿಸಬೇಕೆಂದು ಯೋಚಿಸಿದನು. ಈ ಸಂದರ್ಭದಲ್ಲಿ ಅಣ್ಣತಮ್ಮಂದಿರಾದ ದಳವಾಯಿ ದೇವರಾಜ, ಸರ್ವಾಧಿಕಾರಿ ನಂಜರಾಜರಿಗೆ ಪರಸ್ಪರ ಕಲಹವುಂಟಾಯಿತು. ಇದೇ ಸಮಯವೆಂದೆಣಿಸಿ ಹೈದರನ ಬಲವನ್ನು ಗಣಿಸಿ, ಚಿಕ್ಕದೇವರಾಯನು ನಂಜರಾಜನನ್ನು ಅಡಗಿಸಲು ಹೈದರನ ಸಹಾಯವನ್ನು ಕೋರಿದನು. ಮಹಾತಂತ್ರಿಯಾದ ಹೈದರನು, ತನ್ನೊಡೆಯನೆಂದೆಣಿಸದೆ ನಂಜರಾಜನನ್ನೋಡಿಸಿ, ಅವನ ಸ್ಥಾನವನ್ನು ತಾನಾಕ್ರಮಿಸಿದನು. ಚಿಕ್ಕ ಕೃಷ್ಣದೇವರಾಯನು ಹೈದರನ ಯುಕ್ತಿಯನ್ನೂ, ಮೋಸವನ್ನೂ ಕೂಡ ಬೇಗ ಅರಿತನು. ೧೭೫೮ ರಲ್ಲಿ ಮರಾಠರು ಮೈಸೂರನ್ನು ಪ್ರವೇಶಿಸಲು ಹೈದರನು ಕೂಡಲೇ ಅವರ ಮೇಲೆ ದಾಳಿಹೊರಟು, ಅವರೊಂದಿಗೆ

ಸಂಧಿಯನ್ನು ಮಾಡಿಕೊಂಡು ಬಂದು, ಮೈಸೂರಿಗೆ ಬಂದ ವಿಪತ್ತನ್ನು ಪರಿಹರಿಸಿದನು. ಈ ಸೇವೆಗಾಗಿ ಚಿಕ್ಕಕೃಷ್ಣರಾಜನು ಹೈದರನಿಗೆ 'ಹೈದರ ಬಹದ್ದೂರ್' ಎಂಬ ಹೆಸರನ್ನು ಕೊಟ್ಟನು. ಹೈದರನು ದಿನದಿನವೂ ಕೃಷ್ಣರಾಯನಿಗೆ ಬಲೆಯನ್ನು ಬೀಸುತ್ತಿದ್ದನು. ತಾನಾಗಿ ತಾನೇ ಕೃಷ್ಣರಾಯನು ಕೊರಳಿಗುರುಳನ್ನು ಹಾಕಿಕ್ಕೊಂಡಂತಾಯಿತು. ಒಂದೆರಡು ಸಾರಿ ಹೈದರನನ್ನು ಎದುರಿಸಿದನು. ಪ್ರಜ್ಞಾಬಲವೂ, ಸೈನ್ಯಬಲವೂ ಎರಡೂ ಇದ್ದ ಹೈದರನು ಹೆಸರಿಗೆ ರಾಜರನ್ನು ಗದ್ದುಗೆಯ ಮೇಲಿರಿಸಿ ಸರ್ವಾಧಿಕಾರವನ್ನೂ ತಾನೇ ವಹಿಸಿದನು.

ಹೈದರನ ನಡತೆಯು ಪ್ರಜೆಗಳಿಗೆ ಹಿತವಾಗಿ ಕಾಣಬರಲಿಲ್ಲ. ರಾಜನ ಕಷ್ಟವು ಹೆಚ್ಚಿದ ಹಾಗೆಲ್ಲ ಪ್ರಜೆಗಳಿಗೆ ಹೈದರನ ಮೇಲೆ ದ್ವೇಷವು ಹೆಚ್ಚಿತು. ಹೈದರನ ಹಾವಳಿಯಿಂದ ತಪ್ಪಿಸಿಕ್ಕೊಳ್ಳಲು ಕೃಷ್ಣರಾಯನು ಮತ್ತೆ ನಂಜರಾಜನ ಸಹಾಯವನ್ನೇ ಕೇಳಿದನು. ಹೈದರನ ಆಪ್ತಮಂತ್ರಿಯಾಗಿದ್ದ ಖಂಡೇರಾಯನೂ ರಾಜಪಕ್ಷವನ್ನು ವಹಿಸಿದನು. ಮರಾಠರ ಸಹಾಯವನ್ನೂ ಕೋರಿದನು. ರಾಜಪಕ್ಷದವರೆಲ್ಲರೂ ಒಂದಾಗಿ ೧೭೬೦ ಸುಮಾರಿನಲ್ಲಿ ಹೈದರನ ಮೇಲೆ ಬಿದ್ದರು. ಪ್ರಾಣಭಯದಿಂದ, ಶ್ರೀರಂಗಪಟ್ಟಣದಲ್ಲಿ ಹೆಂಡಿರು ಮಕ್ಕಳನ್ನು ಬಿಟ್ಟು ಹೈದರನು ಓಡಿಹೋಗಬೇಕಾಯಿತು. ಆದರೇನು, ಕೂಡಲೇ ಸೈನ್ಯಸಮೇತನಾಗಿ ಬಂದು, ಶ್ರೀರಂಗಪಟ್ಟಣವನ್ನಾಕ್ರಮಿಸಿ, ತನ್ನ ದ್ವೇಷಿಗಳೆಲ್ಲರನ್ನು ಶಿಕ್ಷಿಸಿ, ರಾಜಮನೆತನದವರನ್ನು ಪದ್ದಿನಲ್ಲಿಟ್ಟು ೧೭೬೧ರಲ್ಲಿ ಸಂಪೂರ್ಣ ರಾಜ್ಯಾಡಳಿತಸ್ವಾತಂತ್ರ್ಯವನ್ನು ವಹಿಸಿದನು.

**ದಕ್ಷಿಣದೇಶದ ಸ್ಥಿತಿ:**—ಔರಂಗಜೇಬನ ಮರಣಾನಂತರ ಮೊಗಲಸಾಮ್ರಾಜ್ಯವು ಸಡಲಿತು. ದಕ್ಷಿಣದಲ್ಲಿ ಮರಾಟರೂ ಬಹಳ ಪ್ರಬಲರಾದರು. ನಿಜಾಮನು ಸ್ವತಂತ್ರನಾದನು. ಇವರಿಬ್ಬರನ್ನು ಬಿಟ್ಟರೆ ಆರ್ಕಾಟಿನ ನವಾಬನೇ ಮೂರನೆಯವನು. ಇವರಲ್ಲಿಯೆ ನಿಜಾ

ಮುಸಿಗೆ ಸಾಮಂತರೆನಿಸಿದ ಕಡಪ, ಕರ್ನೂಲು, ಸವಣೂರುಗಳಲ್ಲಿ ಪಠಾಣ ಸುಲ್ತಾನರೂ, ಗುತ್ತಿಯಲ್ಲಿ ಮರಾಠಾ ಮುರಾರಿರಾವ ಘೋರ ಪಡೆಯು ಆಳುತ್ತಿದ್ದರು. ಫ್ರೆಂಚರೂ ಇಂಗ್ಲೀಷರೂ ಕೂಡ ದಕ್ಷಿಣದೇಶದ ರಾಜಕೀಯ ವ್ಯವಹಾರಗಳಲ್ಲಿ ಅತ್ಯಂತ ಕುತೂಹಲವನ್ನು ತೋರಿಸಲು ಮೊದಲಿಟ್ಟರು. ಅಂದರೆ ದಕ್ಷಿಣದೇಶದಲ್ಲಿ ಸಾಮ್ರಾಜ್ಯಸ್ಥಾಪನೆಗಾಗಿ ಮುಹಮ್ಮದೀಯರೂ (ನಿಜಾಂ ಮತ್ತು ಹೈದರ್) ಮರಾಠರೂ, ಐರೋಪ್ಯರೂ (ಇಂಗ್ಲೀಷರೂ ಫ್ರೆಂಚರು) ತಮ್ಮ ತಮ್ಮ ಶಕ್ತಿಯುಕ್ತಿಗಳೆಲ್ಲವನ್ನೂ ತೋರಿಸುತ್ತಿದ್ದರು. ಸಹಜವಾಗಿ ಇವರಲ್ಲಿ ಪರಸ್ಪರ ದ್ವೇಷಾಸೂಯೆಗಳು ಹೆಚ್ಚಿದುವು. ಪಾಣಿಪಟ್ಟಿನಲ್ಲಿ ಪರಾಭವವುಂಟಾಗದಿದ್ದಲ್ಲಿ ಮರಾಠರು ಹಿಂದೂ ಸಾಮ್ರಾಜ್ಯವನ್ನು ಸಂದೇಹವಿಲ್ಲದೆ ಸ್ಥಾಪಿಸುತ್ತಿದ್ದರು. ಮರಾಠಾಮುಹಮ್ಮದೀಯಾಸ್ಥಾನಗಳಲ್ಲಿ ಅಂತಃಕಲಹಗಳಿಲ್ಲದಿದ್ದಲ್ಲಿ ಪರಕೀಯರ ಪ್ರವೇಶಕ್ಕೆ ಅವಕಾಶವೇ ಇರುತ್ತಿರಲಿಲ್ಲ.

**ಇಂಗ್ಲೀಷರೂ ಫ್ರೆಂಚರೂ**:—ವ್ಯಾಪಾರಕ್ಕಾಗಿ ಬಂದ ಈ ಸಾಯಿಗಳಲ್ಲಿ ಫ್ರೆಂಚರು ಇಂಗ್ಲಿಷರೇ ಬಲವಾಗಿ ಬೇರೂರಿ ಈ ದೇಶದಲ್ಲಿ ನಿಂತದ್ದು. ಇವರು ಕ್ರಮೇಣ ದೇಶೀಯ ಅರಸರ ಅಂತಃಕಲಹಗಳಲ್ಲಿ ತಲೆಹಾಕಿ ಒಬ್ಬರಮೇಲೊಬ್ಬರನ್ನು ಹಾಕುವುದಕ್ಕೆ ಮೊದಲಿಟ್ಟರು. ಮೊಗಲಸಾಮ್ರಾಜ್ಯ ಪತನಾನಂತರ ಇಂಗ್ಲೀಷರು ಉತ್ತರ ಹಿಂದೂಸ್ಥಾನದಲ್ಲಿ (ಬಂಗಾಳ) ರಾಜ್ಯಾಡಳಿತಕ್ಕೆ ಮೊದಲಿಟ್ಟರು. ಫ್ರೆಂಚರು ಈ ಕೆಲಸದಲ್ಲಿ ಅಜಾಗರೂಕರಾಗಿರಲಿಲ್ಲ. ಈ ಕಾರಣದಿಂದಲೇ ಇಂಗ್ಲೀಷರೂ ಫ್ರೆಂಚರೂ ಸದಾ ಪ್ರತಿಕಕ್ಷಿಗಳಾಗಿ ಹೋರಾಡುತ್ತಿದ್ದರು. ಹಿಂದೂಸ್ಥಾನದಲ್ಲಿ ಮಾತ್ರವೇ ಅಲ್ಲ; ಯೂರೋಪು ಅಮೇರಿಕಾಗಳಲ್ಲಿ ಇವರೀರ್ವರಿಗೂ ಯುದ್ಧಕ್ಕೆ ಮೊದಲಾಯಿತು. ಇದಕ್ಕೆ 'ಸಪ್ತವಾರ್ಷಿಕ ಯುದ್ಧ'ವೆಂದು ಹೆಸರು. ಕಡೆಗೆ ಕ್ರಿ. ೧೭೬೩ ರಲ್ಲಿ ಉಭಯತ್ರರಿಗೂ ಸಂಧಿಯಾಗಿ ಸಮಾಧಾನವುಂಟಾಯಿತು. ಆದರೇನು? ಹಿಂದೂಸ್ಥಾನದಲ್ಲಿ ಫ್ರೆಂಚರು ರಾಜ್ಯಸ್ಥಾಪನೆ ಮಾಡುವ ಸಂಭವವೂ ಸನ್ನಿವೇಶವೂ ಇಲ್ಲವಾಯಿತು. ಪ್ಯಾರಿಸ್ಸಿನ ಸರಕಾರ

ದಿಂದಿವರಿಗೆ ಲೇಶವು ಸಹಾಯವೂ ಪ್ರೋತ್ಸಾಹವೂ ಇಲ್ಲವಾಯಿತು. ಇಂಗ್ಲೀಷರಿಗೆ ಅನುಕೂಲವಾಯಿತು. ಇಂಗ್ಲೀಷರು ಮರಾಠರ ಬಲವನ್ನು ಚನ್ನಾಗಿ ತಿಳಿದಿದ್ದರು. ಆದಕಾರಣ ಹೈದರನಿಂದಲೇ ಅವರನ್ನು ಮೂಲೆಗೊತ್ತರಿಸಿ ತರುವಾಯ ಹೈದರನನ್ನು ಮಟ್ಟಹಾಕ ಬೇಕೆಂದು ನಿಶ್ಚಯಿಸಿದರು. ಪಶ್ಚಿಮಸಮುದ್ರತೀರಕ್ಕೆಲ್ಲ ಒಡೆಯ ನಾಗಿದ್ದ ಹೈದರನ ಮೇಲೆ ಇಂಗ್ಲೀಷರಿಗೆ ಕಣ್ಣಿದ್ದೇ ಇತ್ತು. ಅಲ್ಲದೆ ಹೈದರನಿಗೂ ಫ್ರೆಂಚರಿಗೂ ಮೈತ್ರಿಯಿದ್ದುದು ಮತ್ತೂ ದ್ವೇಷಕ್ಕೆ ಕಾರಣವಾಯಿತು.

**ಹೈದರನ ರಾಜ್ಯವಿಸ್ತಾರ** :—ಹೈದರನು ಮೈಸೂರಿನ ಸರ್ವಾಧಿಕಾರವನ್ನು ವಹಿಸುವ ಕಾಲಕ್ಕೆ ಸರಿಯಾಗಿ, ದಕ್ಷಿಣದೇಶದ ರಾಜಕೀಯ ಸ್ಥಿತಿಯೂ ಇವನ ರಾಜ್ಯವಿಸ್ತಾರಕ್ಕೆ ಬಹಳ ಅನುಕೂಲವಾಗಿತ್ತು. ಪಾಣಿಪಟ್ಟಿನ (೧೭೬೧) ತರುವಾಯ ಮರಾಠರಲ್ಲಿ ಒಕ್ಕಟ್ಟಿನ ಬಲವು ತಪ್ಪಿತು. ಹೈದರಾಬಾದು ಆರ್ಕಾಟು ಆಸ್ಥಾನಗಳಲ್ಲಿ ಅವ್ಯವಸ್ಥೆಗಾರಂಭವಾಯಿತು. ಆಗ ಹೈದರನು ರಾಜ್ಯವಿಸ್ತರಣ ಕಾರ್ಯಕ್ಕೆ ಅನುವಾದನು. ೧೭೬೨ ರಲ್ಲಿ ಶಿರ್ರ್ಯವನ್ನು ಹಿಡಿದನು. ಬಸಲತ್ ಜಂಗನಿವನನ್ನು ಶಿರ್ರ್ಯದ ನವಾಬನನ್ನಾಗಿ ಮಾಡಿ ಹೈದರನಿಂದ ಕಪ್ಪವನ್ನು ಪಡೆಯಲು ಒಪ್ಪಿದನು. ಹೈದರನು ಶಿರ್ರ್ಯಕ್ಕೆ ನವಾಬನಾದನೆಂದರೆ ಮೈಸೂರು ರಾಜ್ಯವು ತುಂಗಭದ್ರೆಯನ್ನು ಮೀರಿ ಉತ್ತರಕ್ಕೆ ಹೋಯಿತೆಂದು ಅರ್ಥ. ೧೭೬೩ ರಲ್ಲಿ ಬಿದನೂರು ರಾಜ್ಯದಲ್ಲಿ ಅನಾಯಕವುಂಟಾಗಿರಲು ಚನ್ನಬಸವನೆಂಬೊಬ್ಬ ರಾಜ್ಯಾಭಿಯೋಗಿಯನ್ನು ಮುಂದಾಳಾಗಿಟ್ಟುಕೊಂಡು ಹೈದರನು ಸೈನ್ಯಸಮೇತನಾಗಿ ಹೋಗಿ ರಾಣಿ ವೀರಮ್ಮಾಜಿಯನ್ನೋಡಿಸಿ, ಬಿದನೂರನ್ನು ಆಕ್ರಮಿಸಿದನು. ಅಪಾರವಾದ ಐಶ್ವರ್ಯವು ಇವನ ವಶವಾಯಿತು. ಓಡಿ ಹೋದ ರಾಣಿಯು ಬಳ್ಳಾಳರಾಯನ ದುರ್ಗವನ್ನು ಸೇರಿದಳು. ಹೈದರನು ಬಸವರಾಜದುರ್ಗ, ಹೊನ್ನಾವರ, ಮಂಗಳೂರು, ಬಳ್ಳಾಳರಾಯನ ದುರ್ಗಗಳನ್ನು ವಶಪಡಿಸಿಕೊಂಡನು. ಹೈದರನು ತನ್ನ ರಾಜಧಾನಿಯನ್ನು ಶ್ರೀರಂಗಪಟ್ಟಣದಿಂದ ಬಿದನೂರಿಗೆ ಬದಲಾಯಿಸಬೇಕೆಂದು

ಎಲ್ಲ ಪ್ರಯತ್ನಗಳನ್ನೂ ಮಾಡಿದನು. ಅರಮನೆ ಕಟ್ಟಲು ಆರಂಭ ವಾಯಿತು. ಟಂಕಸಾಲೆಯು ಸ್ಥಾಪನೆಯಾಯಿತು. ಹೈದರ್‌ನಗರ ವೆಂದು ಊರಿಗೆ ಹೆಸರಿಟ್ಟನು. ಜಲದುರ್ಗಗಳನ್ನು ಬಲಪಡಿಸಿಕೊಳ್ಳಬೇಕೆಂಬ ದೂರಾಲೋಚನೆಯಿಂದ ಪಶ್ಚಿಮತೀರದಲ್ಲ ನೌಕಾ ಕೋಠಿಯನ್ನೂ (dock-yard) ರಣ ನೌಕಾ ಕ್ಷೇತ್ರವನ್ನೂ (Naval-base) ಕಟ್ಟಿಸಿ, ಆ ಖಾತೆಗೆ ಲತೀಫ್‌ಆಲಿಬೇಗಂ ಎಂಬ ಯಂತ್ರವಾಹಕ(Engineer)ನನ್ನೂ ನೇಮಿಸಿದನು. ಆದರೆ ಅನಾರೋಗ್ಯದ ದೆಸೆಯಿಂದ ಬಿದನೂರನ್ನು ರಾಜನಗರಿ ಮಾಡುವ ಯೋಚನೆಯನ್ನು ಬಿಡಬೇಕಾಯಿತು.

ಹೈದರನು ಉತ್ತರಕ್ಕೆ ಹೋಗುತ್ತಾ ಹೋಗುತ್ತಾ ಸವಣೂರಿನ ನವಾಬನನ್ನು ಎದುರಿಸಲು, ನವಾಬ ಅಬ್ದುಲ್ ಹಕೀಮನು ಹೈದರನಿಗೆ ಸೋತು, ಅವನಿಗೆ ೨ ಲಕ್ಷ ದ್ರವ್ಯವನ್ನು ಕಪ್ಪಕೊಡಲು ಒಪ್ಪಿದನು. ಆಗಲೇ ಧಾರವಾಡದ ಕೋಟೆಯೂ ಹೈದರನ ವಶವಾಯಿತು.

೧೭೬೬ ಸುಮಾರಿನಲ್ಲಿ ನಗರ ಪ್ರಾಂತ್ಯದಲ್ಲಿ ಗುಲ್ಲೆದ್ದಿತು. ತಕ್ಷಣ ಹೈದರನು ದಂಗೇಕೋರರನ್ನು ಕ್ರೂರವಾಗಿ ಶಿಕ್ಷಿಸಿ ತನ್ನಧಿಕಾರವನ್ನು ಸ್ಥಿರಪಡಿಸಿಕ್ಕೊಂಡನು. ಅನಂತರ ಕೇರಳ ಪ್ರಾಂತ್ಯವನ್ನು ಪ್ರವೇಶಿಸಿದನು. ಮಾಪಿಲ್ಲಾನಾಯಕನಾದ ಆಲಿರಾಜನು ಇವನಿಗೆ ಸಹಾಯಕನಾದನು. ಇವರಿಬ್ಬರೂ ಸೇರಿ ಕೇರಳವನ್ನಾಕ್ರಮಿಸಲು ಮೊದಲಿಟ್ಟರು. ಕ್ಯಾಲಿಕಟ್ಟಿನ ಜಾಮೋರಿನ್ನನಾದ ಮಾನವಿಕ್ರಮರಾಜನು ತನ್ನ ದೇಶ ಸಂರಕ್ಷಣೆಯಲ್ಲಿ ಪ್ರಾಣಗಳನ್ನರ್ಪಿಸಿದನು. ಕೂಡಲೇ, ಕೊಚ್ಚಿನ್ ಮತ್ತು ಪಾಲಘಾಟರಾಜರು ಹೈದರನಿಗೆ ಶರಣಾಗತರಾದರು. ಕೊಂಚ ಕಾಲದಲ್ಲೇ ಮಲಬಾರಿನಲ್ಲೂ ದಂಗೆಯುಂಟಾಯಿತು. ಕೂಡಲೇ ಹೈದರನು ಪಿತೂರೀ ಮುಖಂಡರೆಲ್ಲರನ್ನೂ ಅಡಗಿಸಿ ಕೊಯಮುತ್ತೂರಿಗೆ ಹಿಂದಿರುಗಿದನು.

**ಹೈದರನೂ ಮರಾಠರೂ** :—ಹೈದರನ ರಾಜ್ಯವಿಸ್ತಾರ ಪ್ರಸಂಗವು ಮರಾಠರಿಗೂ, ನಿಜಾಮನಿಗೂ ಕಣ್ಣುಕೆಂಪಗೆ ಮಾಡಿತು.

ಸೀರ್ಯ, ಸವಣೂರುಗಳ ಆಕ್ರಮಣದಿಂದ ಹೈದರನಿಗೂ ಮರಾಠ ರಿಗೂ ಕಲಹಕ್ಕೆ ಅಂಕುರವಾಯಿತು. ಹೈದರನಿಗಿದು ಚನ್ನಾಗಿ ಗೊತ್ತಿತ್ತು. ಆದ್ದರಿಂದಲೇ ಯುಕ್ತಿಚತುರನಾದ ಹೈದರನು ಪೇಷ್ವೆ ಯ ಆಸ್ಥಾನಕ್ಕೂ ಬಸಲತನ ಆಸ್ಥಾನಕ್ಕೂ, ಅಮೌಲ್ಯವಾದಾಭರಣ ಗಳೊಂದಿಗೆ, ಸ್ನೇಹಾಪೇಕ್ಷೆಯಿಂದ ರಾಯಭಾರಿಗಳನ್ನು ಕಳುಹಿಸಿ ದನು. ಬಸಲತ್ತನಿಗೀ ರಾಯಭಾರದ ಒಳಗುಟ್ಟು ತಿಳಿಯಲಿಲ್ಲವಾಗಿ ಹೈದರನ ವಸ್ತ್ರಾಭರಣಗಳಿಂದಲೂ, ಕುಶಲಪತ್ರಿಕೆಗಳಿಂದಲೂ ಮಹ ದಾನಂದ ಹೊಂದಿದನು. ಆದರೆ ಮಾಧವರಾಯನಿಗೆ ಈ ರಾಯಭಾರ ದಿಂದ ಮಹದಾಗ್ರಹವುಂಟಾಯಿತು. ಯುದ್ಧೋಪಕ್ರಮವೂ ಆಯಿತು. ಹೈದರನೂ ಫಜುಲ್‌ಉಲ್ಲನು ಒಂದಾಗಿ ಸೈನ್ಯಸಮೇತರಾಗಿ ರೆಟ್ಟ ಹಳ್ಳಿಯ ಬಳಿ ಠಾಣೆಯನ್ನು ಹಾಕಿದಿರು. ನಡೆದ ಯುದ್ಧದಲ್ಲಿ ಮರಾ ಠರು ಹೈದರನನ್ನು ಸೋಲಿಸಿದರು. ಹೈದರನೂ ಮಾಧವರಾಯನೂ ಹಲಕಾಲ ಅಲ್ಲಲ್ಲಿ ಹೋರಾಡಿದರು. ಮರಾಠರೊಂದಿಗೆ ಶತ್ರುತ್ವವು ಒಳ್ಳೆಯದಲ್ಲವೆಂದು ತಿಳಿದು ಹೈದರನು ಮುರಾರಿರಾಯನಿಂದ ಅಪ ಹರಿಸಿದ್ದ ರಾಜ್ಯವೆಲ್ಲವನ್ನು ಬಿಟ್ಟುಕೊಡುವುದಾಗಿಯೂ, ಸವಣೂರು ನವಾಬನಿಗೆ ಸ್ವಾತಂತ್ರ್ಯವನ್ನು ಕೊಡುವುದಾಗಿಯೂ, ಯುದ್ಧದ ವೆಚ್ಚ ಕ್ಕಾಗಿ ೩೦ ಲಕ್ಷ ದ್ರವ್ಯವನ್ನು ಕೊಡುವುದಾಗಿಯೂ, ಒಪ್ಪಿಕೊಂಡನು. ಮರಾಠರು ಹೈದರನನ್ನು ಸೀರ್ಯದ ನವಾಬನೆಂದು ಒಪ್ಪಿದರು. ಅಂತೂ ೧೭೬೫ ರಲ್ಲಿ ಸಂಧಿಯಾಯಿತು. ಆದರೇನು? ಉಭಯತ್ರರ ಹೃದಯ ಗಳಲ್ಲಿ ದ್ವೇಷವು ವೃದ್ಧಿಯಾಗುತ್ತಲೇ ಇತ್ತು.

**ಇಂಗ್ಲೀಷರೂ ಹೈದರನೂ** :—ಆಗ ತಾನೇ ಮರಾಠರಿಂದ ಪೆಟ್ಟುತಿಂದ ಹೈದರನು ಮತ್ತಾರನ್ನೂ ಎದುರಿಸಲು ಶಕ್ತನಲ್ಲನೆಂದೂ ಅವನನ್ನು ತುಳಿದು, ಸಂಪತ್ಸಮೃದ್ಧಿಯಾದ ಬಾರಾಮಹಾಲ್ ಜಿಲ್ಲೆ ಯನ್ನು ಅವನಿಂದ ಪಡೆಯಬೇಕೆಂದೂ ಪಶ್ಚಿಮತೀರದ ರೇವುಪಟ್ಟಣ ಗಳನ್ನು ತಮ್ಮ ವಶದಲ್ಲಿಟ್ಟುಕೊಳ್ಳಬೇಕೆಂದೂ ಯೋಚಿಸಿ, ನಿಜಾಮ ನೊಂದಿಗೆ ರಹಸ್ಯವಾಗಿ ಸ್ನೇಹವನ್ನು ಬೆಳೆಸಿ, ಇಂಗ್ಲೀಷರು ೧೭೬೭ ರಲ್ಲಿ ಹೈದರನಮೇಲೆ ಬಿದ್ದರು. ಅಕಸ್ಮಾತ್ತಾಗಿ ಇಂಗ್ಲೀಷರು ಬಾರಾ

ಮಹಾಲನ್ನು ಪ್ರವೇಶಿಸಲು ಕಾರಣವೇ ಇರಲಿಲ್ಲ. ಏಕಕಾಲದಲ್ಲಿ ಉತ್ತರದಲ್ಲಿ ನಿಜಾಮಸೈನ್ಯವೂ, ಪೂರ್ವದಲ್ಲಿ ಇಂಗ್ಲೀಷರ ಸೈನ್ಯವೂ ಮೈಸೂರು ರಾಜ್ಯವನ್ನು ಪ್ರವೇಶಿಸಿತು. ಮೈಸೂರಿನ ಪಶ್ಚಿಮತೀರದ ರೇವುಪಟ್ಟಣಗಳನ್ನು ಹಿಡಿಯುಲು ಮುಂಬಯಿಯಿಂದ ಇಂಗ್ಲೀಷರ ನೌಕಾಸೈನ್ಯವೊಂದು ಬಂತು. ಇಂಗ್ಲೀಷರು ಸೇಲಂ, ಈರೋಡು, ಕೊಯಮುತ್ತೂರು, ದಿಂಡಿಗಲ್ಲು, ಕೃಷ್ಣಗಿರಿ, ಮುಳಬಾಗಲು, ಕೋಲಾರ, ಹೊಸೂರು, ಹೊಸಕೋಟೆಗಳನ್ನು ಹಿಡಿದರು. ಇಷ್ಟೇ ಅಲ್ಲದೆ ಮರಾಠರೊಂದಿಗೆ ಒಳ ಸಂಚನ್ನು ನಡಿಸಿ ಗುತ್ತಿ ಮುರಾರಿರಾಯನ ಸಹಾಯವನ್ನೂ ಪಡೆದರು. ಶತ್ರುತ್ರಯದೊಂದಿಗೂ ಹೋರಾಡುವುದು ಹುಚ್ಚು ಕೆಲಸವೆಂದರಿತು ಹೈದರನು ಇಂಗ್ಲೀಷರೊಂದಿಗೆ ಸಂಧಿಗೊಪ್ಪಿ, ಬಾರಾಮಹಾಲು ಜಿಲ್ಲೆಯನ್ನು, ೧೦ ಲಕ್ಷ ದ್ರವ್ಯವನ್ನು ಕೊಡಲನುವಾದನು. ಆದರಿದು ಇಂಗ್ಲೀಷರಿಗೆ ಸಾಕಾಗಲಿಲ್ಲ. ಹೈದರನಿಗೆ ರೋಷಬಂತು. ಮರಾಠರು ಮತ್ತೆ ಮೈಸೂರನ್ನು ಪ್ರವೇಶಿಸುವಹಾಗೆ ಕಾಣಬಂತು. ಕೂಡಲೇ ಅವರೊಂದಿಗೆ ಸಮಾಧಾನ ಮಾಡಿಕೊಂಡು, ಧೈರ್ಯದಿಂದ ಸುತ್ತಮುತ್ತಲು ಇಂಗ್ಲೀಷರಮೇಲೆ ಬಿದ್ದನು. ಫಜಲ್‌ಉಲ್ಲಾಖಾನನು ಒಂದು ಕಡೆಗೂ, ತಾನೊಂದು ಕಡೆಗೂ ಹೊರಟು ಕೊಯಮುತ್ತೂರು, ಈರೋಡು, ಕಾವೇರಿ ಪಟ್ಟಣಂ, ಮಧುರಾ, ತಿನ್ನವೆಲ್ಲಿಗಳನ್ನಾಕ್ರಮಿಸಿದರು. ಹೈದರನು ತಂಜಾವೂರು ರಾಜನನ್ನು ಹೆದರಿಸಿ ೪ ಲಕ್ಷ ದ್ರವ್ಯವನ್ನು ತೆಗೆದುಕೊಂಡು, ಅಪಾರವಾದ ಸೈನ್ಯದೊಂದಿಗೆ ಕಡಲೂರನ್ನು ಸೇರಿದನು. ಕೂಡಲೇ ಮಿಂಚಿನಂತೆ ಮದರಾಸನ್ನು ಸಮೀಪಿಸಿದನು. ಇಂಗ್ಲೀಷರು ಭಯಭ್ರಾಂತರಾಗಿ ಹೈದರನು ಹೇಳಿದಂತೆ ಕರಾರಿಗೆ ಒಪ್ಪಿದರು. ಹೈದರನ ಕೈಬಲದ ಸವಿಯನ್ನರಿತ ಇಂಗ್ಲೀಷರು, ಹೈದರನನ್ನು ರಾಜನೆಂದೆಣಿಸಿದರು; ಯುದ್ಧಕ್ಕೆ ಮೊದಲಿದ್ದ ಹಾಗೆ ಅವರವರ ರಾಜ್ಯಗಳಿರತಕ್ಕದೆಂದು ಒಪ್ಪಿದರು. ಶತ್ರುಭಯವುಂಟಾದಾಗ ಪರಸ್ಪರ ಸಹಾಯ ಮಾಡಬೇಕೆಂದೂ ನಿಶ್ಚಯಿಸಿದರು. ಅಂತೂ ಮೊಟ್ಟಮೊದಲಿನ ಆಂಗ್ಲೇಯ ಪ್ರಯತ್ನವು ಸೋಲಿನಲ್ಲಿ ಕೊನೆಗಂಡಿತು.

೧೭೬೯ ರಲ್ಲಿ ಆದ ಮದರಾಸಿನ ಕರಾರಿನಿಂದ ಇಂಗ್ಲೀಷರಿಗೆ ಬಹಳ ಮಟ್ಟಿಗೆ ತೇಜೋಪಘಾತವಾಯಿತು. ಕರಾರಿಗೊಪ್ಪಿದರೂ ಇದರ ಪ್ರತೀಕಾರಕ್ಕಾಗಿ ಸಮಯ ನಿರೀಕ್ಷಣೆಯಲ್ಲಿ ಇದ್ದರೆಂಬುದು ಇವರ ನಡತೆಯಿಂದ ಮುಂದೆ ಗೊತ್ತಾಗುತ್ತದೆ

**ಹೈದರನೂ ಮರಾಠರೂ**:—ಹೈದರನಿಗೆ ವಿರಾಮವೇ ಇಲ್ಲ. ಹಗಲೂ ರಾತ್ರಿಯೂ ಶತ್ರುಗಳನ್ನೆದುರಿಸುವುದರಲ್ಲೇ ಇವನ ಆಯುಸ್ಸೆಲ್ಲವೂ ಕಳೆದು ಹೋಯಿತು. ಮಲಬಾರು, ನಗರ, ಕೊಡಗು ಈ ಪ್ರಾಂತ್ಯಗಳಲ್ಲಿ ದಂಗೆಗಳೇಳುತ್ತಲೇ ಇದ್ದುವು. ಶ್ರೀರಂಗಪಟ್ಟಣದಲ್ಲೇ ಅನೇಕರು ಒಡೆಯರ ಪಕ್ಷವನ್ನು ವಹಿಸಿ, ರಹಸ್ಯವಾಗಿ ಹೈದರನ ಶತ್ರುಗಳ ಸಹಾಯವನ್ನು ಕೋರುತ್ತಿದ್ದರು. ಇವೆಲ್ಲಕ್ಕು ಹೈದರನು ಗಮನಕೊಡಬೇಕಾಗಿತ್ತು. ಮತ್ತೆ ಮರಾಠರು (೧೭೭೦) ಮೈಸೂರನ್ನು ಮುತ್ತಿದರು. ಹೈದರನು ಮದರಾಸಿನ ಕೌಲನಂತೆ ಇಂಗ್ಲೀಷರ ಸಹಾಯವನ್ನು ಬೇಡಿದನು. ಆದರೆ ಆಡಿದ ಮಾತಿನಂತವರು ನಡೆಯಲಿಲ್ಲ. ಮರಾಠರ ಪೆಟ್ಟಿಗೆ ಸಿಕ್ಕಿ ಹೈದರನು ನಾಶವಾಗಲೆಂದು ಹಾರೈಸಿದರು. ಮರಾಠರು ಶ್ರೀರಂಗಪಟ್ಟಣವನ್ನೇ ಆಕ್ರಮಿಸುವ ಗತಿ ಬಂತು. ಮೈಸೂರೊಡೆಯನು ಮರಾಠರೊಂದಿಗೆ ರಹಸ್ಯವಾಗಿ ಪತ್ರವ್ಯವಹಾರ ನಡೆಸಿದುದಕ್ಕಾಗಿ ಹೈದರನವನನ್ನು ಕೊಲ್ಲಿಸಿ, ಅವನ ತಮ್ಮನಾದ ಚಾಮರಾಜನಿಗೆ ಪಟ್ಟಗಟ್ಟಿದನು. ಮರಾಠರ ಹಾವಳಿಯನ್ನು ತಡೆಯಲಾರದೆ ಹೈದರನು ಅವರಿಗೆ ೩೬ ಲಕ್ಷ ದ್ರವ್ಯವನ್ನು ಕೊಟ್ಟು ಅವರೊಂದಿಗೆ ಸಮಾಧಾನ ಮಾಡಿಕೊಂಡನು. ೧೭೭೨ ರಲ್ಲಿ ಮಾಧವರಾಯನು ಕಾಲವಾಗಲು ಮಹಾರಾಷ್ಟ್ರದಲ್ಲಿ ಪದವಿಗಾಗಿ ಎರಡು ಕಕ್ಷಿಗಳಾದುವು. ಹೈದರನು ರಾಘೋಬನ ಪರನಿಂತು ಕೃಷ್ಣಾ ತುಂಗಭದ್ರಾ ಮಧ್ಯ ದೇಶವೆಲ್ಲವನ್ನೂ ಪಡೆದನು. ಕಡಪಾ ನವಾಬನೊಂದಿಗಾಗಲೇ ಬಾಂಧವ್ಯವನ್ನು ಬೆಳೆಸಿದ್ದನು. ಈಗ ಸವಣೂರು ನವಾಬನ ಮಗನಿಗೆ ತನ್ನ ಮಗಳನ್ನಿತ್ತು, ತನ್ನ ಮಗನಿಗೆ (ಕರೀಂ) ಅವನ ಮಗಳನ್ನು ತಂದು ವಿವಾಹ ನಡೆಸಿದನು.

**ಇಂಗ್ಲೀಷರ ಅತಿಕ್ರಮಣ:**—೧೭೭೮ ಸುಮಾರಿನಲ್ಲಿ ಇಂಗ್ಲೀಷರಿಗೂ ಫ್ರೆಂಚರಿಗೂ ಮತ್ತೆ ಯುದ್ಧಕ್ಕೆ ಮೊದಲಾಯಿತು. ಇಂಗ್ಲೀಷರು ಪಾಂಡಿಚೆರಿಯನ್ನು ಹಿಡಿದರು. ಮಾಹೆಯನ್ನು ಆಕ್ರಮಿಸಲು ಅನುವಾದರು. ಆದರೆ ಮಾಹೆಯು ಮೈಸೂರು ರಾಜ್ಯದಲ್ಲಿತು. ಹೈದರನು ಕೂಡಲೇ ಈ ಕೆಲಸವು ನ್ಯಾಯವಾದುದಲ್ಲವೆಂದು ಇಂಗ್ಲೀಷರಿಗೆ ತಿಳಿಸಿದನು. ತಮ್ಮ ಜನ್ಮ ಶತ್ರುಗಳಾದ ಫ್ರೆಂಚರಿಗಿವನು ಹಿತವನೆಂಬ ಕಾರಣದಿಂದ ಇಂಗ್ಲೀಷರು ೧೭೭೯ ರಲ್ಲಿಮಾಹೆಯನ್ನು ಹಿಡಿಯಲೇಹಿಡಿದರು ಹೈದರನು ಯುದ್ಧೋಪಕ್ರಮವನ್ನು ಮಾಡಿದನು. ಹೈದರನ ಸೈನಿಕರು ಮಾಡಿದ ಹಾವಳಿಯನ್ನು ಹೇಳತೀರದು. ಊರುಗಳೆಲ್ಲ ಹಾಳಾದುವು. ಇವನಿಟ್ಟ ಬೆಂಕಿಯು ಬೇಗೆಯು ಮದರಾಸಿನವರೆಗೂ ಹೋಯಿತು. ಇಂಗ್ಲೀಷರ ಕಡೆ ಮನ್ರೋ, ಬೇಲಿ, ಸರ್‌ಐರ್ ಕೂಟರು ಹೋರಾಡಿದರು. ಪಶ್ಚಿಮ ಸಮುದ್ರ ತೀರದಲ್ಲಿನ ರೇವು ಪಟ್ಟಣಗಳನ್ನು ಧ್ವಂಸಮಾಡಿದರು. ಹೈದರನು ಕರ್ನಲ್ ಬೇಲಿಯನ್ನು ಸೋಲಿಸಿದನು ; ಸರ್‌ಐರ್ ಕೂಟನು (ಪೋರ್ಟೊನೋವೋ) ಹೈದರನನ್ನು ಸೋಲಿಸಿದನು. ಯುದ್ಧಕ್ಕೆ ತುದಿಮೊದಲೇ ಇಲ್ಲವಾಯಿತು. ಇವನನ್ನು ಸೋಲಿಸಲು ಸೈನ್ಯಬಲವೊಂದೇ ಸಾಲದೆಂದು ತಿಳಿದು ವಾರನ್ ಹೇಸ್ಟಿಂಗ್ಸನು ಮರಾಠರೊಂದಿಗೆ ೧೭೮೨ ರಲ್ಲಿ ಕರಾರನ್ನು ಮಾಡಿಕೊಂಡನು. ಈ ಕರಾರಿನ ಪರಿಣಾಮವು ಹೈದರನಿಗೆ ಗೊತ್ತಾಯಿತು. ಫ್ರೆಂಚರ ಸಹಾಯವೂ ತಾನೆಣಿಸಿದಷ್ಟು ಹೈದರನಿಗೆ ದೊರೆಯಲಿಲ್ಲ. ಆರಣಿಯಲ್ಲಿ ಮತ್ತೆ ಇಂಗ್ಲೀಷರು ಜಯಶಾಲಿಗಳಾದರು. ಮಲಬಾರಿನಲ್ಲಿ ಮುಖದುಂಅಲಿಯು ಸೋತನು. ಲಾಲಿಯ ಸಹಿತವಾಗಿ ಟೀಪುವು ಪಾಣಿಯಾಣಿಯಬಳಿ ಇಂಗ್ಲೀಷರನ್ನು ಎದುರಿಸಿದನು. ಅಲ್ಲೂ ಇಂಗ್ಲೀಷರೇ ಗೆದ್ದರು. ಈ ಮಧ್ಯೆ ಮಳೆಗೆ ಮೊದಲಾಯಿತು. ಯುದ್ಧವು ಕೊಂಚ ನಿಂತಿತು. ಆಕಸ್ಮಾತ್ತಾಗಿ ಹೈದರನಿಗೆ ಬೆನ್ನುಪಣೆಯೆದ್ದು ೧೭೮೨ ರಲ್ಲಿ (ಡಿಸೆಂಬರು ೭ ನೆ ತಾರೀಖು) ಕಾಲವಾದನು. ಕ್ಷತ್ರಿಯನಂತೆ ಜೀವನಯಾತ್ರೆಯನ್ನು ಆರಂಭಿಸಿದ ಹೈದರನು ಕ್ಷತ್ರಿ

ಯನಂತೆಯೇ ಆ ಯಾತ್ರೆಯನ್ನು ಮುಗಿಸಿದನು. ಈ ವಿಚಾರವನ್ನು ರಹಸ್ಯವಾಗಿಟ್ಟು ಹೈದರನ ಮುಖ್ಯಾಧಿಕಾರಿಗಳಾಗಿದ್ದ ಪೂರ್ಣಯ್ಯ, ಕೃಷ್ಣರಾವ ಮೊದಲಾದವರು ಹೈದರನ ಹಿರಿಯಮಗನಾದ ಟೀಪುವಿಗೆ ಸಮಾಚಾರವನ್ನು ಕಳುಹಿಸಿದರು. ಕೂಡಲೇ ಟೀಪುವು ಬಂದು ತಂದೆಗೆ ಶವಸಂಸ್ಕಾರಗಳನ್ನು ನಡೆಸಿ, ಶ್ರೀರಂಗಪಟ್ಟಣಕ್ಕೆ ಹೋಗಿ 'ಟೀಪು ಸುಲ್ತಾನ' ನೆಂಬ ಹೆಸರಿನಿಂದ ಖುದಾದಾದ್ ಸರಕಾರದ ಆಡಳಿತಕ್ಕೆ ಮೊದಲುಮಾಡಿ, ತಂದೆಯು ಮೊದಲು ಮಾಡಿದ್ದ ಯುದ್ಧಕ್ಕೆ ಅನುವಾಗಿ ಸುತ್ತಮುತ್ತಲೂ ಇಂಗ್ಲೀಷರನ್ನು ಮುತ್ತುತ್ತಾಬಂದನು. ಪಶ್ಚಿಮತೀರದಲ್ಲಿ ಕರ್ನಲ್ ಮ್ಯಾಥ್ಯೂಸನು ಹೊನ್ನಾವರ, ಮಂಗಳೂರು, ಕುಂದಾಪುರಗಳನ್ನು ಹಿಡಿದನು. ಹೈದರಘಡ ಬಿದನೂರುಗಳನ್ನು ವಶಪಡಿಸಿಕೊಂಡನು. ತಕ್ಷಣ ಟೀಪುಸುಲ್ತಾನನು ಹೊರಟು ಮ್ಯಾಥ್ಯೂಸನನ್ನು ಕೈಸೆರೆಹಿಡಿದನು. ಅನಂತರ ಬಂದ ಜನರಲ್ ಸ್ಟೂಅರ್ಟನಿಗೆ ಸಾಕು ಮಾಡಿದನು. ಇಂಗ್ಲೀಷರಿಗೆ ಜಯವಾಗುವ ಸಂಭವವೇ ಕಾಣಬರಲಿಲ್ಲ. ಆಗ ವಾರ್ನಹೇಸ್ಟಿಂಗ್ಸನು ಎಷ್ಟು ಬೇಡವೆಂದರೂ ಲಾರ್ಡ್ ಮೆಕಾರ್ಟನಿಯು ಮುಂದುಬಿದ್ದು, ೧೭೮೪ ರಲ್ಲಿ ಟೀಪು ಸುಲ್ತಾನನೊಂದಿಗೆ ಸಮಾಧಾನಮಾಡಿಕೊಂಡನು. ಇದರಿಂದ ಯುದ್ಧಕ್ಕೆ ಮುಂಚೆ ಅವರವರಿಗಿದ್ದ ಪ್ರದೇಶಗಳು ಅವರವರಿಗೇ ಸೇರತಕ್ಕದ್ದೆಂದು ನಿಷ್ಕರ್ಷೆಯಾಯಿತು.

**ನಿಜಾಮನೂ ಮರಾಠರೂ** :—ಇಂಗ್ಲೀಷರೊಂದಿಗೆ ಕಾಲಾಗುವುದರಲ್ಲೇ ನಿಜಾಮನೂ, ಮರಾಠರೂ ಒಂದಾಗಿ ಟೀಪು ಸುಲ್ತಾನನ ಮೇಲೆ ಬಿದ್ದರು. ಚಿಕ್ಕಪುಟ್ಟ ಪಾಳೆಯಗಾರರೆಲ್ಲರೂ ಎದುರುಬಿದ್ದರು. ತಾನಾಗತಾನೆ ಪಟ್ಟಕ್ಕೆ ಬಂದು ಒಡೆಯರ ಮನೆತನದ ಅರಸನನ್ನು ತೃಣೀಕರಿಸಿದನಾದುದರಿಂದ ರಾಜನ ಪಕ್ಷವನ್ನು ವಹಿಸಿ ಅನೇಕರು ಟೀಪುಸುಲ್ತಾನನ ಅವನತಿಗೆ ದಾರಿ ಮಾಡುತ್ತಿದ್ದರು. ಹೋರಾಡಲು ಆಗ ಸಮಯವಲ್ಲವೆಂದು ಟೀಪುಸುಲ್ತಾನನು ೧೭೮೭ ರಲ್ಲಿ ನಿಜಾಮ ಮರಾಠರೊಂದಿಗೆ ಸಮಾಧಾನ

ಮಾಡಿಕೊಂಡು ೪೫ ಲಕ್ಷ ದ್ರವ್ಯವನ್ನೂ ಬಾದಾಮಿ, ಆದವೇಣಿ, ಕಿತ್ತೂರು, ನರಗುಂದಗಳನ್ನೂ ಕೊಡುವುದಕ್ಕೆ ಒಪ್ಪಿದನು.

**ಒಡೆಯರ ಸ್ವಾತಂತ್ರ್ಯೋದ್ಯಮ**:—ಹೈದರನು ರಾಜ್ಯಾಪಹಾರ ಮಾಡಿದಂದಿನಿಂದ ಒಡೆಯರು ಸ್ವತಂತ್ರರಾಗಲು ಹೈದರನ ಶತ್ರುಗಳೊಂದಿಗೆ ಸದಾ ಆಲೋಚನೆ ಮಾಡುತ್ತಿದ್ದರು. ೧೭೭೬ ರಲ್ಲಿ ಲಕ್ಷ್ಮಮ್ಮಣ್ಣಿಯು ಮದರಾಸು ಗವರ್ನರಾದ ಲಾರ್ಡ್ ಪಿಗಟ್ಟಿನ ಬಳಿಗೆ ರಹಸ್ಯವಾಗಿ ರಾಯದುರ್ಗ ಶ್ರೀನಿವಾಸರಾಯನನ್ನು ಕಳುಹಿಸಿದಳು. ಹೈದರ ಟೀಪುವಿನ ಕ್ರೂರ ದ್ವೇಷಿಗಳಾದ ಇಂಗ್ಲೀಷರಿಗೂ ಮತ್ತು ಲಕ್ಷ್ಮಮ್ಮಣ್ಣಿಗೂ ತಿರುಮಲಯ್ಯಂಗಾರ್ಯ ನಾರಣಯ್ಯಂಗಾರ್ಯರ ಮೂಲಕ ಅನೇಕ ರಹಸ್ಯ ರಾಯಭಾರಗಳು ನಡೆದುವು. ೧೭೮೨ ನೆಯ ಇಸವಿ ಅಕ್ಟೋಬರು ೧೮ ರಲ್ಲಿ ಇಂಗ್ಲೀಷರಿಗೂ ಲಕ್ಷ್ಮಮ್ಮಣ್ಣಿಗೂ ರಹಸ್ಯವಾದ ಕರಾರೊಂದಾಯಿತು. ಟೀಪುವಿನ ಮಂತ್ರಿಗಳೇ ರಾಜದ್ರೋಹಿಗಳಾದರು. ಇದಕ್ಕಾಗಿ ಅಂಚೆ ಶಾಮಯ್ಯ, ಕೃಷ್ಣರಾವ ಮುಂತಾದವರಿಗೆ ಕ್ರೂರದಂಡನೆಯಾಯಿತು. ಆದರೂ ರಾಜಪಕ್ಷದ ರಾಯಭಾರಿಗಳು ಇಂಗ್ಲೀಷರೊಡನಿದ್ದು ಟೀಪುವಿನ ವಿನಾಶಕ್ಕೆ ಬೇಕಾದ ಸಲಕರಣೆಗಳನ್ನು ಸಿದ್ಧಪಡಿಸುತ್ತಿದ್ದರು.

**ಇಂಗ್ಲೀಷರ ರಾಜ್ಯಾಕಾಂಕ್ಷೆ**:—ಆಗ ತಾನೇ ಇಂಗ್ಲೀಷರು ಅಮೇರಿಕವನ್ನು ಕಳಕೊಂಡಿದ್ದರು. ಕಾರ್ನವಾಲೀಸನು ಯಾರ್ಕ್ ಟೌನಿನಲ್ಲಿ ಸೋತು ತನ್ನ ಮಾನವನ್ನು ದಕ್ಕಿಸಿಕೊಳ್ಳಲು ಇಂಡಿಯಾಕ್ಕೆ ಬಂದನು. ಅಮೇರಿಕದಲ್ಲಿ ಕಳೆದುಕೊಂಡದ್ದಕ್ಕೆ ಪ್ರತಿಯಾಗಿ ಇಂಡಿಯಾದಲ್ಲಿ ರಾಜ್ಯವನ್ನು ಪಡೆಯಬೇಕೆಂಬ ಆಶೆಯು, ಆತುರವೂ ಇಂಗ್ಲೀಷ ಸರದಾರರಿಗೆ ದಿನದಿನವೂ ಹೆಚ್ಚಿತು. ಟೀಪು ಸುಲ್ತಾನನಿಗೂ ಫ್ರೆಂಚರಿಗೂ ಸ್ನೇಹವಿತ್ತು. ಈ ಕಾರಣಗಳಿಂದ ಕಾರ್ನವಾಲೀಸನು ಟೀಪು ಸುಲ್ತಾನನನ್ನು ಮಟ್ಟಹಾಕಬೇಕೆಂದು ಯೋಚಿಸಿದನು. ಯುದ್ಧೋಪಕ್ರಮಕ್ಕೊಂದು ನೆಪಬೇಕಲ್ಲವೆ. ಅದೂ ಸಿಕ್ಕಿತು. ತಿರುವಾಂಕೂರಿನ ಮೇರೆಯ ಕೊಲ್ಲಿಯಲ್ಲಿ ಡಚ್ಚರಿಗೆ ಸೇರಿದ ಎರಡು ಕೋಟೆಗಳಿದ್ದುವು. ಇದಕ್ಕಾಗಿ ಡಚ್ಚರು

ಟೀಪು ಸುಲ್ತಾನನ ಸಾಮಂತರಾದ ಕೊಚ್ಚಿನ್ ರಾಜರಿಗೆ ಕಪ್ಪವನ್ನು ಕೊಡುತ್ತಿದ್ದರು. ಟೀಪುವು ಆ ಕೋಟೆಗಳನ್ನು ಹಿಡಿಯಲೆತ್ನಿಸಲು ಡಚ್ಚರು ಆ ಕೋಟೆಗಳನ್ನು ರಕ್ಷಿಸಿಕೊಳ್ಳಲು ತಿರುವಾಂಕೂರಿನ ಅರಸರ ಸಹಾಯವನ್ನು ಬೇಡಿದರು. ಸಹಾಯಕ್ಕವರು ಸಿದ್ಧರಾಗದಿದ್ದರೆ ಅವುಗಳನ್ನು ಕೊಂಡುಕೊಳ್ಳುವಂತೆ ಕೇಳಿದರು. ಟೀಪುವು ಅವುಗಳನ್ನು ಮಾರಲು ಡಚ್ಚರಿಗೆ ಅಧಿಕಾರವಿಲ್ಲೆಂದನು. ತಿರುವಾಂಕೂರಿನರಾಜನು ಈ ವ್ಯಾಜ್ಯವನ್ನು ತಿರ್ಮಾನಿಸಲು ಇಂಗ್ಲೀಷರ ಸಹಾಯವನ್ನು ಬೇಡಿದನು. ಅದಕ್ಕೆ ಟೀಪುವು ಜಗಳವೆಲ್ಲ ತಕ್ಕಂತೆ ತೀರ್ಮಾನವಾಗಿದೆಯೆಂದೂ ಇಂಗ್ಲೀಷರಿಗೂ ಈ ವ್ಯವಹಾರಕ್ಕೂ ಸಂಬಂಧವಿಲ್ಲೆಂದೂ ಹೇಳಿದನು. ಕಾರಣ ಸಾಕಾಯಿತು. ಇಂಗ್ಲೀಷರು ಯುದ್ಧಕ್ಕೆ ಅನುವಾದರು. ಟೀಪುಸುಲ್ತಾನನು ಯುದ್ಧಕ್ಕೆಸಿದ್ಧನಾಗಿರಲಿಲ್ಲ. ಸೈನ್ಯ ಸಮೇತನಾಗಿ ಆತುರದಿಂದ ಸುಲ್ತಾನನು ಶ್ರೀರಂಗಪಟ್ಟಣಕ್ಕೆ ಬಂದನು. ೧೭೯೦ ರಲ್ಲಿ ಇಂಗ್ಲೀಷರು ತಿರುವಾಂಕೂರಿನ ಮಹಾರಾಜನ ಮಾನಸಂರಕ್ಷಣಾ ವ್ಯಾಜ್ಯದಿಂದ, ಮರಾಠರನ್ನೂ, ನಿಜಾಮಾಲಿಯನ್ನೂ ಸಹಾಯಕ್ಕೆ ಕರೆದು, ಸುಲ್ತಾನನನ್ನು ಸೋಲಿಸಿ, ಅವನ ರಾಜ್ಯವನ್ನು ಎಲ್ಲರೂ ವಿಭಾಗಿಸಿಕೊಳ್ಳಬೇಕೆಂದು ರಹಸ್ಯವಾಗಿ ಕರಾರು ಮಾಡಿಕೊಂಡು, ಮೈಸೂರು ರಾಜದ್ರೋಹಿಗಳ ಸಹಾಯವನ್ನು ಪಡೆದು, ಇದ್ದಕ್ಕಿದ್ದ ಹಾಗೆ ಸುಲ್ತಾನನ ರಾಜ್ಯವನ್ನು ಹೊಕ್ಕರು. ಉತ್ತರದಲ್ಲಿ ಮರಾಠರೂ, ನಿಜಾಮನೂ, ಪೂರ್ವದಲ್ಲಿಯೂ ದಕ್ಷಿಣದಲ್ಲಿಯೂ ಇಂಗ್ಲೀಷರು ಏಕಕಾಲದಲ್ಲಿ ಮುತ್ತಿಗೆಗಳಿಗೆಮೊದಲಿಟ್ಟರು. ಅಮೇರಿಕದಲ್ಲಿ ಕಳೆದುಕೊಂಡ ಮಾನವನ್ನು ದಕ್ಕಿಸಿಕೊಳ್ಳುವ ಆತುರನಾಗಿದ್ದ ಲಾರ್ಡ್ ಕಾರ್ನವಾಲಿಸನೇ ಸ್ವಯಂ ಸೇನೆಯನ್ನು ನಡೆಸಿದನು. ಹರಿಪಂತನೂ, ಪರಶುರಾಮಭಾವನೂ ತುಂಗಭದ್ರೆಯಿಂದುತ್ತರದಲ್ಲಿದ್ದ ಮುಖ್ಯ ಮುಖ್ಯ ನಗರಗಳೆಲ್ಲವನ್ನೂ ಹಿಡಿದು ಧ್ವಂಸಮಾಡಿದರು. ಧಾರವಾಡದ ಕೋಟೆಯೂ ಅವರ ವಶವಾಯಿತು. ನಿಜಾಮಾಲಿಯು ಕೊಪ್ಪಳ, ಬಹದೂರು ಬಂದರು, ಗಂಜಿಕೋಟೆ ಮುಂತಾದುವುಗಳನ್ನು ಹಿಡಿದನು. ಕಾರ್ನವಾಲೀಸನು ಬೆಂಗ

ಳೂರನ್ನು ಹಿಡಿದು ಶ್ರೀರಂಗಪಟ್ಟಣವನ್ನು ಆಕ್ರಮಿಸಲು ಹೊರಟನು. ಟೀಪುವು ಪಟ್ಟ ಪ್ರಯತ್ನವೆಲ್ಲ ವ್ಯರ್ಥವಾಯಿತು. ಮೂವರು ಶತ್ರುಗಳನ್ನು ಏಕಕಾಲದಲ್ಲಿ ನಿಗ್ರಹಿಸುವುದಂದರೆ ಆಗದ ಮಾತು. ಸುಲ್ತಾನನು ಸೋತನು. ವಿಧಿಯಿಲ್ಲದೆ, ತನ್ನ ಸಾಮಾಜಿಕರ ಸಲಹೆಯಮೇಲೆ ಕೇವಲ ಅವಮಾನಕರವಾದ ಸಂಧಿಗೆ ಒಪ್ಪಬೇಕಾಯಿತು. ೧೭೯೨ ರಲ್ಲಿ ಆದ ಆ ಕರಾರಿನ ಪ್ರಕಾರ ಟೀಪುವು ಖುದಾದಾದ್ ಸರಕಾರದಲ್ಲಿ ಅರ್ಧವನ್ನು ಶತ್ರುಗಳಿಗೆ ಬಿಟ್ಟುಕೊಟ್ಟನು. ಯುದ್ಧದ ಖರ್ಚಿಗಾಗಿ ೩ ಕೋಟಿ ೩೦ ಲಕ್ಷ ದ್ರವ್ಯದಲ್ಲಿ ಅರ್ಧವನ್ನಾಗಲೇ ಸಲ್ಲಿಸಿ, ಮಿಕ್ಕರ್ಧಕ್ಕಾಗಿ ತನ್ನಿಬ್ಬರು ಮಕ್ಕಳನ್ನು ಓಲಾಗಿಟ್ಟನು. ಆದಷ್ಟು ಬೇಗ ಆ ದ್ರವ್ಯವನ್ನು ಕೊಟ್ಟು ಮಕ್ಕಳನ್ನು ಕರೆಸಿಕೊಂಡನು. ಇಂಗ್ಲೀಷರಿಗೆ ಮಲಬಾರು, ಕೊಡಗು, ದಿಂಡಿಗಲ್ಲು, ಬಾರಾಮಹಲುಗಳು ಬಂದುವು; ಮರಾಠರಿಗೂ ನಿಜಾಮನಿಗೂ ತುಂಗಭದ್ರೆಯಿಂದುತ್ತರದ ಸೀಮೆಯೆಲ್ಲ ಸಿಕ್ಕಿತು ; ಟೀಪು ಸುಲ್ತಾನನ ಮೂಳೆ ಮುರಿಯಿತು. ಇಂಗ್ಲೀಷರಿಗೆ ಸಂತೋಷವಾಯಿತು.

**ಇಂಗ್ಲೀಷರ ಸಂಧಾನ**:—ಶ್ರೀರಂಗಪಟ್ಟಣದ ಕೌಲಾದಂದಿನಿಂದ ಟೀಪುವಿಗೆ ಇಂಗ್ಲೀಷರ ಮೇಲೆ ಬದ್ಧ ವೈರವುಂಟಾಯಿತು. ಹೇಗಾದರೂ ಮಾಡಿ ಇವರನ್ನು ಹಿಂದುಸ್ಥಾನದಿಂದ ಓಡಿಸಬೇಕೆಂದು ಯೋಚಿಸಿ, ಫ್ರೆಂಚರೊಂದಿಗೂ ಇತರ ಮಹಮ್ಮದೀಯ ರಾಜರೊಂದಿಗೂ ರಾಯಭಾರ ನಡೆಸಿದನು. ಅಲ್ಲದೆ ಮರಾಠರ ಮತ್ತು ನಿಜಾಮನ ಸಹಾಯಕ್ಕಾಗಿ ಎಷ್ಟೋ ಸಾಹಸಪಟ್ಟನು. ಹೈದರಾಬಾದು ಮತ್ತು ಪುಣೆಯ ಆಸ್ಥಾನದಲ್ಲಿದ್ದ ಆಂಗ್ಲೇಯ ರಾಜನೀತಿಜ್ಞರ ಪ್ರತಿಭಾ ಪ್ರಭಾವದಿಂದ ಸುಲ್ತಾನನ ಇಷ್ಟೆಯು ನೆರವೇರಲಿಲ್ಲ. ೧೭೯೮ ರಲ್ಲಿ ಇಂಗ್ಲೀಷರು ಸುಲ್ತಾನನನ್ನು ನಿರ್ಮೂಲಮಾಡಬೇಕೆಂಬ ಆಶೆಯಿಂದ ನಿಜಾಮನೊಂದಿಗೂ ಮರಾಠರೊಂದಿಗೂ ಒಂದು ಕೌಲನ್ನು ಮಾಡಿಕೊಂಡರು. ಕಾರ್ನವಾಲೀಸನು ಹಿಂತಿರುಗುತ್ತಲೇ

ವೆಲ್ಲೆಸ್ಲಿಯು ಗವರ್ನರಾಗಿ ಇಂಡಿಯಾ ದೇಶಕ್ಕೆ ಬಂದನು. ಬರುವ ದಾರಿಯಲ್ಲೇ ಸುಲ್ತಾನನನ್ನು ಧ್ವಂಸಮಾಡಲು ನಿಶ್ಚಯಮಾಡಿದನು.

ಆಗ ಫ್ರಾನ್ಸಿನ ರಾಜ್ಯಕ್ರಾಂತಿಯೂ ಇಂಗ್ಲೀಷರಿಗೆ ಬಹು ಚಿಂತೆಗೆ ಕಾರಣವಾಯಿತು. ಅವರಿಗಾಗ ಇಬ್ಬರೇ ಪ್ರಬಲ ಶತ್ರುಗಳು. ಯೂರೋಪಿನಲ್ಲಿ ನೆಪೋಲಿಯನ್ ಹಿಂದುಸ್ಥಾನದಲ್ಲಿ ಟೀಪುಸುಲ್ತಾನ್. ಇವರಿಬ್ಬರನ್ನು ಹಿಡಿದುಬಡಿಯುವುದೇ ಆ ಜನಾಂಗದ ಮುಖ್ಯಧ್ಯೇಯವಾಗಿತ್ತು. ಪ್ಲಾಸೀಕದನದಿಂದ ಹಿಂದೂಸ್ಥಾನದಲ್ಲಿ ಇವರ ಇರುವಿಕೆಯು ಸ್ಥಿರವಾದುದೇನೊ ನಿಜ; ಟೀಪುಸುಲ್ತಾನನಿರುವವರೆಗೂ ಹಿಂದೂಸ್ಥಾನದಲ್ಲಿ ತಮ್ಮ ಆಳ್ವಿಕೆಯು ಸ್ಥಿರಪಡುವುದಿಲ್ಲವೆಂಬುದನ್ನು ಇಂಗ್ಲೀಷರು ಚನ್ನಾಗಿ ಅರಿತಿದ್ದರು. ಈ ಕಾರ್ಯಸಾಧನೆಗಾಗಿ ಅವರು ಭಾರತೀಯರನ್ನೇ ಉಪಯೋಗಿಸಿದರು.

**ಶ್ರೀರಂಗಪಟ್ಟಣದ ಪತನ**:—ಟೀಪುಸುಲ್ತಾನನು ಫ್ರೆಂಚರೊಂದಿಗೆ ಸಂಧಾನ ನಡೆಸಿ, ಅವರಿಂದ ಸೈನ್ಯಸಹಾಯವನ್ನು ಹೊಂದಿದನೆಂಬೊಂದು ಕುಂಟು ನೆವದಿಂದ ಮರಾಠಾ, ನಿಜಾಂ ಸೈನ್ಯದಿಂದ ಕೂಡಿ ಇಂಗ್ಲೀಷರು ಥಟ್ಟನೆ ಟೀಪುಸುಲ್ತಾನನ ರಾಜ್ಯದ ಮೇಲೆ ಬಿದ್ದರು. ಜನರಲ್ ಹ್ಯಾರಿಸ್ಸನು ಶ್ರೀರಂಗಪಟ್ಟಣಕ್ಕೆ೪೦ ಮೈಲು ದೂರದ ಮಳವಳ್ಳಿಯವರೆಗೂ ಸೈನ್ಯಸಮೇತನಾಗಿ ಬಂದೇ ಬಿಟ್ಟನು. ಮುಂಬಯಿ ಸೈನ್ಯದೊಂದಿಗೆ ಬರುತ್ತಿದ್ದ ಜನರಲ್ ಸ್ಟೂಅರ್ಟನನ್ನೆದುರಿಸಲು ಪೂರ್ಣಯ್ಯ ಮತ್ತು ಸಯ್ಯದ್ ಸಾಹೇಬರು ಪಿರಿಯಾಪಟ್ಟಣದ ಕಡೆಗೆ ಹೊರಟರು. ಉಭಯ ಪಕ್ಷದವರಿಗೂ ಅನೇಕ ಸ್ಥಳಗಳಲ್ಲಿ ಕದನಗಳಾದುವು. ಶತ್ರುತ್ರಯವನ್ನು ಒಬ್ಬನು ನಿಗ್ರಹಿಸಲಾದೀತೆ? ಸುಲ್ತಾನನು ಶ್ರೀರಂಗಪಟ್ಟಣದ ರಕ್ಷಣೆಗಾಗಿ ಹೊರಟನು. ಶತ್ರು ಸೈನ್ಯಗಳು ಕೋಟೆಯನ್ನು ಮುತ್ತಿದುವು. ಫ್ರೆಂಚರೂ ಮತ್ತು ಹಲವು ಸಾಮಾಜಿಕರೂ ಸುಲ್ತಾನನ್ನು ಕೋಟೆಯನ್ನುಳಿದು ಚಿತ್ರದುರ್ಗಕ್ಕೆ ಹೋಗೆಂದು ಹೇಳಿದರು. ಆದರೆ ಸುಲ್ತಾನನು "ದೇವರು ಮಾಡಿದಂತಾಗಲಿ; ನಾನವನನ್ನು ನಂಬಿರುವೆನು." ಎಂದುತ್ತರ ಕೊಟ್ಟು, ದುರ್ಗ ಸಂರಕ್ಷಣೆಗೆ ಮೊದಲಿಟ್ಟನು. ನವೀವರ್

ಮೀರ್‌ಸಾದಕ್ ಮೊದಲಾದ ಸುಲ್ತಾನನ ಆತ್ಮೀಯರೇ ಶತ್ರುಗಳೊಂದಿಗೆ ಸೇರಿ ಒಡೆಯನಿಗೆರಡನ್ನೆಣಿಸುತ್ತಿದ್ದರೆಂಬುದು ಗೊತ್ತಾಯಿತು. ಕೂಡಲೇ ಸುಲ್ತಾನನು ಅವರೆಲ್ಲರನ್ನೂ ಕೊಲ್ಲಿಸಿದನು. (ಮೇ ೪ ೧೭೯೯) ಒತ್ತಿಕೊಂಡು ನುಗ್ಗುತ್ತಿದ್ದ ಶತ್ರುಗಳನ್ನು ಎದುರಿಸಲು ಸುಲ್ತಾನನೇ ಉತ್ತರದ ಕಡೆ ದಿಡ್ಡಿಯ ಬಾಗಲಿಗೆ ಬಂದನು. ಅಲ್ಲಿ ನಡೆದ ಘೋರಯುದ್ಧದಲ್ಲಿ ಕೈಲಿಕತ್ತಿ ಹಿಡಿದು ಹೋರಾಡಿ ದುರ್ಗದ್ವಾರ ರಕ್ಷಣೆಯಲ್ಲೇ ಸುಲ್ತಾನನು ಪ್ರಾಣಗಳನ್ನರ್ಪಿಸಿದನು. ಕೋಟೆಯು ಶತ್ರುಗಳ ವಶವಾಯಿತು. ಸುಲ್ತಾನನ ಸಂಬಂಧಿಗಳೆಲ್ಲರೂ ಶತ್ರುಗಳ ಕೈಸೆರೆಯಾದರು. ಕೋಟೆಯು ಶತ್ರುಗಳ ವಶವಾದನಂತರ ಶ್ರೀರಂಗಪಟ್ಟಣವೆಲ್ಲ ಲೂಟಿಯಾಗಿ ಹೋಯಿತು. ೪೦ ವರ್ಷಗಳ ಮಹಮ್ಮದೀಯ ಆಡಳಿತವು ಒಂದು ಕ್ಷಣದಲ್ಲಿ ಕೊನೆಗಂಡಿತು. ಸಾಧಾರಣವಾಗಿ ಅರಿತವರಲ್ಲೂ, ಅರಿಯದವರಲ್ಲೂ, ಹಿರಿಯರಲ್ಲೂ ಕಿರಿಯರಲ್ಲೂ, ಟೀಪುವೆಂದರೆ ಊಹಿಸಲಸಾಧ್ಯವಾದ ಒಂದು ಮೃಗ, ಪಿಶಾಚ ಎಂಬ ಭಾವನೆಯು ಬೇರೂರಿ ಹೋಗಿದೆ. ಈಬಗೆಯ ವಿಪರೀತ ಕಲ್ಪನೆಗೆಟೀಪುವಿನ ವಿಚಾರದಲ್ಲಿ ಆಂಗ್ಲೇಯರಿಗಿರುವ ಬದ್ಧದ್ವೇಷವೂ, ಶುದ್ಧ ಮಾತ್ಸರ್ಯವೂ ಮೂಲಕಾರಣ. ಇಸ್ಲಾಮಿಾ ಮತದಲ್ಲಿ ಆತನಿಗಿದ್ದ ಭಕ್ತಿಶ್ರದ್ಧೆಗಳಿಂದ ಅತ್ಯಾಚಾರಗಳು ನಡೆದವೆಂಬುದನ್ನು ಅನೇಕರು ಮಿತಿಮಿಾರಿ ತೋರಿಸಿ ಹಾರುವರು. ಶೃಂಗೇರಿಯ ಜಗದ್ಗುರುಗಳಿಗೆ ಟೀಪುವು ಬರೆದ ಪತ್ರಗಳನ್ನು, ಇತರ ಸಂಗತಿಗಳನ್ನು ಕಂಡರೆ ಟೀಪುವಿಗೆ ಪರಮತಗಳಲ್ಲಿ ಗೌರವವಿದ್ದಿತೆಂಬುದು ಸ್ಪಷ್ಟವಾಗುತ್ತದೆ. ರಾಜ್ಯಾಂಗ ವ್ಯವಸ್ಥೆಯಲ್ಲಿ ಅವನು ಭಾವಿಸಿದ್ದೆಲ್ಲವನ್ನೂ ಮಾಡಲು ಅವಕಾಶವಿಲ್ಲದೆಹೋದರೂ ಮಾಡಿದ ಒಂದೆರಡು ಕೆಲಸಗಳಿಂದ ಅವನ ಧೈರ್ಯವೂ, ಸ್ಥೈರ್ಯವೂ, ಮಹತ್ಕಾರ್ಯಾಕಾಂಕ್ಷೆಯೂ ಕಂಡು ಬರುತ್ತದೆ. ಅವನ ಕಾಲವೆಲ್ಲ ಪ್ರತಿಕ್ಷಣವೂ ಅವನ ವಿನಾಶಕ್ಕೆ ಅನುವಾಗುತ್ತಿದ್ದ ವಿಷಮವೈರಿಗಳೊಂದಿಗೆ ಹೋರಾಡುವುದರಲ್ಲೇ ಕಳೆದು ಹೋಯಿತು. ಕಡೆಗೂ ಟೀಪುಸುಲ್ತಾನನು ವೀರಕ್ಷೇತ್ರದಲ್ಲಿ ಶೂರನಂತೆ ನಿಂತು, 'ಷಹೀದಿ' ಯಂತೆ ಸತ್ತನು. ಅವ

ನಿದ್ದ ಕಾಲದ ಪರಿಸ್ಥಿತಿಯನ್ನು ಗಮನಿಸಿ ಅವನ ವೈರಿಗಳ ನಡತೆಯನ್ನು ನೆನಪಿನಲ್ಲಿಟ್ಟು ನಿಷ್ಪಕ್ಷಪಾತ ದೃಷ್ಟಿಯಿಂದ ಟೀಪುವಿನ ಗುಣಾವಗುಣಗಳನ್ನು ಲೆಕ್ಕಿಸಲೆತ್ನಿಸಿದಲ್ಲಿ 'ಅವನು ಮಾನವಜಾತಿಗೆ ಮಾಡಿದ ಕೇಡಿಗಿಂತಲೂ, ಮಾನವಜಾತಿಯು ಅವನಿಗೆ ಮಾಡಿದ ಕೇಡೇ ದುರೂಪ್ಯವಾದುದೆಂ' ದು ಸ್ಪಷ್ಟವಾಗದಿರದು. "ಜ್ಞಾಪಕಾರ್ಹವಾದ ಗುಲಾಮನಾಗಿ ೨೦೦ ವರುಷಗಳಿರುವದಕ್ಕಿಂತಲೂ ಹುಲಿಯಾಗಿ ೨ ವರುಷಗಳಿರುವುದೇ ಲೇಸು" ಎಂಬ ಅವನ ವಾಕ್ಯವು ಮಹತ್ವವನ್ನು ತೋರಿಸುವುದು. ದೇಶವೆಲ್ಲವನ್ನೂ ಇಂಗ್ಲೀಷರೂ ನಿಜಾಮನೂ ಮರಾಠರೂ ಹಂಚಿಕೊಂಡರು. ಮೈಸೂರೊಡೆಯರಿಗೂ ಒಂದಂಶ ದೊರೆಯಿತು. ಮುಮ್ಮಡಿ ಕೃಷ್ಣರಾಜನು ರಾಜನಾದನು. ಕರ್ಣಾಟಕದ ಛಿದ್ರೀಕರಣವು ಸಂಪೂರ್ಣವಾಗಿ ಹೋಯಿತು. ಫ್ರೆಂಚರು ಹಿಂದೂಸ್ಥಾನದಲ್ಲಿ ರಾಜ್ಯವನ್ನುಕಟ್ಟುವ ಆಶೆಯು ಪೂರೈಸಿತು. ಇಂಗ್ಲೀಷರ ಆಳ್ವಿಕೆಯು ಹಿಂದೂಸ್ಥಾನದಲ್ಲಿ ಸ್ಥಿರಪಟ್ಟಿತು. "ದಕ್ಷಿಣ ದೇಶ ಸಾಮ್ರಾಜ್ಯಕ್ಕಾಗಿ ಕಾದಾಡಿದ ರಾಜಮನೆತನಗಳೆಲ್ಲಕ್ಕೂ ಕರ್ಣಾಟಕವೇ ರಂಗಭೂಮಿ" ಯೆಂಬಮಾತು ಇಂಗ್ಲೀಷರ ವಿಚಾರದಲ್ಲೂ ನಿಜವಾಯಿತು.

**ತಿರುಮಲೆ ತಾತಾಚಾರ್ಯ ಶರ್ಮ**



ಕೃಷ್ಣರಾಜಸಾಗರ [ಕರ್ಣಾಟಕದ ಕೈಪಿಡಿ ಪುಟ ೧೬೯

III

# ಶ್ರೀರಂಗಪಟ್ಟಣದ ಪತನಾನಂತರ

---

**ರಾಜ್ಯವಿಭಾಗ** :—ಶ್ರೀರಂಗಪಟ್ಟಣದ ಪತನಾನಂತರ ಟೀಪ್ರುವಿನ ಮನೆತನದವರು ಮೂಲೆಗೆ ಕೂತರು ; ವೆಲ್ಲೂರಿನಲ್ಲಿ ಬಂಧಿಸಲ್ಪಟ್ಟರು. ಮೂರು ಮಂದಿಯ (ಇಂಗ್ಲೀಷರು, ಮರಾಠರು, ನಿಜಾಮನು) ಒಪ್ಪಿಗೆಯಂತೆ ಟೀಪ್ರುವಿನ ರಾಜ್ಯದ ಒಂದಂಶವು ಒಡೆಯರ ವಂಶಸ್ಥರಿಗೆ ಕೊಡಲ್ಪಟ್ಟಿತು. ಉಳಿದುದೆಲ್ಲವನ್ನೂ ಮೂವರೂ ಪಾಲಿಟ್ಟುಕೊಂಡು ಕರಾರುಗಳನ್ನು ಮಾಡಿಕೊಂಡರು. ಮೈಸೂರರಸರಿಗೆ ಅಂದಿನಿಂದ ಹಣವನ್ನು ಅಚ್ಚು ಹಾಕುವುದಕ್ಕೂ, ಉಪ್ಪನ್ನು ತಯಾರುಮಾಡುವುದಕ್ಕೂ, ಗಸಗಸೆ ಗಿಡವನ್ನು ಬೆಳಸಲಿಕ್ಕೂ ಹಕ್ಕಿಲ್ಲವಾಯಿತು. ರಾಜ್ಯಾಂಗದ ಉದ್ಯೋಗಗಳಿಗೆ ಐರೋಪ್ಯರನ್ನು ನೇಮಿಸುವ ಸ್ವಾತಂತ್ರ್ಯವೂ ತಪ್ಪಿತು. ಇದರ ಮೇಲೆ ಆಡಳಿತವು ರೆಸಿಡೆಂಟಿನ ಮೇಲ್ವಿಚಾರಣೆಗೆ ಒಳಪಟ್ಟಿತು.

ಇಂಗ್ಲೀಷರು ದಕ್ಷಿಣಕನ್ನಡ ಕೊಯಮುತ್ತೂರುಗಳನ್ನೂ, ಸಮುದ್ರತೀರಕ್ಕೆ ಹೋಗುವ ಕಣಿವೆಗಳ ಗಿರಿದುರ್ಗಗಳನ್ನೂ ಶ್ರೀರಂಗಪಟ್ಟಣವನ್ನೂ ಇಟ್ಟುಕೊಂಡರು. ನಿಜಾಮನಿಗೆ ಗುತ್ತಿ, ಗುರ್ರಂಕೊಂಡ, ಮತ್ತು ಚಿತ್ರದುರ್ಗ ಶೀರ್ಯಗಳ ಉತ್ತರ ಭಾಗಗಳು ದೊರೆತವು. ಇವೆಲ್ಲವೂ ಅವನಿಗೆ ೧೭೯೨ ರಲ್ಲಿ ದೊರೆತ ಸೀಮೆಗಳ ಪಕ್ಕದಲ್ಲಿಯೇ ಇದ್ದುವು. ಮರಾಠರ ಪಾಲಿಗೆ ಹರಪನಹಳ್ಳಿ, ಸುಂಡ ಆನೆಗೊಂದಿ, ಚಿತ್ರದುರ್ಗದ ಹಲವು ಭಾಗಗಳು ಮತ್ತು ಘಟ್ಟದ ಮೇಲಿನ ಬಿದನೂರು ಮುಂತಾದುವು ಬಂದುವು. ಆದರೆ ಕರಾರಿನ ಷರತ್ತುಗಳಿಗೆ ಮರಾಠರು ಒಪ್ಪದೆಹೋಗಲು ಅವರ ಪಾಲಿಗೆ ಬಂದುದನ್ನೂ ಇಂಗ್ಲೀಷರೂ, ನಿಜಾಮನೂ ತಮ್ಮತಮ್ಮಲ್ಲೇ ಹಂಚಿಕೊಂಡರು.

ಈ ಸುಲಿಗೆಯು ಹಂಚಿಕೆಯು ಬಹುಕಾಲ ನಡೆಯಲಿಲ್ಲ. ೧೮೦೦ ರಲ್ಲಿ ನಿಜಾಮನು ತನ್ನಪಾಲಿಗೆ ಬಂದ ಭಾಗವನ್ನೆಲ್ಲ ಇಂಗ್ಲೀಷರಿಗೆ ಬಿಟ್ಟುಕೊಟ್ಟನು. ಹೊಳಲಕೆರೆ ಮಾಯಕೊಂಡ ಮತ್ತು ಹರಿಹರಗಳನ್ನು ಕೊಟ್ಟು ಇಂಗ್ಲೀಷರು ಮೈಸೂರರಸರಿಂದ ಪುಂಗನೂರು, ವೈನಾಡು ಮತ್ತು ಏಳುಸಾವಿರನಾಡಿನ ಹಲವು ಭಾಗಗಳನ್ನು ತೆಗೆದುಕೊಂಡರು. ಅಂದರೆ ಮದರಾಸಾಧಿಪತ್ಯವು ಉತ್ತರದಲ್ಲಿ ಹೊರತು ಮೈಸೂರನ್ನು ಸುತ್ತುಗಟ್ಟಿತು. ೧೮೮೧ ರಲ್ಲಿ ಹುಟ್ಟಿದ ಕರಾರಿನಂತೆ (Instrument of Transfer) ಶ್ರೀರಂಗಪಟ್ಟಣವು ಒಡೆಯರಿಗೆ ಸೇರಿತು. ಆದೇ ವರ್ಷ ಇಂಗ್ಲೀಷರಿಗೆ ತಮ್ಮ ಸೈನ್ಯ ವಾಸಕ್ಕಾಗಿ ಬೆಂಗಳೂರನ್ನು (ದಂಡನ್ನು) ಪಡೆದರು. ಇಂದಿಗೂ ಅದು ಅವರ ವಶದಲ್ಲಿಯೇ ಇದೆ.

ಮರಾಠರ ಗಡಿಯು ೧೮೧೮ ರಲ್ಲಿ ತುಂಗಭದ್ರೆಯವರೆಗೂ ಹಬ್ಬಿತ್ತು. ಈ ಪ್ರಾಂತವನ್ನು ಸಾಧಾರಣವಾಗಿ ಪೇಷ್ವೆಗಳ ಕೈಕೆಳಗಿನ ಮರಾಠಾ ಸರದಾರರೇ ಆಳುತ್ತಿದ್ದರು. ಎರಡನೇ ಬಾಜೀರಾಯನ ಕಾಲದಲ್ಲಿ ಈ ಸರದಾರರು ಪ್ರಬಲರಾದರು. ಅವರಲ್ಲಿ ಹಲವರು ಇಂಗ್ಲೀಷರ ಮರೆಹೊಕ್ಕರು. ಬಾಜೀರಾಯನಿಗೂ ಇಂಗ್ಲೀಷರಿಗೂ ಯುದ್ಧವಾದನಂತರ ೧೮೧೮ ರಲ್ಲಿ ಹುಟ್ಟಿದ ಸತಾರೆಯ ಪ್ರಸಿದ್ಧಪತ್ರಿಕೆಯಂತೆ ಕೆಲವು ಭಾಗಗಳು ಇಂಗ್ಲೀಷರ ಕೈ ಸೇರಿದುವು. ಈ ಸಂಸ್ಥಾನಗಳಿಗೇ 'ದಕ್ಷಿಣಮರಾಠಾ ಸಂಸ್ಥಾನ' ಗಳೆಂಬ ತಪ್ಪು ಹೆಸರು ಬಿದ್ದಿರುವುದು. ಆನಂತರ ಹುಕ್ಕೇರಿ, ಕಿತ್ತೂರು, ನರಗುಂದ ಸಂಸ್ಥಾನಗಳನ್ನೂ ನಷ್ಟ ಸಂತಾನದ (Doctrine of Lapse) ನೆಪದಿಂದ ಇಂಗ್ಲೀಷರು ಸೇರಿಸಿಕೊಂಡರು. ಕಡೆಗೆ ಕೊಲ್ಲಾಪುರ, ಅಕ್ಕಲಕೋಟೆ, ಮುದುವೊಳಲು, ಸಾಂಗಲಿ, ಸೊಂಡೂರು ಮುಂತಾದ ಪುಟ್ಟಪುಟ್ಟ ರಾಜ್ಯಗಳು ಆಶ್ರಿತ ಸಂಸ್ಥಾನಗಳಾದುವು.

ಲಾರ್ಡ್ ಕಾರ್ನವಾಲೀಸನು ೧೮೯೨ ರಲ್ಲಿ ಟೀಪುವಿನಿಂದ ಕೊಡಗನ್ನು ಕಸುಕೊಂಡನಷ್ಟೆ. ಅಂದಿನಿಂದ ಅದು ಇಂಗ್ಲೀಷರ ಮಿತ್ರ

ನಾದ ವೀರರಾಜೇಂದ್ರನ ವಶದಲ್ಲೇ ಇತ್ತು. ೧೮೦೯ ರಲ್ಲಿ ಅವನು ಕಾಲವಾಗಲು, ಬಹುಸನ್ನಾಹದಿಂದ ಅವನ ಸೋದರನಾದ ಲಿಂಗರಾಜನು ಅರಸಾದನು. ೧೮೨೦ ರಲ್ಲಿ ಅವನೂ ಸಾಯಲು ಅವನ ಮಗನು ದೊರೆಯಾದನು. ಈ ವೀರರಾಜನ ಆಳ್ವಿಕೆಯು ಸಹಿಸಲಸಾಧ್ಯವಾಗಲು ಲಾರ್ಡ್ ಬೆಂಟಿಂಕನು ಇವನನ್ನು ಹೊಡಮೋಡಿಸಿ ೧೮೩೪ ರಲ್ಲಿ ಕೊಡಗನ್ನು ಇಂಗ್ಲೀಷರ ಆಡಳಿತಕ್ಕೇ ತೆಗೆದುಕೊಂಡನು. ಆದರೆ ಕೊಡಗಿನರಸರೊಂದಿಗೆ ಇಂಗ್ಲೀಷರು ಮಾಡಿಕೊಂಡಿದ್ದ ಕರಾರಿನ ಪ್ರಕಾರ ಬೆಂಟಿಂಕನ ನಡತೆಯು ನ್ಯಾಯವಾದುದಲ್ಲ.

**ಮುಮ್ಮಡಿ ಕೃಷ್ಣರಾಜ ಒಡೆಯರು** :—ಎಲ್ಲರ ಒಪ್ಪಿಗೆಯಂತೆ ೧೮೦೦ ರಲ್ಲಿ ಒಡೆಯರ ವಂಶದ ಆರುವರ್ಷದ ಕೂಸಿಗೆ ಮೈಸೂರುರಾಜ್ಯ ಪಟ್ಟಾಭಿಷೇಕವಾಯಿತು. ಅವರಿಗೇ ಮುಮ್ಮಡಿ ಕೃಷ್ಣರಾಜ ಒಡೆಯರೆಂದು ಹೆಸರು. ಪೂರ್ಣಯ್ಯನು ದಿವಾನನಾದನು. ಕರ್ನಲ್‌ಕ್ಲೋಸು ರೆಸಿಡೆಂಟಾಗಿಯೂ, ಕರ್ನಲ್ ವೆಲ್ಲೆಸ್ಲಿಯು ಸೈನ್ಯಾಧಿಪತಿಯಾಗಿಯೂ ನೇಮಕ ಮಾಡಲ್ಪಟ್ಟರು. ಅಧಿಕಾರಕ್ಕೆ ಬಂದಕೂಡಲೇ ಪೂರ್ಣಯ್ಯನು ಬರಿದಾಗಿದ್ದ ಬೊಕ್ಕಸವನ್ನು ತುಂಬಿ ೧೮೧೨ ರಲ್ಲಿ ಕಾಲವಾದನು. ಇನ್ನೂ ಅಪರ ವಯಸ್ಸಿನಲ್ಲೇ ಇದ್ದ ಕೃಷ್ಣರಾಜರೇ ಸ್ವತಂತ್ರವಾಗಿ ರಾಜ್ಯಾಡಳಿತ ನಡೆಸಬೇಕಾಯಿತು. ಮಲೆನಾಡಿನ ನಗರ ಪ್ರಾಂತ್ಯದಲ್ಲಿ ಒಡೆಯರ ಆಳ್ವಿಕೆಯಿನ್ನೂ ಚನ್ನಾಗಿ ನೆಲೆಗೊಂಡಿರಲಿಲ್ಲ. ಕಾರಣಾಂತರದಿಂದ ಅಲ್ಲಿ ದಂಗೆಯೆದ್ದಿತು. ಇಂಗ್ಲೀಷರು ದಂಗೆಯನ್ನಡಗಿಸಿ, ಕೃಷ್ಣರಾಜರು ಅರಸುತನಕ್ಕೆ ಅನರ್ಹರೆಂಬ ಕಾರಣದಿಂದ, ಮೈಸೂರನ್ನು ತಾವೇ ಆಕ್ರಮಿಸಲು ನಿಶ್ಚಯಿಸಿದರು.

ದಂಗೆಯು ಅನಿವಾರ್ಯವಾಗಿತ್ತು. ಅಲ್ಲದೆ ಒಡೆಯರು ದಂಗೆಯು ಏಳದಂತಾಗಲಿ, ಅಡಗುವಂತಾಗಲಿ ನೋಡಿಕೊಳ್ಳಲು ಬದ್ಧರಾಗಿರಲಿಲ್ಲ. ಕರಾರಿನ ಪ್ರಕಾರ ಸೈನ್ಯವನ್ನಿಟ್ಟುಕೊಳ್ಳಲು ಇವರಿಗೆ ಅವಕಾಶವೇ ಇರಲಿಲ್ಲ. ಅಲ್ಲದೆ ಮೈಸೂರನ್ನು ಸೇರಿಸಿಕೊಳ್ಳಬೇಕೆಂದು ಇಂಗ್ಲೀಷರು ಮಾಡಿದ ನಿಶ್ಚಯವು ಈ ಕರಾರಿನ ಷರತ್ತುಗಳಿಗೆ ವಿ

ರೋಧವಾಗಿತ್ತು. ಕರಾರಿನಲ್ಲಿ ಪೊಗದಿಯ ಹಣವನ್ನು ತಪ್ಪದೆ ಪಾವತಿ ಮಾಡಬೇಕೆಂಬುದು ಮುಖ್ಯವಾಗಿತ್ತಲ್ಲದೆ ಮತ್ತಿನ್ನೇನೂ ಇರಲಿಲ್ಲ. ಲಾರ್ಡ್‌ಬೆಂಟಿಂಕನ ಆಕ್ಷೇಪಣೆಗಳಿಗೆ ಅವಕಾಶವೇ ಇರಲಿಲ್ಲ. ಆದಕಾರಣ ಒಡೆಯರ ಪಾಲಿಗೆ ಬಂದ ಸೀಮೆಯನ್ನು ಆಕ್ರಮಿಸಿದ ಬೆಂಟಿಂಕನ ಕೃತ್ಯವು ಶುದ್ಧ ಅಧರ್ಮವೆಂದೇ ಹೇಳಬೇಕು. ಕೆಲಕಾಲದ ಮೇಲೆ ಮೂಲೆಗೆ ಕೂಡಿಸಿದ ಒಡೆಯರಿಗೆ ಮೈಸೂರಿನಲ್ಲಿ ಒಂದು ಚಿಕ್ಕ ಭಾಗವನ್ನು ಕೊಡಬಹುದೆಂದು ಉದಾರಿಯಾದ ಬೆಂಟಿಂಕನು ಸೂಚಿಸಿದನು. ದೈವವಶಾತ್ ಈ ಸೂಚನೆಯು ಸಫಲವಾಗಲಿಲ್ಲ. ತಾನು ವಿಲಾಯತಿಗೆ ಹಿಂದಿರುಗಿದ ಮೇಲೆ ಬೆಂಟಿಂಕನು ತನ್ನ ನಡತೆಗಾಗಿ ಬಹು ಪಶ್ಚಾತ್ತಾಪ ಪಟ್ಟನು.

**ದುರಾಕ್ರಮಣ**:—೧೮೩೧ ರಲ್ಲಿ ಕೃಷ್ಣರಾಜ ಒಡೆಯರು ಮೂಲೆಗೆ ಕೂತರು; ಅಧಿಕಾರದಿಂದ ನಿವೃತ್ತರಾದರು. ಮೈಸೂರು ದೇಶವು ಕಮಿಷನರ ಅಧಿಕಾರಕ್ಕೆ ಒಳಗಾಯಿತು. ಗೌರ್ನರ್ ಜನರಲ್ಲರಿಂದ ನೇಮಿಸಲ್ಪಟ್ಟ ಈ ಕಮಿಷನರು ಮೈಸೂರನ್ನು ೫೦ ವರ್ಷಗಳಾಳಿದರು. ಕ್ರಮಕ್ರಮವಾಗಿ ರಾಜ್ಯಾಡಳಿತದಲ್ಲಿ ದೇಶೀಯ ಮಾರ್ಗವು ಮಾಯವಾಯಿತು. ಪಾಶ್ಚಾತ್ಯ ಆಡಳಿತ ಕ್ರಮಗಳು ತಲೆಹಾಕಿದುವು "ಕಮಿಷನರ ಕೈಕೆಳಗಿನ ಅಧಿಕಾರಿಗಳು ದೇಶೀಯರೇ ಆಗಿರಬೇಕು; ಬಳಕೆಯಲ್ಲು ಆಚರಣೆಯಲ್ಲು ಇದ್ದ ದೇಶೀಯ ಆಡಳಿತ ಸಂಸ್ಥೆಗಳನ್ನು ಎಚ್ಚರಿಕೆಯಿಂದ ಕಾಪಾಡಬೇಕು" ಎಂಬೊಂದು ಗೊತ್ತುವಳಿಯಿದ್ದರೂ ಅನೇಕ ವೇಳೆ ಐರೋಪ್ಯರೇ ಫೌಜುದಾರರಾಗಿಯೂ, ಅಸಿಸ್ಟೆಂಟ್ ಸೂಪರಿಂಟೆಂಡೆಂಟರಾಗಿಯೂ ನೇಮಿಸಲ್ಪಡುತ್ತಿದ್ದರು. ಈ ಸರಕಾರವು ಇಂಡಿಯಾದೇಶಕ್ಕೆ ಬಂದ ಆಂಗ್ಲೇಯರಿಗೆ ಮುಪ್ಪಾದ ಹುದ್ದೆಗಳನ್ನು ಸಂಪಾದಿಸಿಕೊಳ್ಳಲು ಅನುಕೂಲವೂ ಫಲವತ್ತೂ ಆದ ಕ್ಷೇತ್ರವಾಗಿ ಪರಿಣಮಿಸಿತು. ರಾಜ್ಯವೆಂಟು ಜಿಲ್ಲೆಗಳಾಗಿ ವಿಭಾಗವಾಯಿತು. ಇಲ್ಲಿ ಪಂಜಾಬಿನಲ್ಲಿದ್ದಂತೆ ನೆಲಗಂದಾಯವು ಏರ್ಪಾಡಾಯಿತು. ೧೮೬೩ ರಲ್ಲಿ ಭೂಮಿಯ ಅಳತೆಯು ನಿಷ್ಕರ್ಷೆಯು ಮೊದಲಾಯಿತು. ೧೮೭೩ ರಲ್ಲಿ ಜಿಲ್ಲೆ

ಗೊಬ್ಬ ಡೆಪ್ಯೂಟೀಕಮಿಷನರ ಹುದ್ದೆಗೆ ಆರಂಭವಾಯಿತು. ಆಗಲೇ ಮುನಸೀಫ್‌ಕೋರ್ಟುಗಳೂ ಬಂದುವು. ಕರ್ಬನಿನ ಅನಂತರ ಬಂದ ಬೌರಿಂಗನ ಕಾಲದಲ್ಲಿ ರಾಜ್ಯಾಡಳಿತದಲ್ಲಿ ಅನೇಕ ಬದಲಾವಣೆಗಳಾದುವು.

ಆದರೂ ಕೃಷ್ಣರಾಜ ಒಡೆಯರೇನೋ ೧೮೪೪ ರಿಂದ ಒಂದೇ ಸಮನಾಗಿ ತಮ್ಮ ಹಕ್ಕನ್ನು ಸಾಧಿಸುತ್ತಲೇ ಇದ್ದರು. ಈಸ್ಟ್ ಇಂಡಿಯಾ ಕಂಪೆನಿ ಡೈರೆಕ್ಟರುಗಳಿಗಿದು ಸರಿಬೀಳಲಿಲ್ಲ. ಡಾಲ್‌ಹೌಸಿಯು ಅಧಿಕಾರಕ್ಕೆ ಬಂದ ಮೇಲೆ ಕೃಷ್ಣರಾಜರು ಸಂತತಿಯಿಲ್ಲದೆ ಸತ್ತಾರೆಂದೂ, ಮೈಸೂರು ಆಗ ತಂಟೆಯಿಲ್ಲದೆ ಇಂಗ್ಲೀಷರ ಬಾಯಿಯಿಗೆ ತುತ್ತಾಗುವುದೆಂದೂ ಒಳಗೊಳಗೇ ಅಂದುಕೊಂಡು ಹಿಗ್ಗುತ್ತಿದ್ದಿರಬಹುದು. ೧೮೬೧ ರಲ್ಲಿ ಮಹಾರಾಜರು ಮತ್ತೊಮ್ಮೆ ಉಚಿತ ರೀತಿಯಲ್ಲಿ ಲಾರ್ಡ್ ಕ್ಯಾನಿಂಗನಿಗೆ ಬಂದು ಖರೀತವನ್ನು ಬರೆದು ಕಳುಹಿಸಿದರು "ನೀವು ಮತ್ತೆ ರಾಜ್ಯಾಡಳಿತವನ್ನು ವಹಿಸಲೆಳಸುವುದು ಮೈಸೂರು ಪ್ರಜೆಗಳ ಸುಖಶಾಂತಿಗಳಿಗನುಗುಣವಾಗಿಲ್ಲ" ಎಂಬ ಪ್ರತ್ಯುತ್ತರವು ಅವರಿಗೆ ಬಂತು. ಎರಡುವರ್ಷಗಳ ತರುವಾಯ ವೃದ್ಧರಾದ ಮಹಾರಾಜರು ೧೮೬೫ ರಲ್ಲಿ ಎರಡು ವರ್ಷವಯಸ್ಸಿನ ಚಾಮರಾಜರನ್ನು ದತ್ತು ಸ್ವೀಕಾರಮಾಡಿದರು. ೧೮೬೭ ರಲ್ಲಿ ಸರ್ ರಾಲಿನ್‌ಸನ್ ಮುಂತಾದ ಹಲವರು ರಾಜರಿಗೆ ಪುತ್ರಸ್ವೀಕಾರವಾಗಿರುವುದು; ೧೮೫೭ ರಲ್ಲಿದ್ದ ದಂಗೆಯ ಕಾಲದಲ್ಲೂ ದ್ರೋಹವನ್ನೆಣಿಸದೆ ಇಂಗ್ಲೆಂಡಿಗೆ ರಾಜಭಕ್ತಿಯನ್ನು ತೋರಿಸಿದರು; ಎಂದನೇಕ ಬಗೆಯಾಗಿ ಸೆಕ್ರೆಟರಿ ಆಫ್‌ಸ್ಟೇಟಿನ ಮುಂದೆ ಹೇಳಿದರು. ಅಲ್ಲದೆ ಮೈಸೂರಿನ ಅನೇಕ ಹುದ್ದೇದಾರರು ಒಡೆಯರಿಗೇ ಮತ್ತೆ ರಾಜ್ಯವನ್ನು ಹಿಂತಿರುಗಿ ಕೊಡಬೇಕೆಂದು ಪಾರ್ಲಿಮೆಂಟಿಗೆ ಅರ್ಜಿಯನ್ನು ಬರೆದುಕೊಂಡರು. ಕಡೆಗೆ ಬ್ರಿಟಿಷರು ಮುಂದೆ ಪ್ರಾಪ್ತವಯಸ್ಕರಾಗುತ್ತಲೇ ಚಾಮರಾಜರು ಪಟ್ಟಕ್ಕೆ ಬರತಕ್ಕವರೆಂದೊಪ್ಪಿ, ಅವರಿಗೆ ಉಚಿತವಾದ ಶಿಕ್ಷಣವನ್ನು ಕೊಡಿಸಲು ತೀರ್ಮಾನಮಾಡಿದರು. ಕೊನೆಗೆ ತಮ್ಮ ಸಂತತಿಗಾದರೂ ರಾಜ್ಯಲಾಭವಾಗುವುದಲ್ಲಾ ಎಂಬ ಸಮಾಧಾನ

ದಿಂದ ಮುಮ್ಮಡಿ ಕೃಷ್ಣರಾಜರು ತಮ್ಮ ೭೪ ನೆಯ ವಯಸ್ಸಿನಲ್ಲಿ (೧೮೬೮) ಸ್ವರ್ಗಸ್ಥರಾದರು. ಕೃಷ್ಣರಾಜ ಒಡೆಯರ ನಿಜವಾದ ಗುಣ ದುರ್ಗುಣಗಳನ್ನರಿತವರೇ ಅಪೂರ್ವ. ಆಕಾರಣವಾಗಿ ಅವರ ಮೇಲೆ ಅನೇಕ ದೋಷಾರೋಪಣೆಗಳಾಗಿಹೋದುವು. ಅವರಾಳ್ವಿಕೆಯಲ್ಲಿ ಅವ್ಯವಸ್ಥೆಯಿದ್ದುದೇನೋ ನಿಜ. ಆದರೆ ಇದಕ್ಕೆ ಇಂಗ್ಲೀಷರ ಔದಾಸೀನ್ಯವೂ, ಮಂತ್ರಾಭಾವವೂ ಕಾರಣವಾಗಿದ್ದಿತೆಂಬುದನ್ನು ಮರೆಯಲಾಗದು. ಮಹಾರಾಜರು ಪ್ರಸಿದ್ಧ ಕವಿಗಳೂ, ಸಾಹಿತ್ಯಕಲಾಪೋಷಕರೂ ಆಗಿದ್ದರು. ಅವರ ಸವಿಹೆಸರನ್ನಿಂದಿಗೂ ಮೈಸೂರಿನವರು ಮರೆತಿಲ್ಲ ' ವಿಚಾರಮಾಡಿ ನೋಡಿದರೆ ಅವರು ಮಾಡಿದ ಕೆಡಕಿಗಿಂತಲೂ ಅವರಿಗಾದ ಕೆಡಕೇ ಅಧಿಕವೆಂದು ಸ್ಪಷ್ಟವಾಗುತ್ತದೆ.

**ಶ್ರೀ ಚಾಮರಾಜ ಒಡೆಯರು** :—ಶಿಕ್ಷಕರೂ, ಪೋಷಕರೂ ಬಾಲ್ಯಾವಸ್ಥೆಯಲ್ಲಿದ್ದ ಚಾಮರಾಜರ ಶಿಕ್ಷಣಕ್ಕೆ ಪೂರ್ಣ ಲಕ್ಷ್ಯವನ್ನು ಕೊಟ್ಟರು. ೧೮೮೧ ರಲ್ಲಿ ಅವರು ಪ್ರಾಪ್ತವಯಸ್ಕರೂ ಆದರು. ಇಂಗ್ಲೀಷರು ರಾಜ್ಯವನ್ನೂ ಅವರಿಗೆ ಹಿಂದಿರುಗಿ ಕೊಟ್ಟರು. ಮಹಾರಾಜರು ತಮ್ಮ ಉದ್ದೇಶಗಳನ್ನು ಪ್ರಸಿದ್ಧಪತ್ರಿಕೆಯ ಮೂಲಕ ತಿಳಿಯಪಡಿಸಿದರು. ರಂಗಾಚಾರ್ಲುಯವರು ದಿವಾನರಾದರು. ಮಂತ್ರಾಲೋಚನಾಸಭೆಗವರು ಅಧ್ಯಕ್ಷರಾದರು. ಪ್ರಜಾಪ್ರತಿನಿಧಿಸಭೆಯೊಂದು ಏರ್ಪಡಾಯಿತು. ದಸರಾಕಾಲದಲ್ಲಿ ಈ ಸಭೆಯು ಕೂಡುತ್ತಿತ್ತು. ಪ್ರಜೆಗಳೆಲ್ಲ ತಮ್ಮ ಹೇಳಿಕೆಗಳನ್ನಲ್ಲಿ ಅರಿಕೆ ಮಾಡುತ್ತಿದ್ದರು. ೧೮೮೭ ರ ವರೆಗೂ ಈ ಸಭಿಕರಿಗೆ ಹೆಚ್ಚು ಅಧಿಕಾರಗಳಿರಲಿಲ್ಲ. ಅನಂತರ ಈ ಸದಸ್ಯರಿಗೆ ಬೇಕಾದ ದ್ರವ್ಯಾದಾಯಯೋಗ್ಯತೆಯೂ ನಿಷ್ಕರ್ಷೆಯಾಯಿತು ೧೮೯೧ ರಲ್ಲಿ ಇನ್ನೂ ಸಭಿಕರ ಅಧಿಕಾರವು ಹೆಚ್ಚಿತು. ರಂಗಾಚಾರ್ಲುಯವರ ಕಾಲದಲ್ಲಿ ಆದಾಯವ್ಯಯಗಳು ಸರಿಹೋದುವಲ್ಲದೆ ರಾಜಕೀಯ ಸುಧಾರಣೆಗಳೂ ಆದುವು. ೧೮೮೩ ರಲ್ಲಿ ಸರ್. ಕೆ. ಶೇಷಾದ್ರಿಅಯ್ಯರು ದಿವಾನರಾಗಿ ತಮ್ಮ ಬುದ್ಧಿಕುಶಲತೆಯಿಂದ ಕೆಲಸಮಾಡಿ ಪ್ರಜೆಗಳ ಕೃತಜ್ಞತೆಗೆ ಪಾತ್ರರಾದರು.

ಸಮರ್ಥರಾದ ಚಾಮರಾಜೇಂದ್ರರು ದೇಶದ ಹೊರಗೂ ಒಳಗೂ ಸಂಚಾರಮಾಡಿ, ಮೈಸೂರಿನ ಘನತೆಯನ್ನು ಹೆಚ್ಚಿಸಿದರು. ಕಲ್ಕತ್ತಾನಗರದಲ್ಲಿವರು ಕಾಲವಾಗಲು, ಈಗ ಆಳುತ್ತಿರುವ ನಮ್ಮ ಶ್ರೀಮತ್ಕೃಷ್ಣರಾಜೇಂದ್ರ ಒಡೆಯರು ತಮ್ಮ ಹತ್ತನೇ ವಯಸ್ಸಿನಲ್ಲಿ ಪಟ್ಟಕ್ಕೆ ಬಂದರೂ, ರಾಜ್ಯಾಡಳಿತವು ಮಾತೂಶ್ರೀ ವಾಣೀವಿಲಾಸ ಸನ್ನಿಧಾನದವರ ಕೈಲಿತ್ತು. ೧೯೦೨ ರಲ್ಲಿ ಕೃಷ್ಣರಾಜ ಒಡೆಯರು ಪ್ರಾಪ್ತವಯಸ್ಕರಾಗಲು ಅವರೇ ಅಧಿಕಾರವನ್ನು ವಹಿಸಿದರು.

ಶೇಷಾದ್ರಿಅಯ್ಯರವರ ಕಾಲದಲ್ಲಿ ಸರಕಾರದ ಖಾತೆಗಳೆಲ್ಲವೂ ವಿಂಗಡಿಸಲ್ಪಟ್ಟವು, ಚೀಫ್‌ಕೋರ್ಟು ತೆರೆಯಲ್ಪಟ್ಟಿತು. ಚಿನ್ನದಗಣಿ, ರೈಲ್ವೆಬಡಾವಣೆ, ವಿದ್ಯುಚ್ಛಕ್ತಿಯ ಪ್ರತಿಷ್ಠೆ ಮುಂತಾದ ಸಂಪದಭಿವೃದ್ಧಿ ಕಾರ್ಯಗಳಭಿವೃದ್ಧಿಗೆ ಬಂದುವು. ಅವರ ಅನಂತರ ಸರ್. ಪಿನ್, ಕೃಷ್ಣಮೂರ್ತಿ, ವಿ. ಪಿ. ಮಾಧವರಾವ, ಟಿ. ಆನಂದರಾವ, ಸರ್. ಯಂ. ವಿಶ್ವೇಶ್ವರಯ್ಯ, ಸರ್. ಯಂ. ಕಾಂತರಾಜೇ ಅರಸುಮುಂತಾದವರು ದಿವಾನರಾದರು. ವಿಶ್ವೇಶ್ವರಯ್ಯನವರ ಕಾಲದಲ್ಲಿ ವಿಶ್ವವಿದ್ಯಾನಿಲಯ, ಕೃಷ್ಣರಾಜಸಾಗರ, ಭದ್ರಾವತಿಯ ಕಬ್ಬಿಣದ ಕಾರ್ಖಾನೆ ಮುಂತಾದುವು ಮುಂದಕ್ಕೆ ಬಂದುವು.

೧೯೦೭ ರಿಂದ ರಾಜಕೀಯ ಸುಧಾರಣೆಗಳಿಗೆ ಮೊದಲಾಯಿತು. ನ್ಯಾಯವಿಧಾಯಕ ಸಭೆಯಾಯಿತು. ಮುಂದಿನ್ನೂ ಸುಧಾರಿಸಲು ಒಂದು ಉಪಸಭೆಯು ಏರ್ಪಾಡಾಯಿತು. ಅದರ ಸಲಹೆಯಂತೆ ಪ್ರಜಾಪ್ರತಿನಿಧಿ ಸಭೆಗೆ ಶಾಸನ ಬದ್ಧವಾದ ಒಂದು ಗೌರವ ಬಂತು. ೨೫೦ ಮಂದಿ ಪ್ರತಿನಿಧಿಗಳಾದರು. ಕೋಮುವಾರು ಪ್ರಾತಿನಿಧ್ಯವು ದೊರೆಯಿತು. ಆದಾಯ ವೆಚ್ಚಗಳನ್ನು ಚರ್ಚಿಸುವ ಅಧಿಕಾರವು ಸಿಕ್ಕಿತು. ಅಲ್ಲದೆ ನ್ಯಾಯವಿಧಾಯಕ ಸಭೆಯಲ್ಲೂ ಸರಕಾರ ಸಭಿಕರಲ್ಲದವರ ಸಂಖ್ಯೆಯು ಹೆಚ್ಚಿತು.

೧೯೨೩ ರಲ್ಲಿ ಪ್ರಜಾಭಿಮತಕ್ಕೆ ಒಳಪಟ್ಟ ಸರಕಾರಸ್ಥಾಪನೆಯ ಉದ್ದೇಶದಿಂದ ಕೊಡಗಿನಲ್ಲಿ ಒಂದು ನ್ಯಾಯ ವಿಧಾಯಕಸಭೆ

ಯು ಏರ್ಪಾಡಾಯಿತು. ಅದರ ಅಧಿಕಾರವು ಬಹಳ ಕಡಮೆ. ಆದ ರೂ ಆ ಪ್ರಾಂತ್ಯದಲ್ಲಿ ಪ್ರಜಾಭಿಮತ ಪೋಷಕವಾದ ಸಂಸ್ಥೆಗಳ ಜನ ನಕ್ಕೆ ಆರಂಭವಾಗಿದೆ.

'ದಕ್ಷಿಣಮರಾಠಾ ರಾಜ್ಯ'ಗಳೆಂಬ ಆಶ್ರಿತಸಂಸ್ಥಾನಗಳು ಒಬ್ಬ ಬ್ರಿಟಿಷ ರಾಜಕೀಯ ಅಧಿಕಾರಿಯ ಕೈಕೆಳಗಿವೆ. ಅಲ್ಲಿನ ಜನ ರಲ್ಲೂ ಅವರ ಸುತ್ತಮುತ್ತಲೂ ನಡೆಯುತ್ತಿರುವ ಚಳವಳಿಯ ಪ್ರಭಾ ವದಿಂದ ಜಾಗ್ರತಿಯುಂಟಾಗುತ್ತಿದೆ. ಈ ಸಂಸ್ಥಾನದ ಕನ್ನಡಿ ಗರಿಗೆ ಅಭಿವೃದ್ಧಿ ವಿಚಾರದಲ್ಲಿ ತಕ್ಕ ಪ್ರೋತ್ಸಾಹವಾಗಲಿ ಗೌರವವಾ ಗಲಿ ದೊರೆಯುತ್ತಿಲ್ಲ.

ನಿಜಾಮಕರ್ಣಾಟಕವೆಲ್ಲ ಆಡಳಿತಕ್ಕಾಗಿ ಒಂದು ಭಾಗವಾಗಿ ಏರ್ಪಟ್ಟಿದೆ. ಅದಕ್ಕೆ ಸುಭಾ ಗುಲ್ಬರ್ಗ ಅಥವಾ ಕರ್ಣಾಟಕ ಪ್ರಾಂತ ವೆಂದು ಹೆಸರು.

ಬ್ರಿಟಿಷ ಕರ್ಣಾಟಕದಲ್ಲಿ ಉಂಟಾಗಿರುವ ಸರ್ವತೋಮುಖ ಜಾಗ್ರತಿಯು ಕಡಮೆಯಾಗಿಲ್ಲ. ಆದರೆ ದೇಶವು ಛಿದ್ರಛಿದ್ರವಾಗಿರುವು ದರಿಂದಲೂ, ಆಧಿಪತ್ಯದ ಮುಖ್ಯಪಟ್ಟಣಗಳಿಂದ ದೂರವಾಗಿರುವ ದೆಸೆಯಿಂದಲೂ, ಅಲ್ಲಿಯ ಕನ್ನಡಿಗರು ರಾಜಕೀಯ ವಿಚಾರಗಳಲ್ಲಿ ಮುಂದಾಳುಗಳಾಗಿರಲು ಅವಕಾಶವಿಲ್ಲವಾಗಿದೆ. ೧೯೨೦ ರಲ್ಲಿ ಕರ್ಣಾ ಟಕಕ್ಕೆ ಒಂದು ಪ್ರಾಂತ್ಯಸ್ಥಾನವು ಸಿಕ್ಕಿತು. ಪ್ರತ್ಯೇಕ ಪ್ರಾಂತಿಕ ಸಭೆಯು ಏರ್ಪಾಡಾಯಿತು. ಅಂದಿನಿಂದ ಅಖಿಲ ಕರ್ಣಾಟಕದಲ್ಲಿ ಏಕೀಕರಣೋದ್ಯಮವು, ಮಿಕ್ಕಪ್ರಾಂತ್ಯಗಳಂತೆಯೇ ಮಹತ್ವಾಕಾಂ ಕ್ಷೆಯೂ ಹುಟ್ಟುತ್ತಿದೆ. ದೇಶ, ಭಾಷೆ, ಸಂಸ್ಕೃತಿ ಇತ್ಯಾದಿ ಪ್ರತಿ ರಾಷ್ಟ್ರೀಯಾಂಗದಲ್ಲೂ ಅಭಿವೃದ್ಧಿ ಸೂಚಕ ಚಿಹ್ನೆಗಳು ಕಾಣಬರು ತ್ತಿವೆ. ಮುಂದಿನ ಪ್ರಕರಣದಲ್ಲಿ ಈ ಸೂಚನೆಗಳ ಮತ್ತೂ ಪ್ರಯತ್ನ ಗಳ ವಿಷಯವು ವಿಶದೀಕರಿಸಲ್ಪಟ್ಟಿದೆ.

ಅ. ಭಾ.

IV

# ಪುನರುಜ್ಜೀವನ

---

ವಿಜಯನಗರ ಚಕ್ರಾಧಿಪತ್ಯದ ಪತನಕ್ಕೆ ಮೊದಲು ಕರ್ಣಾಟಕರಾಷ್ಟ್ರವು ಸರ್ವಾಂಗ ಪರಿಪೂರ್ಣವಾಗಿದ್ದು ಮಹೋನ್ನತಿಯನ್ನು ಪಡೆದಿದ್ದಿತೆಂದು ಹಿಂದಿನ ಪ್ರಕರಣಗಳಿಂದ ವಿಶದವಾಗುವುದು. ತಾಳಿಕೋಟೆಯ ಯುದ್ಧದಲ್ಲಿ ಕರ್ಣಾಟಕದ ಐಕ್ಯತೆಗೆ ಭಂಗಬಂತು ತುಂಗಭದ್ರೆಯಿಂದ ಉತ್ತರಕ್ಕಿದ್ದ ಕರ್ಣಾಟಕವು ಬಿಜಾಪುರದ ಸುಲ್ತಾನರಿಗೂ, ಘಟ್ಟದಸೀಮೆಯು ಬಿದನೂರಿನ ನಾಯಕರಿಗೂ, ತುಂಗಭದ್ರೆಯಿಂದ ದಕ್ಷಿಣಭಾಗವು ಮೈಸೂರೊಡೆಯರಿಗೂ ಸೇರಿತು. ಬಿಜಾಪುರದ ಸುಲ್ತಾನರು ಮಹರಾಷ್ಟ್ರರನ್ನು ಜಯಿಸಿದುದರಿಂದ, ತಮ್ಮ ಸಂಸ್ಕೃತಿಯನ್ನು ಕನ್ನಡನಾಡಿನಲ್ಲಿ ಹರಡಿದುದಲ್ಲದೆ, ಮಹಾರಾಷ್ಟ್ರ ಭಾಷೆಯನ್ನೂ ರಾಜಕೀಯ ಭಾಷೆಯಾಗಿ ಮಾಡಿದರು. ಈ ದುಃಸ್ಥಿತಿಯು ಎರಡು ಶತಮಾನಗಳವರೆಗೂ ಅವಿಚ್ಛಿನ್ನವಾಗಿದ್ದಿತು. ಅನಂತರ ಹಠಾತ್ತಾಗಿ ಕರ್ಣಾಟಕವೆಲ್ಲ ಸ್ವಲ್ಪಕಾಲ ಹೈದರ್ ಮತ್ತು ಟೀಪ್ಪು ಸುಲ್ತಾನರ ಆಳ್ವಿಕೆಗೊಳಪಟ್ಟಿತು. ಆದರೆ ಛಿದ್ರಛಿದ್ರವಾಗಿ ಚದುರಿಹೋಗಿದ್ದ ಕರ್ಣಾಟಕ ಪ್ರಾಂತ್ಯಗಳು ಒಂದಾಗಿ ಸೇರಿ ತಮ್ಮ ಪೂರ್ವದ ಸಂಸ್ಕೃತಿ ಮತ್ತು ಸಾಹಿತ್ಯಗಳನ್ನು ಪುನರುಜ್ಜೀವನಮಾಡಲು ಸಾಕಾದಷ್ಟು ಕಾಲ ಸುಲ್ತಾನರ ಆಡಳಿತವು ನಡೆಯಲಿಲ್ಲ. ಅಷ್ಟೇ ಅಲ್ಲದೆ ಬಿಜಾಪುರದರಸರ ಮತ್ತು ಮಹರಾಷ್ಟ್ರರ ತೊಡಕಿಗೊಳಪಡದ ಕರ್ಣಾಟಕ ಭಾಗವು ಹೈದರ್ ಮತ್ತು ಟೀಪ್ಪುಗಳ ಕಾಲದಲ್ಲಿ ಮಹಮ್ಮದೀಯ ಸಂಸ್ಕೃತಿಯ ಮತ್ತು ಮಹರಾಷ್ಟ್ರಭಾಷೆಯ ಗೊಂದಲದಲ್ಲಿ ಬಿತ್ತು.

ಶ್ರೀರಂಗಪಟ್ಟಣದ ನಾಶವೂ ಟೀಪ್ಪುವಿನ ಪರಾಭವವೂ, ಕರ್ಣಾಟಕದ ಅವನತಿಯ ಮಾರ್ಗದಲ್ಲಿ ಎರಡನೆಯ ಹೆಜ್ಜೆಯಾಗಿದೆ. ಬ್ರಿಟಿ

ಷರು, ಮಹರಾಷ್ಟ್ರರು, ಮೈಸೂರೊಡೆಯರು ನಿಜಾಮರು ಮತ್ತು ಕೊಡಗಿನ ರಾಜರು ಕರ್ನಾಟಕವನ್ನು ಹಂಚಿಕೊಂಡರು. ಇದಾದ ಇಪತ್ತು ವರ್ಷಗಳೊಳಗೆ ಮಹಾರಾಷ್ಟ್ರರ ಹೆಸರೇ ಇಲ್ಲದಂತಾಯಿತು. ಇನ್ನಿಪ್ಪತ್ತು ವರ್ಷಗಳಲ್ಲಿ ಕೊಡಗೂ ಇಂಗ್ಲೀಷರಿಗೆ ಸೇರಿ ಹೋಯಿತು. ಅಂತು ಸಮಾರು ೧೮೪೯ ಕ್ಕೆ ಒಡೆಯರ ವಶದಲ್ಲಿರುವ ಮೈಸೂರು ರಾಜ್ಯ, ನಿಜಾಮ ಕರ್ನಾಟಕ ಮತ್ತು ದಕ್ಷಿಣ ಮಹಾರಾಷ್ಟ್ರ ಸ್ವತಂತ್ರಸಂಸ್ಥಾನಗಳೆಂದು ಆಭಾಸವಾಗಿ ಕರೆಯಲ್ಪಡುವ ಕರ್ನಾಟಕ ಭಾಗ ಇವನ್ನು ಬಿಟ್ಟು ಮಿಕ್ಕ ಕನ್ನಡ ನಾಡೆಲ್ಲ, ಇಂಗ್ಲೀಷರ ಸ್ವಾಧೀನಕ್ಕೆ ಬಂದಿತು. ಮೈಸೂರು ಪ್ರಾಂತ್ಯವೂ ೧೮೩೧ರಿಂದ ಅರ್ಧಶತಮಾನಕಾಲ ಇಂಗ್ಲೀಷರ ಆಳ್ವಿಕೆಯಲ್ಲೇ ಇದ್ದಿತು.

ಬ್ರಿಟಿಷರ ಸ್ವಾಧೀನದಲ್ಲಿರುವ ಕರ್ನಾಟಕವನ್ನೆಲ್ಲ ಒಂದಾಧಿಪತ್ಯವಾಗಿ ಮಾಡಬಹುದಾಗಿತ್ತು. ಆದರೆ ಆಳರಸರು ಪರಾಜಿತ ಜನರಲ್ಲಿ ಒಗ್ಗಟ್ಟು, ಭಾಷಾಭಿಮಾನ, ಸಾಂಸ್ಕೃತಿಕ ಏಕೀಭಾವ ಮುಂತಾದವುಗಳ ಏಳಿಗೆಗೆ ಪ್ರೋತ್ಸಾಹವನ್ನು ಕೊಡುವರೆಂದು ಬಯಸುವದು ಮರುಳುತನ. ಆಡಳಿತ ಸೌಕರ್ಯಕ್ಕಾಗಿ ಇಂಗ್ಲೀಷಿನವರು ಕರ್ನಾಟಕವನ್ನು ಕತ್ತರಿಸಿ ಪರಭಾಷೆಗಳನ್ನಾಡುವ ಅಸಂಖ್ಯಾತ ಜನರಿರುವ ಬೇರೆ ಬೇರೆ ಪ್ರಾಂತ್ಯಗಳಲ್ಲಿ ಕನ್ನಡಿಗರನ್ನು ಬೆರಸಿದರು. ಮಹಾರಾಷ್ಟ್ರ ಮತ್ತು ಘುರ್ಜರರ ಪ್ರಾಂತ್ಯವಾದ ಬೊಂಬಾಯಾಧಿಪತ್ಯಕ್ಕೆ ಬೆಳಗಾಂವಿ, ಧಾರವಾಡ, ಬಿಜಾಪುರ ಮತ್ತು ಕಾರವಾರ ಜಿಲ್ಲೆಗಳನ್ನೂ ಆಂಧ್ರ ಮತ್ತು ದ್ರಾವಿಡರ ಪ್ರಾಂತ್ಯವಾದ ಮದರಾಸಾಧಿಪತ್ಯಕ್ಕೆ ಬಳ್ಳಾರಿ, ಅನಂತಪುರ ಜಿಲ್ಲೆಗಳನ್ನೂ, ಶೇಲಂ, ಕೊಯಮತ್ತೂರು, ನೀಲಗಿರಿ ಜಿಲ್ಲೆಗಳನ್ನೂ ಸೇರಿಸಿ ಬಿಟ್ಟರು. ದಕ್ಷಿಣ ಕನ್ನಡದವರು ಆಂಧ್ರ ಮತ್ತು ದ್ರಾವಿಡ ನಾಡುಗಳ ಕನ್ನಡಿಗರೊಂದಿಗೆ ಬೆರೆಯದಂತೆ ಪೂರ್ವದಲ್ಲಿ ಮೈಸೂರನ್ನೂ, ದಕ್ಷಿಣದಲ್ಲಿ ಮಲೆಯಾಳವನ್ನೂ ತಂದೊಡ್ಡಿದರು. ಯಾವ ಆಧಿಪತ್ಯಕ್ಕೂ ಸೇರಿಸದೆ ಕೊಡಗಿಗೇ ಬೇರೆ ಅಧಿಕಾರಿಯನ್ನು ಏರ್ಪಡಿಸಿ ಕೊಡಗಿನವರಿಗೆ ಇತರ ಕನ್ನಡಿಗರ ಸಂಪರ್ಕವೇ ಇಲ್ಲದಂತೆ ಮಾಡಿದರು.

ಬೊಂಬಾಯಿ ಮತ್ತು ಮದ್ರಾಸಾಧಿಪತ್ಯಗಳಲ್ಲಿರುವ ಕನ್ನಡಿಗರ ಸಂಖ್ಯೆಯು ಇತರರಿಗಿಂತ ತೀರ ಅತ್ಯಲ್ಪವಿರುವದಲ್ಲದೆ, ಕನ್ನಡ ಜಿಲ್ಲೆಗಳು ರಾಜಕೀಯ ಕೇಂದ್ರಸ್ಥಾನಗಳಿಗೆ ಬಹಳ ದೂರದಲ್ಲಿರುವದರಿಂದ ಆಯಾ ಸರ್ಕಾರಗಳ ಮೇಲೆ ಕನ್ನಡಿಗರ ವರ್ಚಸ್ಸು ಬೀಳಲವಕಾಶವಿಲ್ಲವಾಯಿತು. ಗುಲ್ಬರ್ಗ, ಬೀರ್, ಬಿದರೆ, ರಾಯಚೂರಿನಲ್ಲಿರುವ ನಿಜಾಮು ಕನ್ನಡಿಗರೂ ಕೂಡ ರಾಜಧಾನಿಯಾದ ಹೈದರಾಬಾದಿನಿಂದ ಬಹಳ ದೂರದಲ್ಲಿರುವರಲ್ಲದೆ ಪ್ರಬಲಸಂಖ್ಯಾತರಾದ ಆಂಧ್ರ ಮರಾಠರ ಮಧ್ಯೆ ತಲೆಯೆತ್ತಲಾರದಾದರು. ಆದ್ದರಿಂದ ಕನ್ನಡಿಗರು ಸ್ವಲ್ಪ ಸ್ವಲ್ಪವಾಗಿ ಸುತ್ತಮುತ್ತಲಿನ ಅನ್ಯ ಭಾಷೆ ಮತ್ತು ಸಂಸ್ಕೃತಿಗಳಲ್ಲಿ ಬೆರೆತು ತಮ್ಮಿರುವಿಕೆಯನ್ನು ಮರೆತರು. ಸುಮಾರು ಒಂದು ಶತಮಾನದಿಂದ ಈ ದುಃಸ್ಥಿತಿಯು ನಡೆದು ಬಂದಿದೆ. ಇಡೀ ಕರ್ಣಾಟಕದಿಂದ ಒತ್ತಟ್ಟಿಗೆತ್ತಿರಿಸಲ್ಪಟ್ಟ ಚಿಕ್ಕ ಕೊಡಗು ಪ್ರಾಂತ್ಯವು ಸಾಹಿತ್ಯಜ್ಞಾನವನ್ನೇ ತೊರೆಯಿತು. ಮೈಸೂರು ರಾಜ್ಯವು ಕರ್ಣಾಟಕ ಅರಸರ ಅಧೀನದಲ್ಲಿದ್ದರೂ, ಮಹಮ್ಮದೀಯ, ಆಂಗ್ಲೇಯ ಸರ್ಕಾರಗಳ ಸಂಪರ್ಕದಿಂದ ಭಾಷಾಪಾರಶುದ್ಧ್ಯವನ್ನೂ ಕಳೆದುಕೊಂಡಿತು. ಕನ್ನಡ ಪತ್ರ ಪುಸ್ತಕಗಳಲ್ಲಿ ಕೂಡ ಇಂಗ್ಲೀಷು ಸಂಖ್ಯೆಗಳನ್ನೂ, ಪರಿಷಿಯನ್ ಪದಗಳನ್ನೂ ಅಲ್ಲಿನ ಕನ್ನಡಿಗರು ಉಪಯೋಗಿಸುತ್ತಾರೆ.

ಕರ್ಣಾಟಕವು ಇಂಗ್ಲೀಷರ ಸ್ವಾಧೀನಕ್ಕೆ ಬಂದಮೇಲೆ, ಅದರ ಸಾಹಿತ್ಯ ಸಂಸ್ಕೃತಿಗಳು ತೀರ ದುಃಸ್ಥಿತಿಗೆ ಬಂದವು. ಮಂಗಳೂರು ಜಿಲ್ಲೆಯನ್ನು ಬಿಟ್ಟು ಮಿಕ್ಕ ಬ್ರಿಟಿಷ್ ಕರ್ಣಾಟಕ ಭಾಗಗಳಲ್ಲಿ ಮಕ್ಕಳಿಗೆ ಕೂಡ ಮರಾಠಿ, ತಮಿಳು, ತೆಲುಗು ಮುಂತಾದ ಪರಭಾಷೆಗಳಲ್ಲಿ ಶಿಕ್ಷಣ ನಡೆಯಲಾರಂಭವಾಯಿತು. ನಾಟಕ ರಂಗಗಳಲ್ಲೂ, ಉಪನ್ಯಾಸ ಮಂದಿರಗಳಲ್ಲೂ, ಕೋರ್ಟು ಕಛೇರಿಗಳಲ್ಲೂ, ಕಡಗೆ ಹಾಡು ಹರಿಕೀರ್ತನೆಗಳಲ್ಲೂ, ಕನ್ನಡ ಭಾಷೆಯು ಇಲ್ಲದಾಯಿತು.

ಕರ್ಣಾಟಕದ ಭೂಪಟವನ್ನು ನೋಡಿದರೆ, ಬೊಂಬಾಯಿ ಕರ್ಣಾಟಕವೂ, ಆಂಧ್ರ ದ್ರಾವಿಡ ನಾಡು ಮತ್ತು ಮಂಗಳೂರು

ಕರ್ನಾಟಕವು ಮೈಸೂರು ಸೀಮೆಯನ್ನು ಸುತ್ತುವರಿದಿದೆಯೆಂದು ಕಾಣಬರುವುದು. ಸ್ವಾಭಾವಿಕ ಸ್ಥಿತಿಯಲ್ಲಿ ಈ ಬೇರೆಬೇರೆ ಭಾಗದ ಕರ್ನಾಟಕರು ಮೈಸೂರಿನವರೊಡನೆ ಬೆರೆತು ಅವರ ಮೂಲಕ ಇತರ ಕರ್ನಾಟಕರ ಪರಿಚಯವನ್ನು ಪಡೆದು ಕನ್ನಡಿಗರ ಐಕ್ಯತೆಯನ್ನು ಕಾಪಾಡುತ್ತಿದ್ದರೆಂದು ಯೋಚಿಸಬಹುದು. ಆದರೆ ಇಂತಹ ಭಾವನೆಯ ಸುಳಿವೇ ಈ ಶತಮಾನದ ಆದಿಯಲ್ಲಿ ಕಾಣಬರಲಿಲ್ಲ. ಬೊಂಬಾಯಿ ಕರ್ನಾಟಕರು ಬೊಂಬಾಯಾಧಿಪತ್ಯದ ರಾಜಕೀಯ ಸಾಮಾಜಿಕ ಚಳವಳಿಗಳಲ್ಲಿ ಅದರಲ್ಲೂ ಪುಣೆಯ ವಾತಾವರಣದಲ್ಲಿ ನಲಿದಾಡುತ್ತ ಇತರ ಕರ್ನಾಟಕದ ನೆಲೆಯನ್ನೇ ಅರಿಯದಾದರು. ಇದರಂತೆಯೇ ಮದ್ರಾಸು ಅಧಿಪತ್ಯದ ಕನ್ನಡಿಗರು ತಮ್ಮ ಸುತ್ತಮುತ್ತಲಿನ ತಮಿಳು, ತೆಲಗು ಭಾಷೆಗಳಲ್ಲಿ ಹೆಚ್ಚು ಶ್ರದ್ಧೆಯನ್ನು ವಹಿಸಿ ಕನ್ನಡವನ್ನೇ ಮರೆತರು. ಇಂತಹ ಆತ್ಮನಾಶಕವಾದ ವಾತಾವರಣವು ಇಂದಿಗೂ ಶುಭ್ರವಾಗಲಿಲ್ಲ. ಆದರೆ ಜ್ಞಾನಭಾಸ್ಕರನು ಉದಯಿಸಿ ಈ ತಮಸ್ಸನ್ನು ಹೋಗಲಾಡಿಸಲು ಮೊದಲುಮಾಡಿರುವನೆಂಬ ಸೂಚನೆಯು ಅಲ್ಲಲ್ಲಿ ಕಾಣಬರುತ್ತಿದೆ.

ಕರ್ನಾಟಕದ ಸಂಪೂರ್ಣಶೂನ್ಯತೆಯನ್ನು ತಡೆದು ನಿಲ್ಲಿಸಲು ಸಹಾಯಮಾಡಿದ ಚಳವಳಿಗಳು ಕರ್ನಾಟಕದಲ್ಲಿ ಹುಟ್ಟಲಿಲ್ಲ. ಕನ್ನಡನಾಡಿನ ಹೊರಗೆ ಹುಟ್ಟಿದ ಕೆಲವು ರಾಜಕೀಯ ಮತ್ತು ವಾಙ್ಮಯ ಚಳವಳಿಗಳಿಂದ ಕನ್ನಡಿಗರು ಎಚ್ಚೆತ್ತರು. ವಂಗೀಯ ಮತ್ತು ಮಹಾರಾಷ್ಟ್ರ ಸಾಹಿತ್ಯ ಪರಿಷತ್ತುಗಳು ಸ್ವಭಾಷಾ ಗೌರವವಿಲ್ಲದೆ ರಾಜಕೀಯ ಚಳವಳಿಯು ಮಹತ್ವಹತ್ತದೆಂಬುದನ್ನು ಇಡೀ ಭರತ ಭೂಮಿಗೆ ಶ್ರುತಪಡಿಸಿದವು. ಕೇಸರಿ, ಬಂಗವಸಿ, ಮುಂತಾದ ವೃತ್ತಪತ್ರಗಳು ಸ್ವಭಾಷೆಯಿಂದಲ್ಲದೆ ಪರಭಾಷೆಯಲ್ಲಿ ಜನರ ಜ್ಞಾನೋದಯವಾಗದೆಂಬುದನ್ನು ನಿಶ್ಚಯಪಡಿಸಿದವು. ಬೆಂಗಾಲಿ, ಮರಾಠಿ, ಮತ್ತು ಆಂಧ್ರ ನಾಟಕ ಮಂದಿರಗಳ ಉನ್ನತ ಜಯಪ್ರದವು ನಾಟಕ ಶಾಲೆಗಳಲ್ಲಿ ಸ್ವಭಾಷೆಯಿಂದ ಜನಸಾಮಾನ್ಯರ ಶಿಕ್ಷಣ ಎಷ್ಟು ಮಹತ್ವದಿಂದ ಆದೀತೆಂಬುದನ್ನು ತೋರಿಸಿತು.

ವಂಗಡಗಳಾಗಿ ವಿಂಗಡಿಸಲ್ಪಟ್ಟ ಒಢ್ರರು ೧೯೦೩ ರಲ್ಲಿ ಉತ್ಕಲಸಂಮೇಳನವನ್ನು ಹೂಡಿ ಬೇರೆಬೇರೆ ರಾಜಕೀಯವಿಭಾಗಗಳಾಗಿದ್ದ ಒರಿಸ್ಸಾದೇಶವನ್ನು ಒಂದೇ ನಾಡಾಗಿ ಮಾಡಬೇಕೆಂದು ಉದ್ದೇಶಿಸಿದರು. ಬಂಗಾಳಕ್ಕೆ ತೊಂದರೆ ತರಬೇಕೆಂದು ಲಾರ್ಡ್ ಕರ್ಜನನು ಇದನ್ನು ಅನುಮೋದಿಸದಿದ್ದರೂ, ಅಲ್ಲಿಂದೀಚೆಗೆ ಒಂದೇ ಭಾಷೆಯಾಡುವ ಪ್ರಾಂತ್ಯಗಳೆಲ್ಲಾ ಒಟ್ಟಾಗಿ ಒಂದೇ ಅಡಳಿತಕ್ಕೆ ಒಳಪಟ್ಟಿರಬೇಕೆಂಬ ತತ್ವವು ಅಂಗೀಕರಿಸಲ್ಪಟ್ಟಿತು. ೧೯೧೨ ರಲ್ಲಿ ಬಿಹಾರವು ಬಂಗಾಳದಿಂದ ಬೇರೆಯಾಗಿ ಮತ್ತು ಒಂದಾಯಿತು. ಬಂಗಾಳ ವಿಭಾಗ ಚಳವಳಿಯ ಮಹತ್ವದಿಂದ ಸುಧಾರಣೆಗಳಲ್ಲೂ ಭಾಷೆಯಪ್ರಾಮುಖ್ಯತೆಯ ಮೇಲೆ ರಾಜಕೀಯ ವಿಭಾಗ ಮಾಡಬೇಕೆಂಬ ಪ್ರಶ್ನೆಗೆ ಹೆಚ್ಚು ಉತ್ತೇಜನವುಸಿಕ್ಕಿತು. ೧೯೧೩ ರಲ್ಲಿ ಬಿಹಾರ ಮತ್ತು ಒರಿಸ್ಸದವರು ಬಂಗಾಳರ ಮೇಲ್ಪಂಕ್ತಿಯನ್ನು ಅನುಸರಿಸಿದರು ಆಂಧ್ರರು ತಮ್ಮದೇ ಒಂದುನಾಡಾಗಬೇಕೆಂದೂ ತಮಗೇ ಒಂದು ವಿಶ್ವವಿದ್ಯಾನಿಲಯವು ಒಂದು ರೇವುಪಟ್ಟಣವು ಬೇಕೆಂದೂ ಸರ್ಕಾರಕ್ಕೆ ಒತ್ತಾಯ ಮಾಡಿದರು. ತಮಗೊಂದು ನಾಡಿನ ಸ್ಥಾನಕೊಡಬೇಕೆಂದು ಕಾಂಗ್ರೆಸ್ಸನ್ನು ಕೇಳಿದರು. ರಾಷ್ಟ್ರೀಯಸಭೆಯು ಇದನ್ನು ಒಪ್ಪಿಕೊಂಡು ೧೯೧೭ ರಲ್ಲಿ ಆಂಧ್ರದೇಶಕ್ಕೆ ಒಂದು ವ್ಯಕ್ತಿತ್ವವನ್ನು ಕೊಟ್ಟಿತು.

ಮಾಂಟೆಗೂ ಚೆಲ್ಮ್ಸ್‌ಫರ್ಡ್ ಸುಧಾರಣೆಯಲ್ಲಿ ಕೂಡ ಭಾಷಾದೃಷ್ಟಿಯಿಂದ ದೇಶವಿಭಾಗಮಾಡಬೇಕೆಂಬ ತತ್ವವು ಅನುಮೋದಿಸಲ್ಪಟ್ಟಿತು. ಇದೇ ವಿಷಯದಲ್ಲಿ ತರಾವುತಂದ ಸರ್. ಬಿಯನ್. ಶರ್ಮರ. ಸೂಚನೆಯನ್ನು ಡಿಲ್ಲಿ ಶಾಶನಸಭೆಯವರು ೧೯೧೮ ರಲ್ಲಿ ಮನಗೊಟ್ಟು ಕೇಳಿದರು. ಇಂತಹ ರಾಜಕೀಯ ಮತ್ತು ಸಾಮಾಜಿಕ ಚಲನೆಗಳು ಎಲ್ಲಾ ವಿದ್ಯಾವಂತರ ಮನಸ್ಸನ್ನೂ ತಳಮಳಗೊಳಿಸಿದವು. ಈ ಮೂಲಕ ಕನ್ನಡಿಗರು ಎಚ್ಚರಗೊಂಡರು. ಕರ್ಣಾಟಕದ ಪುನರುಜ್ಜೀವನಕ್ಕೆ ಮೊದಲನೆಯ ಹೆಜ್ಜೆಯೆಂದರೆ ೧೮೬೦ ರಲ್ಲಿ ರಸಲ್ ಮತ್ತು ಧಾರ್ವಾಡದ ಚನ್ನಬಸಪ್ಪನವರಿಂದ ಬೊಂಬಾಯಿ ಕರ್ಣಾಟಕದಲ್ಲಿ ಸ್ಥಾಪಿತವಾದ ಕನ್ನಡ ಪ್ರಾಥಮಿಕಶಾಲೆಗಳು. ಈ ಶಾಲೆಗಳಿಗೆ

ಬೇಕಾದ ಶಿಕ್ಷಕರನ್ನು ಒದಗಿಸಲು ಬೆಳಗಾಂವಿಯಲ್ಲಿ ಒಂದು ಅಧ್ಯಾಪಕಶಾಲೆಯು ಸ್ಥಾಪಿತವಾಯಿತು. ಕೆಲವು ದಿನಗಳೊಳಗೆ ಇದು ಧಾರವಾಡಕ್ಕೆ ಒಯ್ಯಲ್ಪಟ್ಟಿತು. ಇದೇ ಸಮಯದಲ್ಲಿ ಚಂದ್ರೋದಯ ಮತ್ತು ಕರ್ಣಾಟಕಪತ್ರವೆಂಬ ಎರಡು ಕನ್ನಡ ಪತ್ರಗಳು ಧಾರವಾಡದಲ್ಲಿ ಹೊರಟವು. ಕೆಲವು ಕನ್ನಡಪಠ್ಯಪುಸ್ತಕಗಳು ತಯಾರಾದುವು. ಶಕುಂತಲೆಯೆಂಬ ನಾಟಕವು ಕಾದಂಬರಿ ಎಂಬ ವಚನಗ್ರಂಥವು ಬರಿಯಲ್ಪಟ್ಟಿತು. ಡಾ|| ಫ್ಲೀಟರವರು 'ಕರ್ಣಾಟಕ ಪ್ರಭುಗಳ ಚರಿತ್ರೆ'ಎಂಬ ತಮ್ಮ ಗ್ರಂಥ ಬರೆದು ಕನ್ನಡಯುವಕದಲ್ಲಿ ದೇಶಾಭಿಮಾನವನ್ನು ಹುಟ್ಟಿಸಿದರು. ಪುಣೆಯ ಪಟ್ಟಣದಲ್ಲಿಯೂ ಮುಂಬಯಿ ಸಕಲ ವಿದ್ಯಾನಿಲಯದಲ್ಲಿಯೂ ಶಿಕ್ಷಣವನ್ನು ಪಡೆದ ಕನ್ನಡಿಗರು ಮರಾಠಿಯನ್ನೇ ಮಾತೃಭಾಷೆಯೆಂದು ಸೇವಿಸುತ್ತ ಬಂದರು. ಇಂತಹ ಕನ್ನಡ ಯುವಕರೂ, ಮರಾಠಾ ಹುದ್ದೇದಾರರೂ, ಕರ್ಣಾಟಕ ಪುನರುಜ್ಜೀವನ ಉದ್ಯಮಕ್ಕೆ ಶೈಶವದಲ್ಲೇ ಬೇಕಾದಷ್ಟು ತೊಂದರೆಗಳನ್ನು ತಂದೊಡ್ಡಿದರು. ಸುಮಾರು ೧೮೯೦ ರಲ್ಲಿ ಧಾರವಾಡದಲ್ಲಿ ಕರ್ಣಾಟಕಸಾಹಿತ್ಯ ಸಂಘವು ಹುಟ್ಟಿತು. ಇದೇ ಕನ್ನಡನಾಡಿನ ನೂತನ ಉದ್ಯಮದಲ್ಲಿ ಎರಡನೆಯ ಹೆಜ್ಜೆ. ಅಲ್ಲಿಂದೀಚೆಗೆ ಕನ್ನಡ ರಂಗಭೂಮಿಗೆ ಗೌರವವು ದೊರಕಿತು. ಕನ್ನಡ ಛಾಪಾಖಾನೆಗಳು ಸ್ಥಾಪಿಸಲ್ಪಟ್ಟವು. ಅನೇಕ ಗ್ರಂಥಗಳು ಹೊರಬಿದ್ದವು. ವೃತ್ತಪತ್ರಿಕೆಗಳ ಸಂಖ್ಯೆಯು ಹೆಚ್ಚಾಯಿತು.

ಒಂದುಪ್ರಾಂತ್ಯದ ಕನ್ನಡಭಾಷೆಯೂ, ಒಂದೆಡೆಯುಪಯೋಗಿಸುತ್ತಿದ್ದ ಪಠ್ಯಪುಸ್ತಕಗಳೂ ಮತ್ತೊಂದುಭಾಗದ ಕನ್ನಗರಿಗೆ ರುಚಿಸಲಿಲ್ಲ. ಪತ್ರಿಕಾಸಂಪಾದಕರೂ ಗ್ರಂಥಕರ್ತರೂ (ಓದುವವರಿಲ್ಲದೆ) ಬಣಹೊಟ್ಟೆಯಲ್ಲಿ ಒದ್ದಾಡುವಂತಾಯಿತು. ರಾಜಕೀಯ ಐಕ್ಯತೆಯೇ ಈ ವ್ಯಾಧಿಗೆ ಉತ್ತಮ ಚಿಕಿತ್ಸೆಯೆಂದು ಎಲ್ಲರೂ ಅರಿತರು. ಈ ಉದ್ಯಮಕ್ಕಾಗಿ, ಧಾರವಾಡದ ಕರ್ಣಾಟಕ ಸಂಘದವರು ೧೯೦೭-೧೯೦೭ ರಲ್ಲಿ ಸಮ್ಮೇಲನಗಳನ್ನು ಹೂಡಿದರು. ಎಲ್ಲ ಕನ್ನಡಿಗರ ಪ್ರಯತ್ನದಿಂದಲೂ, ಅದರಲ್ಲೂ ಮೈಸೂರಿನವರ ಉತ್ಸಾಹದಿಂದಲೂ

ಕರ್ನಾಟಕ ಸಾಹಿತ್ಯ ಪರಿಷತ್ತಿನ ಅಧಿವೇಶನವು ಬೆಂಗಳೂರಿನಲ್ಲಿ ನೆರೆಯಿತು. ಶ್ರೀ ಕೃಷ್ಣರಾಜೇಂದ್ರ ಒಡೆಯರವರು ಈಸಂಘಕ್ಕೆ ರಾಜಾಶ್ರಯವನ್ನು ಕೊಟ್ಟರು.

೧೯೦೭ ರಲ್ಲಿ ಧಾರವಾಡದಲ್ಲಿ ನೆರೆದ ಸಮ್ಮೇಳನದ ಕಾಲದಲ್ಲಿ ಕನ್ನಡಿಗರೆಲ್ಲರಿಗೂ ರಾಜಕೀಯ ಐಕ್ಯತೆಯ ಆವಶ್ಯಕತೆಯು ತಲೆದೋರಿತು. ಕೂಡಲೆ ಕನ್ನಡ ನಾಡೆಲ್ಲವನ್ನೂ ಒಂದು ಪ್ರಾಂತ್ಯವಾಗಿ ಮಾಡಬೇಕೆಂದು ಬಯಸಿದರು. ಕನ್ನಡಿಗರ ಈ ಸದಾಶಯಕ್ಕೆ ಮರಾಠರೂ ಆಂಧ್ರರೂ ಪ್ರತಿಬಂಧಕಗಳನ್ನು ತಂದೊಡ್ಡುವದರಲ್ಲಿದ್ದರು. ಸೇಲಂ, ನೀಲಗಿರಿ, ಕೊಯಮುತ್ತೂರು ಜಿಲ್ಲೆಗಳ ಕನ್ನಡಿಗರಿಗಂತೂ ರಾಷ್ಟ್ರೀಯ ಭಾವನೆಯೇ ತಲೆದೋರಲಿಲ್ಲ.

೧೯೧೭ ರಲ್ಲಿ ಕರ್ನಾಟಕಸಭೆಯೆಂಬ ಶುದ್ಧ ರಾಜಕೀಯ ಸಭೆಯು ಧಾರವಾಡದಲ್ಲಿ ಆರಂಭವಾಯಿತು. ಬ್ರಿಟಿಷ್ ಕರ್ನಾಟಕವೆಲ್ಲವನ್ನೂ ಒಂದು ಗೂಡಿಸಬೇಕೆಂದೂ, ಪ್ರತ್ಯೇಕ ವಿಶ್ವವಿದ್ಯಾನಿಲಯವನ್ನೂ ರೇವುಪಟ್ಟಣವನ್ನೂ ಹೊಂದಬೇಕೆಂದೂ, ರಾಷ್ಟ್ರೀಯ ಸಭೆಯುವರು ಕನ್ನಡ ನಾಡನ್ನು ಒಂದು ಪ್ರಾಂತ್ಯವನ್ನಾಗಿ ಗಣಿಸಬೇಕೆಂದೂ, ಈ ಸಭೆಯುವರು ಒತ್ತಾಯ ಮಾಡಲು ಮೊದಲಿಟ್ಟರು. ಮೂರು ವರ್ಷಗಳಲ್ಲಿ ಈ ಸಭೆಯು ಅಖಿಲ ಕರ್ನಾಟಕದ ಏಕೀಕರಣ ವಿಚಾರದಲ್ಲಿ ಜನರಲ್ಲೆಲ್ಲಾ ಉತ್ಸಾಹವನ್ನುಂಟುಮಾಡಿತು. ಕನ್ನಡಿಗರಲ್ಲೆಲ್ಲಾ ನವೀನ ಹುರುಪನ್ನು ಹುಟ್ಟಿಸಿತು. ೧೯೨೦ ರಲ್ಲಿ ಧಾರವಾಡದಲ್ಲಿ ಸರ್ಕಾರದವರೂ ಕೂಡ ಕರ್ನಾಟಕ ಪರಸ್ಪರ ಸಹಾಯಕ ಸಂಘಗಳ ಸಮ್ಮೇಳನವೊಂದನ್ನು ಕೂಡಿಸಿದರು.

೧೯೨೦ ರ ಅಂತ್ಯದಲ್ಲಿ ಮಹಾತ್ಮರ ಪ್ರಭಾವದಿಂದ ಭಾರತರಾಜಕೀಯ ವಾತಾವರಣದಲ್ಲಿ ಉಜ್ವಲಕಾಂತಿಯುಂಟಾಯಿತು. ಭಾಷಾತತ್ವದಿಂದ ದೇಶವಿಭಾಗವಾಯಿತು. ನಾಗಪುರದ ಕಾಂಗ್ರೆಸ್ಸಿನಲ್ಲಿ ಕನ್ನಡಿಗರಿಗೊಂದು ಪ್ರಾಂತ್ಯಸ್ಥಾನವು ದೊರೆಯಿತು. ಮುಂದಿನ ವರ್ಷ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಸಂಸ್ಥೆಯು, ಅದಕ್ಕೆ ಒಳಪಟ್ಟ

ಕನ್ನಡನಾಡಿನ ಜಿಲ್ಲೆಗಳೊಂದೊಂದರಲ್ಲೂ ಒಂದೊಂದು ಕಾಂಗ್ರೆಸ್ ಸಂಸ್ಥೆಯೂ ಹುಟ್ಟಿತು. ಕರ್ಣಾಟಕ ಪ್ರಾಂತಿಕ ಸಂಸ್ಥೆಗೆ ಗದಗೇ ಮುಖ್ಯನಗರವಾಯಿತು. ಕಾಂಗ್ರೆಸ್ಸಿನಿಂದ ನೇಮಿಸಲ್ಪಟ್ಟ ಪಂಚಾಯಿತರ ತೀರ್ಮಾನದಂತೆ ಬಳ್ಳಾರಿ ಜಿಲ್ಲೆಯ ಮೂರು ತಾಲ್ಲೂಕಗಳು ಮಟ್ಟಿಗೆ ಆಂಧ್ರ ದೇಶಕ್ಕೆ ಕೊಡಲ್ಪಟ್ಟವು. ಕೊಡಗೂ, ಮೈಸೂರೂ ಪ್ರಾಂತಿಕ ಸಂಸ್ಥೆಯನ್ನು ಸೇರಿದವು. ಅನಂತಪುರ, ಸೇಲಂ, ನೀಲಗಿರಿ ಮತ್ತು ಕೊಯಮುತ್ತೂರು ಕನ್ನಡಿಗರು ಮಾತ್ರ ಇನ್ನೂ ಹಿಂದುಳಿದಿರುವರು.

ಕರ್ಣಾಟಕ ಸಾಹಿತ್ಯ ಪರಿಷತ್ತು, ಮತ್ತು ಪ್ರಾಂತಿಕ ರಾಷ್ಟ್ರೀಯ ಸಂಸ್ಥೆಯು ಆರಂಭವಾದಂದಿನಿಂದ ಕರ್ಣಾಟಕದ ಏಕೀಕರಣ ಕಾರ್ಯವು ಮುಂದರಿಯುತ್ತಿದೆ. ಆದರೆ ಇನ್ನೂ ಮಾಡಬೇಕಾದ ಕೆಲಸಗಳು ಅನೇಕವುಂಟು. ಜನರಲ್ಲಿ ಅಖಿಲ ಕರ್ಣಾಟಕದ ಭಾವನೆಯು ಇನ್ನೂ ಹುಟ್ಟಿಲ್ಲ. ಈ ಮಹತ್ವ ಕಾರ್ಯವು ಫಲಿಸಲಿಕ್ಕೆ ಸಾಕಾದಷ್ಟು ಪ್ರಯತ್ನಗಳು ನಡೆಯುತ್ತಿಲ್ಲ. ಇದರಲ್ಲಿ ನಿರತರಾಗಿರುವ ಜನರ ಸಂಖ್ಯೆ ತೀರ ಅಲ್ಪ. ದೈವವಶಾತ್ ಕನ್ನಡನಾಡಿನಲ್ಲಿ ಹಿಂದೂ ಮಹಮ್ಮದೀಯ ವೈಷಮ್ಯವು ಹೆಚ್ಚಾಗಿಲ್ಲ. ಆದರೆ ಬ್ರಾಹ್ಮಣ ಬ್ರಾಹ್ಮಣೇತರರ ಅಂತಃಕಲಹಗಳು ಶೋಚನೀಯವಾಗಿವೆ. ಎಲ್ಲರಲ್ಲಿಯೂ ದೇಶವಾತ್ಸಲ್ಯವು ಹೆಚ್ಚಿದಂತೆಲ್ಲ ಈ ಕ್ಷುದ್ರ ವೈಷಮ್ಯಗಳು ಕಡಮೆಯಾಗಿ, ಕನ್ನಡನಾಡಿನ ಐಕ್ಯತೆಯು ಫಲಿಸುವುದೆಂದೇ ನಮ್ಮ ಹಾರೈಕೆ.

ಸಂಘ ಶಕ್ತಿಯುಳ್ಳ ಕರ್ಣಾಟಕರಾಷ್ಟ್ರವು ಭಾರತಮಾತೆಗೆ ಬಲವನ್ನು ಕೊಡುವದು. ಈ ಶಕ್ತಿ ಸಂಪಾದನೆಗಾಗಿ ಕರ್ಣಾಟಕವು ಬೇರೆಯಾಗುತ್ತಲಿರುವುದು ಹಲವರಿಗೆ ಕೊಂಚ ವಿಪರೀತವಾಗಿ ಕಾಣಬಹುದು. ಕನ್ನಡನಾಡೆಲ್ಲ ಒಂದಾಗಿ ಕನ್ನಡಿಗರೆಲ್ಲ ಒಮ್ಮನದಿಂದ ದೇಶಭಾಷಾವಾತ್ಸಲ್ಯವನ್ನೂ ಜನರೆಲ್ಲರಲ್ಲಿ ಸೌರಸ್ಯವನ್ನೂ ಹೆಚ್ಚಿಸಿಕೊಂಡರೆ ಭರತಖಂಡದ ರಾಜಕೀಯ ಚಳವಳಿಗೆ ಹೊಸ ಹುರುಪುಂಟಾಗುವುದು. ಕರ್ಣಾಟಕ ರಾಷ್ಟ್ರವು ಬೇರೆಯಾದಾಗ ಮಾತ್ರ

ಭಾರತಮಾತೆಯ ಸ್ವಾತಂತ್ರ್ಯ ಯುದ್ಧದಲ್ಲಿ ಕನ್ನಡಿಗರೂ ಇತರ ರಂತೆ ತಮ್ಮ ಪೂರ್ಣಶಕ್ತಿಯನ್ನು ಪ್ರದರ್ಶಿಸಿ, ತನುಮನಧನಗಳನ್ನ ರ್ಪಿಸಬಲ್ಲರೆಂಬುದೇ ಕರ್ಣಾಟಕದ ಏಕೀಕರಣಕ್ಕಾಗಿ ಪ್ರಯತ್ನಪಡುತ್ತಿ ರುವವರ ಪರಮಾಕಾಂಕ್ಷೆ.

**ರಾಘವೇಂದ್ರರಾವ ಕಡಪ.**

V

# ಕರ್ಣಾಟಕದ ಧಾರ್ಮಿಕ ಚಲನಗಳು

ಧಾರ್ಮಿಕ ಆಕಾಂಕ್ಷೆಗಳಿಂದ ಸುಪ್ರಸಿದ್ಧವಾದುದೀ ಭರತಖಂ ಡವು. ನಾನಾಮತಸಿದ್ಧಾಂತಗಳೇ ಆ ಆಕಾಂಕ್ಷೆಗಳ ಸ್ವರೂಪಗಳು. ಇವುಗಳಲ್ಲಿ ಪರಸ್ಪರ ಭೇದಗಳಿದ್ದರೂ ವಸ್ತುತಃ ಎಲ್ಲವೂ ಒಂದೇ. ಕಾಲದೇಶಗಳನ್ನು ಅನುಸರಿಸಿ ಅವು ಹುಟ್ಟಿ ಬೆಳೆದು ವೈಯಕ್ತಿಕ ಮತ್ತು ಸಾಮಾಜಿಕ ಜೀವನವನ್ನು ಸರಿಪಡಿಸಿದುವು. "ಮತವು ಮಾ ನವನಿಗೆ ಮಾನವನು ಮತಕಲ್ಲ" ಆದುಕಾರಣ ಸಂಯೋಜನಾಗತಿ ಪ್ರಭಾವದಿಂದ ಭಿನ್ನಭಿನ್ನ ಮತಗಳಲ್ಲಿನ ನಿತ್ಯವೂ, ವಿಶ್ವವ್ಯಾಪಕವೂ ಆದ ಮೂಲತತ್ವಗಳಿಗೇ ಹೆಚ್ಚು ಪ್ರಾಮುಖ್ಯತೆಯುಂಟಾಯಿತು. ಭರತಖಂಡದ ಧಾರ್ಮಿಕ ಇತಿಹಾಸದ ಹೆಚ್ಚುಗಾರಿಕೆಯೇ ಇದು. ನಮ್ಮ ಕರ್ಣಾಟಕದ ಧಾರ್ಮಿಕ ಇತಿಹಾಸವೂ ಹೀಗೆಯೇ ಇದೆ. ಆಗಾಗ ಮೂಢಭಾವಗಳು ಮೂಡಿ, ಅಂಧಶ್ರದ್ಧೆಯು ಹೆಚ್ಚಿ, ಅರ್ಥ ವಿಲ್ಲದ ತಂತ್ರಗಳು ಮುಂದಾಗಿ, ಧಾರ್ಮಿಕ ಜೀವನವು ಪಾರಿತಪ್ಪಿದು ದೇನೋ ನಿಜ. ಆದರೆ ಜ್ಞಾನಿಗಳೂ ಮಹಾತ್ಮರೂ "ಬೇರೆಬೇರೆ ಮತಗಳೆಂದರೇನು ಗಮ್ಯಸ್ಥಾನಕ್ಕೆ ಹೋಗುವ ಬೇರೆಬೇರೆ ಮಾರ್ಗ ಗಳು" ಎಂಬ ತತ್ವವನ್ನು ಸಾರುತ್ತಲೇ ಇದ್ದರು. ಒಂದು ವೇಳೆ ಜನರು ಉಚ್ಚಭಾವವನ್ನು ನೀಗಿಕೊಂಡಿದ್ದರೂ, ಇತರ ದೇಶೀಯ ರಂತೆ ಧರ್ಮದ ಹೆಸರಿನಲ್ಲಿ ಪಾಶಕೃತ್ಯಗಳನ್ನಾಗಲಿ, ಪರಮತಾಸ

ಯಾವುಗಳಿಗೆ ಪ್ರಾಣಹಿಂಸೆಯನ್ನಾಗಲಿ ಮಾಡಲಿಲ್ಲ. ಭರತಖಂಡದ ಯಾವ ಮತವೂ ಜನರ ಧಾರ್ಮಿಕಜೀವನ ಸ್ವಾತಂತ್ರ್ಯದ ಮೇಲೆ ಎಂದಿಗೂ ಸರ್ವಾಧಿಕಾರವನ್ನು ವಹಿಸಿರಲಿಲ್ಲ. ಆದರೆ ಈ ಮತಗಳು ಧಾರ್ಮಿಕ ಜೀವನ ಪ್ರವಾಹವು ಮೇರೆದಪ್ಪಿಹೋಗದಂತೆ ಕಾಪಾಡುತ್ತಿದ್ದುವಲ್ಲದೆ, ಚಿಕ್ಕಪುಟ್ಟಉಪನದಿಗಳನ್ನೂ ಪ್ರವಾಹದೊಂದಿಗೆ ಬೆರೆಸುತ್ತಿದ್ದುವು. ಧಾರ್ಮಿಕ ಜೀವನಲಹರಿಯನ್ನು ವೇಗಗೊಳಿಸಲು ಊರಿಂದೂರಿಗೆ ಸಂಚರಿಸುವ ಸಾಧುಗಳು, ವೈರಾಗಿಗಳು, ದಾಸರು, ಉಪದೇಶಕರು ಸಾಮಾನ್ಯ ಜನಗಳ ಮನಸ್ಸನ್ನಪಹರಿಸುವ ಹಾಡುಗಳು, ಪುರಾಣಗಳು, ಹಬ್ಬಗಳು, ಜಾತ್ರೆಗಳು ಮೂಲಕಾರಣಗಳಾದುವು. ಧರ್ಮಗ್ಲಾನಿಹೊಂದುವ ಕಾಲಕ್ಕೆ ಸರಿಯಾಗಿ ಮಹಾವಿಭೂತಿಗಳೂ, ತತ್ತ್ವಾರ್ಥವೇತ್ತರೂ ಹುಟ್ಟಿ ನಿರ್ಜೀವಿಗಳಿಗೆ ಸದುಪದೇಶಸಂಜೀವನದಿಂದ ಚೈತನ್ಯವನ್ನುಂಟುಮಾಡುತ್ತಿದ್ದರು.

ಕರ್ಣಾಟಕವನ್ನು ಸ್ಥಾನವಿಶೇಷದಿಂದ ದಕ್ಷಿಣದೇಶದ ಹೆಬ್ಬಾಗಿಲೆನ್ನಬೇಕು. ಆರ್ಯಾವರ್ತದಲ್ಲೂ, ದಕ್ಷಿಣಾಪಥದಲ್ಲೂ ಹುಟ್ಟಿ ಬೆಳೆದ ಧಾರ್ಮಿಕಚಲನೆಗಳಲ್ಲೆಲ್ಲ ಕರ್ಣಾಟಕವು ಭಾಗಿಯಾಗಿದೆ. ದಕ್ಷಿಣಾಪಥಕ್ಕೆ ಆರ್ಯಸಂಸ್ಕೃತಿಯು ಬಂದಾಗ ಮೊಟ್ಟಮೊದಲು ಅದನ್ನು ಸ್ವೀಕರಿಸಿದವರು ಯಾರು? ಜೈನಬೌದ್ಧಮತಗಳಿಗೆ ಆಶ್ರಯವನ್ನಿತ್ತವರು ಯಾರು? ದಕ್ಷಿಣದೇಶದಲ್ಲಿ ತರಂಗ ತರಂಗಗಳಾಗಿ ಹುಟ್ಟಿಬರುತ್ತಿದ್ದ ಧಾರ್ಮಿಕ ಚಲನೆಗಳನ್ನು ಉತ್ತರದೇಶಕ್ಕೆ ಒಯ್ದವರು ಯಾರು? ಕನ್ನಡಿಗರು!

ಆರ್ಯರ ಆಗಮನಕ್ಕೆ ಮುಂಚೆ ದ್ರಾವಿಡರ ಧಾರ್ಮಿಕಸ್ಥಿತಿಯು ಹೇಗಿತ್ತೆಂದು ಹೇಳಲು ಸಾಧ್ಯವಿಲ್ಲ. ಈಗ ತಿಳಿದು ಬಂದಿರುವುದೆಲ್ಲ ಕೇವಲ ಊಹೆ ಅಥವಾ ಕಲ್ಪನೆಯೆಂದೇ ಹೇಳಬೇಕು. ಲಿಂಗ ಮತ್ತು ಶಿವಾರಾಧನೆಯು ಶುದ್ಧ ದ್ರಾವಿಡವೆಂದೂ, ಆರ್ಯರು ಅದನ್ನು ಅನುಕರಿಸಿದರೆಂದೂ ಹಲವರ ಮತ. ಆದರೆ ದಕ್ಷಿಣದೇಶದಲ್ಲಿ ಶಿವಾರಾಧನೆಗಾರಂಭಿಸಿದವರು ಅಗಸ್ತ್ಯ ಋಷಿಗಳೆಂದು ಪ್ರತೀತಿಯುಂಟು. ಹಳ್ಳಿ ಹಳ್ಳಿಗಳಲ್ಲಿ ಕಾಣಬರುವ ಮಾರಿಮಸಣಿಗಳ ಪೂಜೆ, ಹೆಣ್ಣು ದೇವತೆ

ಗಳ ಪೂಜೆ ಮೊದಲಾದ ರೂಕ್ಷ ಪದ್ಧತಿಗಳು ಶಕ್ತಿ ಆರಾಧನೆಯ ಅಸ ಮಗ್ರ ಅನುಕರಣದ ಫಲವಾಗಿರಬಹುದು. ಇವುಗಳಿಂದ ದ್ರಾವಿಡರ ಮತಸ್ಥಿತಿಯು ತಿಳಿಯಲಾಗದು. ವನ ಜಲ ದೇವತಾಪೂಜೆ, ಸರ್ಪಪೂಜೆ ಮುಂತಾದುವು ಶುದ್ಧ ದ್ರಾವಿಡವೆಂದೇ ಕಾಣಬರುತ್ತದೆ. ಸರ್ಪಾರಾಧನೆಯನ್ನು ಕುರಿತೊಂದು ವಿಶೇಷವುಂಟು. ಕರ್ಣಾಟಕದ ಪಶ್ಚಿಮಭಾಗವು ಮಹಾಭಾರತದಲ್ಲಿ ಪದೇ ಪದೇ ಕಂಡುಬರುವ ನಾಗರೆಂಬ ಜನರ ಆವಾಸಸ್ಥಾನವಾಗಿಯೂ, ಕರ್ಣಾಟಕದ ದಕ್ಷಿಣ ಭಾಗವು ಅರ್ಜುನನು ಹೋಗಿ, ಉಲೂಪಿಯನ್ನು ವಿವಾಹವಾದ ನಾಕಲೋಕವಾಗಿಯೂ ಇದ್ದಿರಬಹುದು. ಶಾಸನಗಳಿಂದ ಕರ್ಣಾಟಕದ ಪಶ್ಚಿಮಭಾಗಕ್ಕೆ 'ನಾಗರಖಂಡ' ವೆಂಬ ಹೆಸರಿತ್ತೆಂದುತೋರಿ ಬರುತ್ತದೆ.

ಆರ್ಯರ ಆಗಮನವಾದಾಗಲೇ ದಕ್ಷಿಣ ದೇಶದಲ್ಲಿ ವೈದಿಕ ಮತವು ನೆಲೆಸಿತು. ಪ್ರಸಿದ್ಧ ಆರ್ಯರ್ಷಿಗಳಾದ ಅಗಸ್ತ್ಯ, ಭರದ್ವಾಜ, ಕಣ್ವ, ಮುಂತಾದ ಮಹಾತ್ಮರ ಆಶ್ರಮಗಳು ಕರ್ಣಾಟಕದಲ್ಲಿ ಇದ್ದುವೆಂಬ ವಿಷಯವನ್ನಿಂದಿಗೂ ಜನರು ಮರೆತಿಲ್ಲ. ಕಿಷ್ಕಿಂಧಾ ಕಾಂಡದಲ್ಲಿ ವರ್ಣಿತವಾಗಿರುವಂತೆ ಶ್ರೀರಾಮ ಲಕ್ಷ್ಮಣರು ನಮ್ಮ ಕರ್ಣಾಟಕದಲ್ಲಿ ತಂಗಿದ್ದರೆಂಬುದನ್ನು ಯಾರುತಾನೇ ಮರೆಯಲಾದೀತು. ಅರ್ಜುನ ಸಹದೇವಾದಿಗಳು ದಕ್ಷಿಣ ದೇಶದಲ್ಲಿ ಮಾಡಿದ ಕ್ಷಾತ್ರಸಂಚಾರಗಳು ಭಾರತದಲ್ಲುಕ್ತವಾಗಿವೆ. ಯುಧಿಷ್ಠಿರನು ರಾಜಸೂಯಯಾಗ ಮಾಡಿದಾಗ ಅವನಿಗೆ ಕಾಣಿಕೆಗಳನ್ನೊಪ್ಪಿಸಿದ ಅನೇಕ ದಾಕ್ಷಿಣಾತ್ಯರಲ್ಲಿ ಕರ್ಣಾಟಕರ ಹೆಸರೂ ಕಾಣಬರುತ್ತದೆ. ನಾವೀಗ ಈ ಸಂಗತಿಗಳ ಕಾಲವನ್ನು ನಿರ್ಣಯಿಸಲು ಸಾಧ್ಯವಿಲ್ಲ. ಆದರೂ ಇವೆಲ್ಲವೂ ಪ್ರಾಚೀನಕಾಲದಲ್ಲಿ ಆರ್ಯರು ದ್ರಾವಿಡ ದೇಶಕ್ಕೆ ಬಂದು ನೆಲಸಿದ, ಚಾರಿತ್ರಿಕ ವಿಷಯಗಳನ್ನೇ ಸೂಚಿಸುತ್ತವೆಯೆಂಬುದರಲ್ಲಿ ಲೇಶವೂ ಅನುಮಾನವಿಲ್ಲ.

ಸೂತ್ರಗಳ ಕಾಲದಲ್ಲಿ ಉತ್ತರದೇಶದಂತೆ (ದಕ್ಷಿಣದೇಶದಲ್ಲೂ) ಕರ್ಣಾಟಕ ದೇಶದಲ್ಲೂ ಸಂಸ್ಕೃತವೇ ದೇವಭಾಷೆಯಾಗಿಯೂ,

ಆರ್ಯೇತರತತ್ವಗಳೇ ಧರ್ಮವಾಗಿಯೂ ಆಗಿತ್ತೆಂದು ಹೇಳಬಹುದು. ಇಷ್ಟು ಇತಿಹಾಸಕ್ಕೆ ಹಿಂದಿನ ಕಾಲದ ವಿಚಾರವಾಯಿತು. ಚಾರಿತ್ರಕ ಕಾಲಕ್ಕೆ ಬರುತ್ತಲೇ ನಮ್ಮ ಕರ್ಣಾಟಕಕ್ಕೆ ಜೈನ ಬೌದ್ಧಮತಗಳು ಗೋಚರಕ್ಕೆ ಬೀಳುತ್ತವೆ. ಅವು ಯಾವಾಗ ಹರಡ ಹತ್ತಿದುವೋ ಗೊತ್ತಿಲ್ಲ. ಆಗಲೇ ದೇಶದಲ್ಲಿ ನೆಲೆಸಿದ್ದುವು.

ಜೈನಬೌದ್ಧಮತಗಳಲ್ಲಿ ಬೌದ್ಧಮತವು ಈಚಿನದು. ಮಸ್ಕೀ (ನಿಜಾಮ ಕರ್ಣಾಟಕ) ಸಿದ್ದಾಪುರ (ಮೈಸೂರು) ಗಳಲ್ಲಿ ದೊರೆತ ಅಶೋಕನ ಶಾಸನಗಳು, ಬನವಸಿ (ಉತ್ತರಕನ್ನಡ) ಕದರಿಕಾರಾಮ (ಮಂಗಳೂರು) ಗಳಲ್ಲಿರುವ ಅವಶೇಷಗಳು ಅಜಂತ (ನಿಜಾಮ ಕರ್ಣಾಟಕ)ದ ಗುಹಾಂತರ್ದೇವಾಲಯಗಳು ಇಷ್ಟಲ್ಲದೆ ಕರ್ಣಾಟಕದಲ್ಲಿ ಬೌದ್ಧಮತದ ಚಿಹ್ನೆಗಳಿನ್ನೇನೂ ಇಲ್ಲ. ಬನವಾಸಿ, ಮಹಿಷಮಂಡಲಗಳಿಗೆ ಬೌದ್ಧಧರ್ಮಪ್ರಚಾರಕರು ಬಂದಿದ್ದರೆಂದೂ ತಿಳಿಯಬರುತ್ತದೆ. ಜೈನಮತವ್ಯಾಪ್ತಿಯ ವೇಗದಲ್ಲಿ ಬೌದ್ಧಮತಪ್ರಚಾರ ಕಾರ್ಯವು ಕೇವಲ ಪ್ರಾರಂಭದೆಶೆಯಲ್ಲೇ ಕನ್ನಡನಾಡಿನಲ್ಲಿ ಕಡಮೆಯಾಯಿತು. ಬ್ರಾಹ್ಮಣ ಧಾರ್ಮಿಕ ಗ್ರಂಥಗಳಲ್ಲಿ ಆಗಾಗ ಬೌದ್ಧರ ಉಲ್ಲೇಖವಿದ್ದರೆ ಅವು ಜೈನ ಮುಂತಾದ ನಾಸ್ತಿಕರಿಗೆ ಅನ್ವಯಿಸುವುದೆಂದು ಕಾಣಬರುತ್ತದೆ.

## ಜೈನಮತ

ಕಡೆಯ ಶ್ರುತಕೇವಲಿ ಭದ್ರಬಾಹು ಮತ್ತು ಮೌರ್ಯ ಸಮ್ರಾಜ ಚಂದ್ರಗುಪ್ತರು ಕ್ರಿ. ಪೂ. ಮೂರನೆಯ ಶತಮಾನದಲ್ಲಿ ಉತ್ತರದೇಶದಲ್ಲುಂಟಾಗಬಹುದಾದ ದ್ವಾದಶವರ್ಷ ಕ್ಷಾಮ ಭಯದಿಂದ ಶ್ರವಣಬೆಳ್ಗೊಳಕ್ಕೆ ಬಂದು ನಿಂತರಷ್ಟೆ. ಅಂದಿನಿಂದ ಜೈನಮತವು ಕರ್ಣಾಟಕದಲ್ಲೇ ಬೇರೂರಿನಿಂತಿತು. ಆಗ ಬಂದ ಜೈನರು ದಿಗಂಬರ ಶಾಖೆಯವರು. ಪೂರ್ಣವಿರಕ್ತಿಗೆ ಬೆತ್ತಲೆತನವೇ ಅತ್ಯಾವಶ್ಯಕವೆಂಬುದವರ ಮತ. ಭದ್ರಬಾಹುವು ಕರ್ಣಾಟಕಕ್ಕೆ ಬಂದಂದಿನಿಂದ ದಿಗಂಬರ ಸಂಘಗಳಿಗೂ, ಶ್ವೇತಾಂಬರ ಸಂಘಗಳಿಗೂ, ವಿವಾ

ದವು ಹೆಚ್ಚಿತೆಂದು ಹಲವರ ಊಹೆ. ಬರಗಾಲವಾದಮೇಲೆ ದಕ್ಷಿಣಕ್ಕೆ ಬಂದಿದ್ದ ಹಲವು ಜೈನರು ಉತ್ತರದೇಶಕ್ಕೆ ಹೋದರು. ಆಗ ಆ ಜೈನರಲ್ಲಿ ಹಲವು ಬದಲಾವಣೆಗಳಾಗಿದ್ದುವು. ಆದರೆ ದಾಕ್ಷಿಣಾತ್ಯ ಜೈನರು ಆ ಬದಲಾವಣೆಗಳು ಅಶಾಸ್ತ್ರೀಯವೆಂದು ಖಂಡಿಸಿಬಿಟ್ಟರು.

ಹಿಂದೂಮತಕ್ಕೂ ಜೈನಮತಕ್ಕೂ ವಿರಕ್ತಿತತ್ವ ಮತ್ತು ಆಚಾರಗಳಲ್ಲಿ ಹೆಚ್ಚು ಹೋಲಿಕೆಯುಂಟು. 'ನರನು ಕರ್ಮಾಚರಣೆಯಿಂದಲೇ ಗತಿಕಾಣಬೇಕು. ಸತ್ಯಾಚರಣೆಯು ಯಾವನಿಗಾದರೂ ಅಮರತ್ವವನ್ನು ತರಬಲ್ಲುದು' ಎಂಬುದೇ ಜೈನಧರ್ಮದ ಮುಖ್ಯತತ್ವ. ಸಜೀವ ನಿರ್ಜೀವವೆಂಬ ಭಾವವೇ ವಸ್ತುಗಳಲ್ಲಿ ಇಟ್ಟಿಲ್ಲ. ಅಂದರೆ ಎಲ್ಲೆಲ್ಲೂ ಆತ್ಮವಿದೆಯೆಂದಂತಾಯಿತು. ಶ್ರುತಿಯ ಪ್ರಾಮಾಣ್ಯವನ್ನು ಅಂಗೀಕರಿಸುವುದಿಲ್ಲ. ವೇದಕ್ಕೆ ಪ್ರತಿಯಾಗಿ ಜೈನರಿಗೆ ಅರ್ಹಂತರ ಮತ್ತು ತೀರ್ಥಂಕರರ ಜೀವನಗಳೇ ಆದರ್ಶಗಳು. ಕಾರ್ಯಕಾರಣವನ್ನು ಪರೀಕ್ಷಿಸಲು ಬಯಸುವ ವಿಚಾರಪರತೆಗೂ, ನೈತಿಕ ಪರಿಪೂರ್ಣತೆಗೇ ಗಮನ ಕೊಡುವ ಕರ್ಮಾಚರಣೆಗಳಿಗೂ ಹೆಚ್ಚು ಲಕ್ಷ್ಯವನ್ನು ಕೊಡುವ ಈ ಜೈನಮತವು ಬಹುಬೇಗ ದೇಶದಲ್ಲೆಲ್ಲ ಹರಡಿತು. ಎಲ್ಲ ವರ್ಗದವರಿಗೂ ಒಂದೇ ವಿಧವಾದ ಆಶ್ರಯವನ್ನೂ ಸ್ಥಾನವನ್ನೂ ಕೊಡಲು ಸಿದ್ಧವಾದುದರಿಂದ ಎಲ್ಲರೂ ಈ ಮತವನ್ನೇ ಅಂಗೀಕರಿಸಿದರು.

ಈ ಜೈನಮತವು ದಾಕ್ಷಿಣಾತ್ಯ ಸಂಸ್ಕೃತಿಯ ಪೋಷಣೆಗೆ ಮಾಡಿದ ಉಪಕಾರವಷ್ಟಿಷ್ಟಲ್ಲ. ಅದರಲ್ಲೂ ಕರ್ಣಾಟಕ ಜನಾಂಗಕ್ಕೆ ಅದರ ಶೈಶವಾವಸ್ಥೆಯಿಂದಲೂ ಮಾಡಿರುವ ಸಹಾಯವು ವರ್ಣನಾತೀತವು. ಹತ್ತು ಶತಮಾನಗಳಿಗಿಂತ ಅಧಿಕವಾಗಿ ಕನ್ನಡಿಗರಿಗೆ ಧಾರ್ಮಿಕಜೀವನದಲ್ಲಿ ಪಾರಮಾರ್ಥ್ಯವನ್ನು ಕಲ್ಪಿಸಿಕೊಟ್ಟವರು ಯಾರು? ಜೈನಾಚಾರ್ಯರು. ಕರ್ಣಾಟಕ ಕವಿತಾ ಸಾಮ್ರಾಜ್ಯಕ್ಕಾದಿ ಸಮ್ರಾಜರು ಯಾರು? ಜೈನ ಕವಿಗಳು. ಕನ್ನಡಿಗರನ್ನು ಸೌಂದರ್ಯರಸಾಸ್ವಾದನಪರರನ್ನಾಗಿ ಮಾಡಿ ಕರ್ಣಾಟಕ ದೇಶವನ್ನೇ ಸೌಂ

ದರ್ಶರಾತಿಯನ್ನಾಗಿ ಮಾಡಿದವರು ಯಾರು? ಜೈನಕಲಾಕೋವಿದರು.

ಆಗ ವೈದಿಕ ಮತಗಳಿರಲಿಲ್ಲವೆಂದು ಭಾವಿಸಲಾಗದು. ಆದರೆ ಜನಜೀವನದ ಅಗ್ರಸ್ಥಾನಗಳಲ್ಲಿ ಸಾಹಸಿಗಳಾದ ಜೈನರೇ ಮುಂದಾಳುಗಳಾಗಿದ್ದರು. ಕರ್ನಾಟಕದ ಅರಸುಮನೆತನದ ಕದಂಬರು, ಶಾತವಾಹನರು, ಗಂಗರು, ಚಾಳುಕ್ಯರು, ರಾಷ್ಟ್ರಕೂಟರು ಬಳ್ಳಾಳರೂ ಎಲ್ಲರೂ ಸಾಧಾರಣವಾಗಿ ಜೈನಮತಾನುಯಾಯಿಗಳೇ. ಶ್ರೀ ರಾಮಾನುಜಾಚಾರ್ಯರು ಹೊಯ್ಸಳ ಬಿಟ್ಟಿದೇವನಿಗೆ ಶ್ರೀವೈಷ್ಣವ ದೀಕ್ಷೆಯನ್ನು ಕೊಟ್ಟಮೇಲೂ, ವಿಷ್ಣುವರ್ಧನನು ನವೀನ ಮತಾನುಯಾಯಿಗಳು ಸಹಜವಾಗಿ ತೋರ್ಪಡಿಸುವ ದುರಭಿಮಾನವನ್ನಾಗಲಿ, ದ್ವೇಷವನ್ನಾಗಲಿ ತೋರಿಸಲಿಲ್ಲ. ಜೈನ ಬಸತಿಗಳ ನಿರ್ಮಾಣಕ್ಕೂ, ಅವುಗಳ ಜೀರ್ಣೋದ್ಧಾರಕ್ಕೂ ಬೇಕಾದಷ್ಟು ಪ್ರೋತ್ಸಾಹವನ್ನು ಕೊಟ್ಟನು. ಆಗ ಜನರು ಜೈನ ಗುರುಗಳಿಗೂ, ಬ್ರಾಹ್ಮಣ ಗುರುಗಳಿಗೂ ಒಂದೇ ವಿಧವಾದ ಗೌರವವನ್ನು ತೋರಿಸುತ್ತಿದ್ದರು. ಇದರಿಂದ ಆ ಕಾಲದ ಧಾರ್ಮಿಕ ಶೀಲತೆಯು ಹೊರಬೀಳುವುದಿಲ್ಲವೆ? ಉಭಯಮತಾಚಾರ್ಯರೂ "ಯಮನಿಯಮಸ್ವಾಧ್ಯಾಯಧ್ಯಾನಧಾರಣಮೌನಾನುಷ್ಠಾನಜಪತಪಶೀಲಸಂಪನ್ನ" ಇತ್ಯಾದಿ ಒಕ್ಕಣೆಯನ್ನು ಉಪಯೋಗಿಸುತ್ತಿದ್ದುದನ್ನು ಕಂಡರೆ ಬೇರೆ ಬೇರೆ ಮತಾನುಯಾಯಿಗಳಲ್ಲಿದ್ದ ಸಹಾನುಭೂತಿಯೂ, ಹೃದಯವೈಶಾಲ್ಯವೂ ಬಯಲಾಗುತ್ತದೆ.

ವೈದಿಕ ಜೈನ ಮತಗಳಿಗೆ ಪರಸ್ಪರ ಭೇದಗಳಿದ್ದುವು. ಆಯಾಯಾ ಮತೋದ್ಧಾರಕ್ಕೆ ಮಹಾಪ್ರಯತ್ನಗಳೂ ನಡೆದುವು. ಜನರ ಸೌಜನ್ಯ ಸೌಶೀಲ್ಯಗಳನ್ನು ಹೆಚ್ಚಿಸಿ, ಕನ್ನಡ ನಾಡಿನ ಸಂಸ್ಕೃತಿಯನ್ನು ಪೋಷಿಸಿ, ಕರ್ನಾಟಕದ ರಾಷ್ಟ್ರೀಯ ಅಂಗಾಂಗಗಳ ಬೆಳವಣಿಗೆಗೂ ಗಮನಕೊಟ್ಟು, ಕನ್ನಡ ಜನಾಂಗವನ್ನು ಮುಂದರಿಸಿದ ಮಹತ್ಕಾರ್ಯದಲ್ಲಿ ಜೈನರಿಗೆ ಅಗ್ರಸ್ಥಾನವನ್ನು ಕೊಡಬೇಕು. ಅವರ ಉತ್ಕಟಕಲ್ಪನೆಗಳೂ, ಸಾಹಸಕಾರ್ಯಗಳೂ ಜನಜೀವನದಲ್ಲಿ ಜ್ಯೋತಿ

ಸ್ತ್ರಾಪುಗಳಾಗಿವೆ. ಜೈನರು ಪ್ರಬಲಾವಸ್ಥೆಯಲ್ಲಿದ್ದಾಗಲೇ (ಶ್ರವಣ ಬೆಳ್ಗೊಳ, ಕಾರ್ಕಳ, ವೇಣೂರಿನ) ಜಗದದ್ಭುತ ಗೋಮಟೇಶ್ವರ ವಿಗ್ರಹಗಳೂ, ವಿಸ್ಮಯಕಾರಕವಾದ ಗುಹಾಂತರ್ದೇವಾಲಯಗಳೂ (ಕಾರ್ಲೆ, ಅಜಂತ, ಎಲ್ಲೋರ, ಬಾದಾಮಿ) ಕರ್ಣಾಟಕ ಸಾಹಿತ್ಯದ ಪ್ರಥಮಾವಸ್ಥೆಯಲ್ಲೇ ಘನಗಾಂಭೀರ್ಯವೂ, ವೀರರಸಪ್ರಧಾನವೂ ಆದ ಉದ್ದಾಮ ಗ್ರಂಥಗಳೂ (ಭಾರತ, ಗದಾಯುದ್ಧ) ಕರ್ಣಾಟಕ ದೇಶದಲ್ಲಿ ಕಂಗೊಳಿಸಿದುವು.

ಜೈನಮತಪ್ರಭಾವದಿಂದ ವೈದಿಕಮತದ ಯಜ್ಞಯಾಗಾದಿಗಳು ಕಡಿಮೆಯಾದುವು. ಕ್ರಿ. ಶ. ೧೩ನೆಯ ಶತಮಾನದಲ್ಲಿ ಅವತರಿಸಿ, ಯಜ್ಞಯಾಗಾದಿಗಳಲ್ಲಿ ಪಶುವಧೆಯನ್ನು ತಪ್ಪಿಸಲು ಪಿಷ್ಟಕೃತಪಶುಗಳನ್ನು ಇಟ್ಟು ಕೆಲಸ ನಡೆಸಬೇಕೆಂದು ನಿಶ್ಚಯಿಸಿದ ಶ್ರೀಮಧ್ವಾಚಾರ್ಯರ ಮೇಲೂ ಜೈನಮತದ ಅಹಿಂಸಾತತ್ವವು ತನ್ನ ವರ್ಚಸ್ಸನ್ನು ಹಾಕಿತೆಂದರೆ ಕರ್ಣಾಟಕ ಧಾರ್ಮಿಕೋನ್ನತಿಗೆ ಜೈನಮತವು ಮಾಡಿರುವ ಸಹಾಯವು ಅಮೌಲ್ಯವಾದುದೆಂದು ತೋರಿಬರುತ್ತದೆ.

## ಶೈವಮತ

ಶೈವಮತವು ಕರ್ಣಾಟಕದಲ್ಲಿ ಬಹುಕಾಲಕ್ಕೆ ಹಿಂದೆಯೇ ಪ್ರಚಾರದಲ್ಲಿದ್ದ ಮತವು. ತ್ರಿಮೂರ್ತಿಗಳಲ್ಲಿ ಮೂರನೆಯವನಾದ ಶಿವನ ಆರಾಧನೆಯು ಶ್ರುತಿ ಮತ್ತು ಸ್ಮೃತಿಗಳ ಕಾಲದಲ್ಲಿಯೇ ಆಚರಣೆಗೆ ಬಂದುದು. ಅದರ ತತ್ವವು ಇತರ ವೈದಿಕಮತಗಳಂತೆಯೇ ಉಪನಿಷತ್ತುಗಳ ಆಧಾರವನ್ನೂ ಹೊಂದಿರುತ್ತದೆ. ಮತ್ತು ಅದಕ್ಕೆ ಸಂಬಂಧಪಟ್ಟ ಆಚಾರಗಳು ವೇದಸಮ್ಮತವಾಗಿವೆ. ಪರಶಿವನ ಶಾಂತವಾದ ಅಥವಾ ಭಯಂಕರವಾದ ಮೂರ್ತಿಯಲ್ಲಿ ಅತುಳವಾದ ಭಕ್ತಿಯೇ ಮೋಕ್ಷಕ್ಕೆ ನಿಜರವಾದ ಮಾರ್ಗವೆಂಬುದು ಶೈವಮತದ ಸಿದ್ಧಾಂತವು. ಶಿವಾರಾಧನೆಯು ಭಕ್ತನಲ್ಲಿ ಅತೀತೀವ್ರವಾದ ಸದ್ಗುಣಗಳು ಉದ್ಭವಿಸುವಂತೆ ಮಾಡುವದು; ಏಕೆಂದರೆ ಪರಿಶುದ್ಧನೂ ಶಾಂತನೂ ಆದ ಶಿವನು ವೈರಾಗ್ಯಕ್ಕೆ ಅಧಿಪತಿಯು. ಶಿವಭಕ್ತರು

(ಸ್ಮಶಾನಬೂದಿಯಾದ) ವಿಭೂತಿಯನ್ನು ಧರಿಸಿ, ಅನಂತಚೈತನ್ಯಸ್ವರೂಪವಾದ ಲಿಂಗವನ್ನು ಪೂಜಿಸುತ್ತಾರೆ. ತಾವು ಪಾಶದಲ್ಲಿ ಸಿಕ್ಕಿ ನರಳುತ್ತಿರುವ ಮೂಗುಜಂತುಗಳಂತಿರುವ ಪಶುಗಳೆಂದು ತಿಳಿದು ವೃಷಭವಾಹನನಾದ ಶಿವನಕೃಪೆಯಿಂದ ಈ ಬಂಧನದಿಂದ ವಿಮೋಚನೆ ಹೊಂದಲು ಹಂಬಲಿಸುವರು. ಈ ಮಾರ್ಗವು ಅತ್ಯಂತ ತೀವ್ರವಾದ ಆತ್ಮನಿವೇದನವನ್ನೂ, ಭಕ್ತಿಯನ್ನೂ ಹುಟ್ಟಿಸುತ್ತದೆ. ಕ್ರಿಸ್ತಶಕಾರಂಭದಿಂದಲೂ ಶೈವಮತವು ದಕ್ಷಿಣ ಇಂಡಿಯದಲ್ಲಿಯೂ ಹಾಗೂ ಕರ್ಣಾಟಕದಲ್ಲಿಯೂ ಪ್ರಬಲಸ್ಥಿತಿಯಲ್ಲಿದ್ದಿತು. ಶಾತವಾಹನ ಕಾಲದಲ್ಲಿ ಲಿಂಗಪೂಜೆಗಾಗಿ ಶಿವಾಲಯಗಳಿಗೆ ದತ್ತಿಯನ್ನು ಕೊಟ್ಟಿದ್ದಕ್ಕೆ ಅನೇಕ ಸಾಕ್ಷ್ಯಗಳು ದೊರೆತಿವೆ.

ಆಗಮಗಳು, ಶೈವಮತವನ್ನೂ ಶೈವಾಚಾರವನ್ನೂ ಬಹುಮಟ್ಟಿಗೆ ರೂಪಾಂತರ ಹೊಂದುವಂತೆ ಮಾಡಿದುವು. ಹೀಗೆ ರೂಪಾಂತರ ಹೊಂದಿದ, ಕರ್ಣಾಟಕದಲ್ಲಿ ಪ್ರಚಾರದಲ್ಲಿದ್ದ ಪದ್ಧತಿಗಳಲ್ಲಿ ಕಾಪಾಲಿಕ ಮತ್ತು ಕಾಲಾಮುಖ ಎಂಬೆರಡನ್ನೂ ಇಲ್ಲಿ ಸೂಚಿಸಬಹುದು. ಇವೆರಡೂ ಉತ್ತರ ಇಂಡಿಯಾದಲ್ಲಿ ಹುಟ್ಟಿದುವು. ಶಿವನ ಕಾಲಭೈರವ ರೂಪವನ್ನು ಆರಾಧಿಸುವುದು ಕೊರಳಿನಲ್ಲಿ, ರುಂಡಮಾಲೆಯನ್ನು ಧರಿಸುವುದು, ಮತ್ತು ಪ್ರಾಣಿಗಳನ್ನು ಬಲಿಕೊಡುವುದು ಇವೇ ಕಾಪಾಲಿಕರ ಆಚರಣೆಗಳು. ಇದು ಹೆಚ್ಚು ಕಡಮೆ ವಾಮಾಚಾರದಂತೆಯೇ ಇದೆ. ಶಂಕರಾಚಾರ್ಯರು ಹುಟ್ಟಿ ಈ ಮತದ ದುಷ್ಟಾಚಾರಗಳನ್ನು ಹೊರಡಿಸಲಿಕ್ಕೆ ಹತ್ತಿದನಂತರ ಈಮತದ ಪ್ರಾಬಲ್ಯವು ಕಡಮೆಯಾಗುತ ಬಂದಿತು. ಕಾಲಾಮುಖ ಅಥವಾ ಲಾಕುಲೀಶ ಪಾಶುಪತ ಪದ್ಧತಿಯು ಕಾಶ್ಮೀರದಿಂದಬಂದಂತೆ ತೋರುತ್ತದೆ. ಬ್ರಹ್ಮಚರ್ಯವನ್ನಾಚರಿಸಿ ಯೋಗಾಭ್ಯಾಸದಿಂದ ಭಕ್ತಿರಸೋತ್ಪಾದಕವನ್ನು ಮಾಡುವ ಆಚರಣೆಗಳಿಂದ ಪರಮಾತ್ಮನಲ್ಲಿ ಐಕ್ಯವನ್ನು ಹೊಂದುವುದೇ ಈ ಕಾಲಾಮುಖರ ಧ್ಯೇಯವು. ಇವರ ಭಕ್ತಿ ರಸೋತ್ಪಾದಕವಾದ ಆಚರಣೆಗಳನ್ನು ನೋಡಿದರೆ ಚೈತನ್ಯನ ಅನುಯಾಯಿಗಳಾದ ವೈಷ್ಣವರ ಆಚರಣೆಗಳು ಜ್ಞಾಪಕಕ್ಕೆ ಬರು

ತ್ತವೆ. ಕಾಲಾಮುಖರು ಕ್ರಿ. ಶ. ೯ ನೇ ಶತಮಾನದಿಂದ ೧೫ ನೇ ಶತಮಾನದವರೆಗೆ ಕರ್ನಾಟಕದಲ್ಲಿ ಬಹಳ ಪ್ರಾಬಲ್ಯವನ್ನು ಹೊಂದಿದ್ದರು. ಅವರು ವಿದ್ಯಾಪ್ರಚಾರಕರೂ ಮತಬೋಧಕರೂ ಆಗಿದ್ದರು; ೧೨ ನೇ ಶತಮಾನದಲ್ಲಿ ಶಿವಮೊಗ್ಗಾ ಡಿಸ್ಟ್ರಿಕ್ಟ ಜಿಲ್ಲಾವೆಯಲ್ಲಿ ಪ್ರಸಿದ್ಧವಾದ ವಿದ್ಯಾಪೀಠವು ಇದ್ದ ಕಾಲಕ್ಕೆ, ಈ ಕಾಲಾಮುಖರು ಅದರ ವಿಷಯದಲ್ಲಿ ಬಹಳ ಪರಿಶ್ರಮವನ್ನು ತೆಗೆದುಕೊಳ್ಳುತ್ತಿದ್ದರೆಂದು ತಿಳಿದುಬರುತ್ತದೆ.

ಈ ಮತಾನುಯಾಯಿಗಳು, ಕಾಳೀ ಚಾಮುಂಡಿ ಮುಂತಾದ ರೂಪಗಳಲ್ಲಿ ಲೋಕಮಾತೆಯ ಆರಾಧನೆಯನ್ನು ಪ್ರಾರಂಭಿಸಿದ್ದಲ್ಲದೆ, ಕರ್ನಾಟಕದಲ್ಲಿ ಶೈವಮತವು ಚನ್ನಾಗಿ ಹರಡಿ ಮುಂದೆ ವೀರಶೈವ ಮತವು ಹುಟ್ಟುವುದಕ್ಕೆ ಬಹಳ ಸಹಾಯ ಮಾಡಿದರು.

ಮೇಲೆ ಹೇಳಿದಂತೆ ಉತ್ತರ ಇಂಡಿಯದಿಂದ ಕರ್ನಾಟಕಕ್ಕೆ ಬಂದ ಶೈವಮತದೊಂದಿಗೆ ೧೦ ನೇ ಶತಮಾನದಲ್ಲಿ ದಕ್ಷಿಣದಿಂದ ಬಂದ ಶೈವ ಮತವನ್ನೂ ಗಮನಿಸಬೇಕಾಗಿದೆ. ತಮಿಳು ನಾಡಿನಲ್ಲಿ ಬಹಳ ಕಾಲಕ್ಕೆ ಹಿಂದೆಯೇ ಶೈವಸಿದ್ಧಾಂತವು ಬಹಳ ಪ್ರಾಬಲ್ಯವನ್ನು ಹೊಂದಿ, ತಮಿಳುಭಾಷೆಯಲ್ಲಿ ಭಕ್ತಿರಸ ಭರಿತವಾದ ಅನೇಕ ಸಾಹಿತ್ಯ ವಿಶೇಷಗಳ ಉತ್ಪತ್ತಿಗೆ ಕಾರಣವಾಯಿತು. ತಿರುವಳ್ಳುವರ್, ತಾಯುಮಾನವರ್, ತಿರುಜ್ಞಾನಸಂಬಂಧರ್, ಹಾಗೂ ಮಾಣಿಕ್ಯವಾಚಗರ್ ಮುಂತಾದ ಅನೇಕ ಮಹರ್ಷಿಯರ ಕಾವ್ಯಗಳು ಶೈವರಿಗೆ ಮಾತ್ರವೇ ಅಲ್ಲದೆ ತಮಿಳು ನಾಡಿನ ಎಲ್ಲ ಜನರಿಗೂ ಕೂಡ, ಪರಮಾತ್ಮನಲ್ಲಿ ಭಕ್ತಿಯನ್ನು ಹುಟ್ಟಿಸಲು ಅತ್ಯಂತ ಸಹಕಾರಿಗಳಾಗಿವೆ. ಮೊದಲು ಪಲ್ಲವರು, ಅನಂತರ ಚೋಳರು ದಿಗ್ವಿಜಯಾರ್ಥವಾಗಿ ಕರ್ನಾಟಕಕ್ಕೆ ದಂಡೆತ್ತಿಬಂದಾಗ, ಈ ಭಕ್ತಿರಸಪೂರ್ಣವಾದ ಸಾಹಿತ್ಯವು ಅವರೊಡನೆ ಕರ್ನಾಟಕವನ್ನು ಹೊಕ್ಕು, ಭಕ್ತಿ ಹಾಗೂ ಸಾತ್ವಿಕ ಜೀವನವನ್ನೇ ಮುಖ್ಯಧ್ಯೇಯಗಳುಳ್ಳ ವೀರಶೈವ ಮತದ ಉತ್ಪತ್ತಿಗೂ, ಮತ್ತು ಕನ್ನಡ ಭಾಷೆಯಲ್ಲಿ ಕೂಡ ಅದೇ ತರದ ಭಕ್ತಿರಸಭರಿತವಾದ ಸಾಹಿತ್ಯದ ಉತ್ಪತ್ತಿಗೂ ಕಾರಣವಾ

ಯಿತು. ಉದಾಹರಣೆಗಾಗಿ, ಕನ್ನಡದಲ್ಲಿ ಪುರಾತನರೆಂದು ಕರೆಯ ಲ್ಪಡುವ, ಅರವತ್ತುಮೂರು ತಮಿಳು ನಾಯಿನಾರುಗಳನ್ನು ಅನೇಕ ವೀರಶೈವ ಗ್ರಂಥಕಾರರು ತಮ್ಮ ಗ್ರಂಥಗಳಲ್ಲಿ ವರ್ಣಿಸುವುದಲ್ಲದೆ, ಜನಸಾಮಾನ್ಯಕ್ಕೆ ಅವರು ಆದರ್ಶಪ್ರಾಯರಾಗಿರುವರೆಂದು ಪದೇ ಪದೇ ಹೇಳುತ್ತಾರೆ.

## ವೀರಶೈವ ಮತ

ಬಸವೇಶ್ವರನಿಂದ (೧೨ ನೇ ಶತಮಾನದಲ್ಲಿ) ಉದ್ಧರಿಸಲ್ಪಟ್ಟ ವೀರಶೈವ ಮತದ ಉತ್ಪತ್ತಿಗೆ ಆರಾಧ್ಯಮತವು ಕ್ಷೇತ್ರಪ್ರಾಯವಾಗಿ ಪರಿಣಮಿಸಿತು. ಆರಾಧ್ಯ ಬ್ರಾಹ್ಮಣರು ಶೈವರು; ಅವರು ವೈದಿಕತಂತ್ರಾವಲಂಬಿಗಳು, ಹಾಗೂ ಲಿಂಗಾರಾಧನೆಗೆ ಹೆಚ್ಚಿನ ಮಹತ್ವವನ್ನು ಕೊಟ್ಟವರು. ಇವರ ಮತವು ದಕ್ಷಿಣ ದೇಶದ ಶುದ್ಧ ಶೈವಮತಕ್ಕೂ, ವೀರಶೈವಮತಕ್ಕೂ ಮಧ್ಯಸ್ಥವಾದುದು. ವೀರಶೈವಮತೋದ್ಧಾರಕನಾದ ಬಸವೇಶ್ವರನೂ, ಮತ್ತು ಆ ಮತಪ್ರಚಾರಕನೆಂದು ಅತ್ಯಂತ ಪ್ರಸಿದ್ಧಿ ಹೊಂದಿದ ಏಕಾಂತದ ರಾಮಯ್ಯನೂ ಕೂಡ ಆರಾಧ್ಯ ಬ್ರಾಹ್ಮಣರೇ. ಇವರು ಬ್ರಾಹ್ಮಣ ವೈದಿಕ ಮತಕ್ಕೆ ವಿರುದ್ಧವಾಗಿ ನಿಂತು ಬ್ರಾಹ್ಮಣ ಕರ್ಮಗಳನ್ನು ಅಲ್ಲಗಳೆಯಲಿಕ್ಕೆಹತ್ತಿದರು. ಹಾಗೂ ಲಿಂಗಾರಾಧನೆ ಮತ್ತು ಲಿಂಗಧಾರಣೆಯ ಮಹತ್ವವನ್ನು ಒತ್ತಿ ಹೇಳಿದರು. ಲಿಂಗವು ಪರಮಾತ್ಮ ಸ್ವರೂಪವು, ಲಿಂಗವು ಜೀವಾತ್ಮ ಸ್ವರೂಪವು. ಆದ್ದರಿಂದ ಲಿಂಗಧಾರಣೆಯು ಲಿಂಗಾಂಗ ಸಮರಸ್ಯ ಎಂದರೆ ಪರಮಾತ್ಮನಲ್ಲಿ ಜೀವಾತ್ಮನ ಐಕ್ಯವನ್ನು ಸೂಚಿಸುವುದು. ವೀರಶೈವ ಮತವು ಆಗಮಗಳ ಆಧಾರದ ಮೇಲೆ ಒಂದು ಬಗೆಯ ಆಧ್ಯಾತ್ಮಿಕ ಸಿದ್ಧಾಂತವನ್ನು ಬೆಳೆಯಿಸಿತು ಈ ಮತವು ಜಾತಿ, ಕುಲ, ಕೀಳು, ಮೇಲು, ಹೆಂಗಸು, ಗಂಡಸೆನ್ನದೆ ಎಲ್ಲರನ್ನೂ ತನ್ನ ರೊಪ್ಪಕ್ಕೆ ಸೇರಿಸಿಕೊಳ್ಳುತ್ತಾ, ಬಹಳ ಪ್ರಾಬಲ್ಯಕ್ಕೆ ಬರಹತ್ತಿತು. ದಕ್ಷಿಣ ಇಂಡಿಯಾದಲ್ಲಿ ಜಾತಿ ಭೇದ ಹಾಗೂ ಬ್ರಾಹ್ಮಣ ಧರ್ಮದ ಸಂಕುಚಿತ ಆಚರಣೆಗಳಿಗೆ ವೀರಶೈವ ಮತವು ವಿಷಪ್ರಾಯವಾಗಿ ಪರಿಣಮಿಸಿತು.

ಕರ್ಣಾಟಕದ ಜನಜೀವನ ಮತ್ತು ಸಾಹಿತ್ಯವನ್ನು ನೂರ್ಪಾಟುಮಾಡುವದಕ್ಕೆ ವೀರಶೈವಮತವು ಪ್ರಬಲವಾದ ಕಾರಣವಾಗಿ ಪರಿಣಮಿಸಿತು. ಜಾತಿಭೇದದ ಮುಖ್ಯ ತತ್ವವಾದ ಭ್ರಾತೃಭಾವ ಹಾಗೂ, ಜೀವನದಲ್ಲಿ ಸತ್ಯ, ಪ್ರಾಮಾಣಿಕತೆಗಳನ್ನು ಹುಟ್ಟಿಸುವುದರಲ್ಲಿಯೂ, ಮತ್ತು ಹಿಂದುಗಳಲ್ಲಿ ಅಂತ್ಯಜರೆನಿಸಿಕೊಂಡಿರುವವರ ಅತ್ಯಂತ ಮೂಢ ಮತ್ತು ಕ್ರೂರವಾದ ಮತಾಚಾರಗಳನ್ನು ನಿರ್ಮೂಲಮಾಡಿ ಅವರು ಮಾಂಸಾಹಾರವನ್ನು ಬಿಟ್ಟು, ಸತ್ಯ ಪ್ರಾಮಾಣಿಕತೆ ಮುಂತಾದ ಸದ್ಗುಣಗಳಿಂದ ತಮ್ಮ ಜೀವನವನ್ನು ಪರಿಶುದ್ಧ ಮಾಡಿಕೊಳ್ಳುವಂತೆ ಮಾಡಿ ಅವರನ್ನು ಉದ್ಧರಿಸುವುದರಲ್ಲಿಯೂ ವೀರಶೈವಮತವು ಮಾಡಿದ ಕೆಲಸವು ಅತ್ಯಂತ ಸ್ತೋತ್ರಾರ್ಹವಾಗಿರುವುದು. ಈ ಮತ ಪ್ರಚಾರದಲ್ಲಿ ಜನಸಾಮಾನ್ಯದ ಭಾಷೆಯೇ ಉಪಯೋಗಿಸಲ್ಪಟ್ಟದ್ದರಿಂದ ಕನ್ನಡ ಗದ್ಯವು ಅಭಿವೃದ್ಧಿಗೆ ಬರಲು ಕಾರಣವಾಯಿತು. ಜೈನರು ಕನ್ನಡ ಪದ್ಯಕಾವ್ಯದಲ್ಲಿ ಉದ್ಗ್ರಂಥಗಳನ್ನು ಬರೆದು ಕನ್ನಡ ಮಾತೆಯ ಸೇವೆಯನ್ನು ಮಾಡಿದರು. ಆದರೆ ವೀರಶೈವರೇ ಕನ್ನಡದಲ್ಲಿ, ಬಿಕ್ಕಟ್ಟಾದ ಅರ್ಥಸಂಗ್ರಹವಾದ ಗದ್ಯಶೈಲಿಯನ್ನು ನಿರ್ಮಾಣಮಾಡಿ ಪ್ರಚಾರಪಡಿಸಿದವರು.

## ವೇದಾಂತ ಮತಗಳು

ಮೇಲೆ ಹೇಳಿದ ಮತಗಳು ಸಾಧಾರಣವಾಗಿ ವೇದಾಂತ ವಂಶಕ್ಕೆ ವಿರುದ್ಧವಾದುವು ; ಅಥವಾ ವೇದಗಳ ಆಧಾರವನ್ನು ಹೊಂದಿದ್ದರೂ, ಬಾದರಾಯಣರೇ ಮೊದಲಾದ ಋಷಿಗಳು, ದಶೋಪನಿಷತ್ತುಗಳು, ಬ್ರಹ್ಮಸೂತ್ರಗಳು, ಹಾಗೂ ಭಗವದ್ಗೀತೆ ಇವುಗಳ ಆಧಾರದ ಮೇಲೆ ಮಾಡಿದ ಸಿದ್ಧಾಂತಗಳನ್ನು ಒಪ್ಪಲಿಲ್ಲ. ವೇದಾಂತ ತತ್ವವು ಹಿಂದೂಸ್ಥಾನದಲ್ಲಿ ಹುಟ್ಟುವ ಮತಗಳಿಗೆ ತೌರುಮನೆಯು. ವೇದಾಂತ ಸಿದ್ಧಾಂತ ನಿರ್ಣಯದಲ್ಲಿ ಉಂಟಾದ ವ್ಯತ್ಯಾಸಗಳಿಂದ ಶಂಕರ, ರಾಮಾನುಜ, ಮಧ್ವ ಈ ಮೂವರ ಮತಗಳು ಉತ್ಪನ್ನವಾದುವು. ಈ ಮೂವರೂ ದಕ್ಷಿಣ ಹಿಂದೂ ಸ್ಥಾನದವರು ;

ಮತ್ತು ಕರ್ನಾಟಕವು ಈ ಮೂರು ಮತಗಳಿಗೂ ಆಶ್ರಯವನ್ನು ಕೊಟ್ಟು ಪೋಷಣೆಮಾಡಿರುವುದು.

ಇದರಲ್ಲಿ ಮೊದಲನೆಯವರಾದ ಶಂಕರಾಚಾರ್ಯರು ಕೇರಳ ಬ್ರಾಹ್ಮಣರು, ಹಾಗೂ ಹಿಂದೂಸ್ಥಾನದಲ್ಲಿ ಹುಟ್ಟಿದ ಅದ್ಭುತವಾದ ಬುದ್ಧಿಶಕ್ತಿಯನ್ನು ತೋರಿಸಿದ ಮಹಾ ಪುರುಷರಲ್ಲಿ ಅಗ್ರಗಣ್ಯರು. ಅವರು ೩೨ ವರ್ಷಗಳ ಕಾಲ ಮಾತ್ರ ಬದುಕಿದಾಗ್ಯೂ ಅಷ್ಟು ಅಲ್ಪಕಾಲದಲ್ಲೇ ಇಡೀ ಭಾರತವರ್ಷದಲ್ಲಿ ವೇದಾಂತ ಪ್ರಚಾರವನ್ನು ಮಾಡಿ, ನಾಸ್ತಿಕತನ್ವ, ಅನಾಚಾರಗಳನ್ನು ನಿರ್ಮೂಲಮಾಡಿ, ವೇದಾಂತಮತದ ಗತವೈಭವವನ್ನು ಹಿಂದಕ್ಕೆ ತಂದರು. ಮೈಸೂರು ಸಂಸ್ಥಾನದಲ್ಲಿರುವ, ಋಷ್ಯಶೃಂಗರ ಹೆಸರಿನಿಂದ ಕರೆಯಲ್ಪಡುವ ಶೃಂಗೇರಿಯು ಶಂಕರಾಚಾರ್ಯರ ಮುಖ್ಯ ಸ್ಥಳವು; ಮತ್ತು ಅವರ ಶಿಷ್ಯರಲ್ಲಿ ಮುಖ್ಯರಾದ ಚಿತ್ಸುಖಾಚಾರ್ಯರು ದಕ್ಷಿಣ ಕನ್ನಡದಲ್ಲಿರುವ ಗೋಕರ್ಣದ ಬ್ರಾಹ್ಮಣರು. ಶೃಂಗೇರಿಪೀಠವನ್ನಲಂಕರಿಸಿದ ಶ್ರೀ ವಿದ್ಯಾರಣ್ಯಸ್ವಾಮಿಗಳು ವಿಜಯನಗರ ರಾಜ್ಯಸ್ಥಾಪಕರು. ಶಂಕರಾಚಾರ್ಯರ ಅನುಯಾಯಿಗಳು ಶಿವಾರಾಧಕರು; ಆದರೆ ಈ ವಿಷಯಕ್ಕೆ ಅವರು ಶುದ್ಧಶೈವ ಅಥವಾ ವೀರಶೈವರಷ್ಟು ಪ್ರಾಮುಖ್ಯತೆಯನ್ನು ಕೊಡುವುದಿಲ್ಲ. ಇವರ ಕೈಯಲ್ಲಿ ಆಧ್ಯಾತ್ಮಿಕ ಸಿದ್ಧಾಂತವು ಅದರ ಪರಮಾವಧಿಯನ್ನು ಹೊಂದಿತು. ಪಾಶ್ಚಿಮಾತ್ಯರಲ್ಲಿ ಪ್ರಸಿದ್ಧರಾದ ಕ್ಯಾಂಟ್ ಮತ್ತು ಸ್ಪೋಪನ್ಹೇರ್ ಮುಂತಾದವರ ಸಿದ್ಧಾಂತವು ಕೇವಲ ಇವರ ಸಿದ್ಧಾಂತದ ಪ್ರತಿಧ್ವನಿಗಳಂತಿವೆ.

ರಾಮಾನುಜಾಚಾರ್ಯರು ತಮಿಳು ನಾಡಿನವರು; ಆದರೆ ಅವರು ಮತಪ್ರಚಾರಣೆ ಮಾಡಲು ಪ್ರಾರಂಭಿಸಿ ಅಲ್ಲಿ ತೊಂದರೆಗೆ ಸಿಕ್ಕಿದಾಗ ಕರ್ನಾಟಕವು ಅವರಿಗೆ ಆಶ್ರಯವನ್ನು ಕೊಟ್ಟಿತು. ಹೊಯ್ಸಳರಾಜನಾದ ಬಿಟ್ಟದೇವನು ರಾಮಾನುಜಾಚಾರ್ಯರ ಮತವನ್ನವಲಂಬಿಸಿ, ವಿಷ್ಣುವರ್ಧನನೆಂಬ ಹೆಸರನ್ನಿಟ್ಟುಕೊಂಡನು. ಅವನ ಕಾಲದಲ್ಲಿ ಅನ್ಯಮತಸಹನೆಯು ಬಹಳವಾಗಿದ್ದಿತು. ಅವನ ಸಂಸಾರವು ಅನೇಕಮತಸ್ಥರ ಕೂಟವಾಗಿದ್ದಿತು. ವಿಷ್ಣುವರ್ಧನನು ವೈಷ್ಣವಮತವನ್ನು

ಅವಲಂಬಿಸಿದ್ದರಿಂದ ದೇವಸ್ಥಾನಗಳ ನಿರ್ಮಾಣವು ಹೆಚ್ಚಿತು. ಎರಡು ಶತಮಾನಗಳವರಿವಿಗೂ ಹೊಯ್ಸಳರಾಜರ ಆಶ್ರಯದಿಂದ ಹಿಂದೂಸ್ಥಾನದ ಶಿಲ್ಪಶಾಸ್ತ್ರದಲ್ಲಿ ಅತ್ಯಂತ ಪ್ರಖ್ಯಾತಿಯನ್ನು ಹೊಂದಿರುವ ಅಮೋಘವಾದ ದೇವಾಲಯಗಳು ಕಟ್ಟಲ್ಪಟ್ಟವು. ಮೈಸೂರು ಸಂಸ್ಥಾನದಲ್ಲಿರುವ ಮೇಲ್ಕೋಟೆಯಲ್ಲಿ ರಾಮಾನುಜಾಚಾರ್ಯರು, ವರ್ಷಕ್ಕೆ ಒಂದು ದಿವಸ ಪಂಚಮರು ದೇವಾಲಯದೊಳಗೆ ಪ್ರವೇಶಿಸುವಂತೆ ಏರ್ಪಾಟು ಮಾಡಿದರು. ಅವರ ಅಜ್ಞಾತವಾಸದಲ್ಲಿ ಒಂದು ದಿನ ಒಬ್ಬ ಪಂಚಮನಿಂದ ಅತಿಥ್ಯವನ್ನು ಹೊಂದಿದುದೇ ಇದಕ್ಕೆ ಕಾರಣವೆಂದು ಪ್ರತೀತಿಯಿದೆ. ಕ್ರೂರದೇವತೆಗಳನ್ನು ಬಿಟ್ಟು ಶ್ರೀಲಕ್ಷ್ಮೀನಾರಾಯಣರ ಪೂಜೆಗೆ ಪ್ರಾಮುಖ್ಯತೆಯನ್ನು ಕೊಟ್ಟದ್ದರಿಂದ, ಪೂಜಾಕಾರ್ಯದಲ್ಲಿ ಒಂದು ತರದ ಮಾಧುರ್ಯವೂ, ಸೌಂದರ್ಯವೂ ಹುಟ್ಟಿತು. ಅದಲ್ಲದೆ ಆಚಾರ್ಯರು ಎಲ್ಲಾ ಜಾತಿಗಳವರಿಗೂ ಸ್ವಲ್ಪವೂ ಭೇದವಿಲ್ಲದೆ ಪ್ರಸಾದವನ್ನು ಕೊಟ್ಟು, ತಮ್ಮ ಮತಕ್ಕೆ ಸೇರಿಸಿಕೊಳ್ಳಲು ಪ್ರಾರಂಭಿಸಿದ್ದರಿಂದ, ಮುಸಲ್ಮಾನರ ಹೊಡೆತದಿಂದ ಚದುರಿಹೋಗಿದ್ದ ಹಿಂದೂ ಜನಾಂಗವು ಮತ್ತೆ ಒಂದಾಗಲು ಅವಕಾಶವುಂಟಾಯಿತು. ರಾಮಾನುಜಾಚಾರ್ಯರಿಂದ ಪುನರುಜ್ಜೀವನ ಮಾಡಲ್ಪಟ್ಟ ಭಕ್ತಿಮಾರ್ಗವು ಬಹಳ ವೇಗವಾಗಿ ಹರಡಹತ್ತಿತು. ಉತ್ತರದಲ್ಲಿ ರಾಮಾನಂದ ಮೊದಲಾದ ಭಕ್ತಾಗ್ರೇಸರರು, ಆಚಾರ್ಯರು ತಮ್ಮ ಗುರುಗಳೆಂದು ಹೇಳಲಾರಂಭಿಸಿದರು. ಸಾತಾನಿ ಮತ್ತು ಇತರ ವೈಷ್ಣವಜಾತಿಗಳು ಹುಟ್ಟಿದುವು. ವಿಜಯನಗರಸಂಸ್ಥಾನದ ಕಾಲದಲ್ಲಿ ಶ್ರೀವೈಷ್ಣವರು ಬಹಳ ಉನ್ನತಸ್ಥಿತಿಯಲ್ಲಿದ್ದರು. ಹಾಗೂ ದಕ್ಷಿಣದೇಶದ ಅನೇಕ ದೇವಾಲಯಗಳು ಅದೇ ಕಾಲದಲ್ಲಿಯೇ ಕಟ್ಟಲ್ಪಟ್ಟವು.

ವೇದಾಂತ ಮತ ಸ್ಥಾಪಕರಲ್ಲಿ ಮೂರನೆಯವರಾದ ಮಧ್ವಾಚಾರ್ಯರು ೧೩ ನೇ ಶತಮಾನದಲ್ಲಿ ದಕ್ಷಿಣಕನ್ನಡದಲ್ಲಿ ಹುಟ್ಟಿದರು. ಈ ಬ್ರಹ್ಮಾಂಡಕ್ಕೆ ಒಡೆಯನಾದ ಪುರುಷೋತ್ತಮನಲ್ಲಿ ಅತುಳವಾದ ಭಕ್ತಿಯನ್ನಿಟ್ಟು ಆತನಿಗೆ ಸಂಪೂರ್ಣ ಆತ್ಮನಿವೇದನವನ್ನು ಮಾಡ

ಬೇಕೆಂಬುದೇ ಶ್ರೀಮಧ್ವಾಚಾರ್ಯರ ತತ್ವವು. ರಾಮಾನುಜಾಚಾರ್ಯರು ಮಾಯಾವಾದವನ್ನು ಖಂಡಿಸಿ, ದೇವರು ದಯಾಮಯನೆಂದು ಬೋಧಿಸಿ ಶಂಕರಾಚಾರ್ಯರ ಶುದ್ಧ ಅದ್ವೈತವನ್ನು ಸ್ವಲ್ಪಮಟ್ಟಿಗೆ ಖಂಡನೆ ಮಾಡಿದರು. ಆದರೆ ಮಾಧ್ವಾಚಾರ್ಯರು ಇನ್ನೂ ಸ್ವಲ್ಪದೂರ ಹೋಗಿ, ಪರಮಾತ್ಮ ಜೀವಾತ್ಮ ಮತ್ತು ಜಡಜಗತ್ತು ಇವು ಒಂದೊಂದು ಬೇರೆಬೇರೆಯೆಂದೂ, ವ್ಯತ್ಯಾಸವನ್ನು ಲಕ್ಷ್ಯಕ್ಕೆ ತರದಿರುವ ಸಿದ್ಧಾಂತವು ಕೇವಲ ತಪ್ಪಾದುದೆಂದೂ, ವಾದಿಸಿದರು. ಶಂಕರ ರಾಮಾನುಜರಂತೆ ಮಧ್ವಾಚಾರ್ಯರೂ ಕೂಡ ತಮ್ಮಮತವನ್ನು ಎಲ್ಲೆಲ್ಲಿಯೂ ಪ್ರಚಾರಪಡಿಸಿ, ಉಡುಪಿಯಲ್ಲಿ ಕೃಷ್ಣದೇವಸ್ಥಾನವನ್ನು ಕಟ್ಟಿಸಿ, ಆ ದೇವರ ಪೂಜೆಗಾಗಿ ಎಂಟುಜನ ಸನ್ಯಾಸಿಗಳನ್ನು ನಿಯಮಿಸಿದರು. ಈ ಎಂಟು ಜನಗಳು ಎರಡುವರ್ಷಕ್ಕೆ ಒಬ್ಬರಂತೆ ಕ್ರಮವಾಗಿ ಪೂಜೆಮಾಡಬೇಕಾಗಿತ್ತು. ಇದರಿಂದ ಯಾವಜ್ಜೀವವೂ ಅರ್ಚಕರಾಗಿರುವದರಿಂದ ಉಂಟಾಗುವ ಅನರ್ಥಗಳಿಗೆ ಅವಕಾಶವಿಲ್ಲದಂತಾಯಿತು. ಹಿಂದೆಹೇಳಿದಂತೆ ಆಚಾರ್ಯರು ಯಜ್ಞಗಳಲ್ಲಿ ಪ್ರಾಣಿಹಿಂಸೆಯನ್ನು ನಿಲ್ಲಿಸಿದರು. ಮಧ್ವಾಚಾರ್ಯರ ತರುವಾಯ ೧೫೦ ವರುಷಗಳೊಳಗಾಗಿ ಮಧ್ವಮತವು ಕರ್ಣಾಟಕದಲ್ಲೆಲ್ಲಾ ಹರಡಿ, ಕನ್ನಡದಲ್ಲಿ ಭಕ್ತಿರಸಭರಿತವಾದ ಕೀರ್ತನೆಗಳ ಉತ್ಪತ್ತಿಗೆ ದಾರಿಯನ್ನು ಮಾಡಿತು. ಇಂತಹ ಕೀರ್ತನಕಾರರಲ್ಲಿ ೧೫ ನೆಯ ಶತಮಾನದಲ್ಲಿದ್ದ ಮುಳುಬಾಗಿಲ ಶ್ರೀಪಾದರಾಯರೇ ಮೊದಲನೆಯವರೆಂದು ಹೇಳಬಹುದು. ೧೬ ನೆಯ ಶತಮಾನದಲ್ಲಿದ್ದ ಪುರಂದರ ದಾಸರು ಈ ಕೀರ್ತನಕಾರರಲ್ಲಿ ಅಗ್ರಗಣ್ಯರು. ಇವರು ಕಬೀರ, ತುಕಾರಾಮ್, ಚಂಡಿದಾಸ್, ಹಾಗೂ ಮಾಣಿಕ್ಯವಾಚಗರ್ ಇವರಿಗೆ ಸಮಾನರು. ಕನಕದಾಸರು, ವಿಜಯವಿಠಲದಾಸರು, ಜಗನ್ನಾಥ ದಾಸರು ಮೊದಲಾದವರ ಕೀರ್ತನೆಗಳು ಕನ್ನಡಿಗರ ಅಮೌಲ್ಯವಾದ ಆಸ್ತಿಗಳಾಗಿವೆ. ಮಧ್ವದಾಸರು ಕನ್ನಡ ಭಾಷೆಯನ್ನು ಪವಿತ್ರಭಾಷೆಯನ್ನಾಗಿ ಮಾಡಿದರು. ಇದರಿಂದಲೇ ಪುರಂದರದಾಸರ ಕೀರ್ತನೆಗಳಿಗೆ ಪುರಂದರೋಪನಿಷತ್ತೆಂಬ ಹೆಸರು ಬಂದಿರುತ್ತದೆ.

ಮಧ್ವಾಚಾರ್ಯರು ಅವರ ಅನುಯಾಯಿಗಳೂ ಮತಪ್ರಚಾರ ಕಾರ್ಯದಲ್ಲಿ ತಮ್ಮ ಮತತತ್ವಗಳ ಜೊತೆಯಲ್ಲಿ ಕನ್ನಡಭಾಷೆಯನ್ನೂ ಕೂಡ ಪ್ರಚಾರಪಡಿಸಿದರು. ಮೇಲೆ ಹೇಳಿದಕೀರ್ತನೆಗಳಲ್ಲಿ ಆಕಾಲಕ್ಕೆ ಕರ್ನಾಟಕದಲ್ಲಿದ್ದ ಪಂಢರಪುರದ ಪಾಂಡುರಂಗನ ಮೇಲೆ ಮಾಡಿರುವ ಕೀರ್ತನೆಗಳೇ ಬಹಳವಾಗಿವೆ. ೧೬ ನೆಯ ಶತಮಾನದಲ್ಲಿ ಹಾಗೂ ಅದರ ತರುವಾಯ ಮಹಾರಾಷ್ಟ್ರದಲ್ಲಿಯೂ ಹಾಗೂ ಉತ್ತರದೇಶದಲ್ಲಿಯೂ ಬರೆಯಲ್ಪಟ್ಟ ಭಕ್ತಿರಸಭರಿತವಾದ ಕವಿತೆಗಳಿಗೆ ಈ ಪಂಢರಪುರದ ಕೀರ್ತನೆಗಳೇ ಹಾದಿಯನ್ನು ತೋರಿಸಿದವೆಂದು ಹೇಳಬಹುದು. ಈ ವೈಷ್ಣವ ಮತವು ಎಲ್ಲಕ್ಕಿಂತಲೂ ಹೆಚ್ಚಾಗಿ ಬಂಗಾಳಾ ದೇಶದಲ್ಲಿ ಚೆನ್ನಾಗಿ ಹರಡಿತು. ವಂಗ ದೇಶೀಯರಾದ ಚೈತನ್ಯಸ್ವಾಮಿಗಳು ಮಧ್ವಾಚಾರ್ಯರ ಅನುಯಾಯಿಗಳೆಂದು ಸ್ವಾಮಿವಿವೇಕಾನಂದರವರು ಅಭಿಪ್ರಾಯಪಡುವರು.

ವೇದಾಂತಮತಗಳ ಪ್ರಚಾರಣೆಯಿಂದ ಉಪನಿಷತ್ತುಗಳು ಹಾಗೂ ವೇದಗಳ ಆಧ್ಯಾತ್ಮಿಕ ಸಿದ್ಧಾಂತವು ಜನಗಳ ಲಕ್ಷ್ಯದಲ್ಲಿ ಯಾವಾಗಲೂ ಇರಲು ಅವಕಾಶವಾಯಿತು. ಅನೇಕ ದೇವಾಲಯಗಳು ಕಟ್ಟಲ್ಪಟ್ಟವು ; ಈ ವಿಸ್ತಾರವಾದ ಭರತಖಂಡದ ಜನರಲ್ಲಿ ಸರ್ವದಾ ಒಂದು ಬಗೆಯ ಸ್ಥಿರವಾದ ಐಕ್ಯಭಾವವನ್ನು ನೆಲಗೊಳಿಸಿರುವ ರಾಮಾಯಣ ಮಹಾಭಾರತ ಗ್ರಂಥಗಳು ಕನ್ನಡಿಗರಿಗೆ ಎಂದಿಗೂ ಅಳಿಯದ ಆಸ್ತಿಗಳಾದವು. ಅನೇಕ ಕರ್ಮಗಳೂ, ಹಬ್ಬಗಳೂ ಆಚರಣೆಗೆ ಬಂದು ಬಲಾಢ್ಯರಾದ ರಾಜರ ಆಳ್ವಿಕೆಯಲ್ಲಿದ್ದ ಸಂಪತ್ತನ್ನೂ ಭಕ್ತಿಯನ್ನೂ ಸೂಚಿಸುತ್ತವೆ.

ಈಚೆಗೆ ಮತಾಚಾರಗಳ ತಿರುಳುಹೋಗಿ ಸಿಪ್ಪೆಯು ಮಾತ್ರ ಉಳಿಯ ಹತ್ತಿದ್ದರಿಂದ, ಆ ನಮ್ಮ ನಿಜವಾದ ಧರ್ಮವನ್ನು ಪುನರುಜ್ಜೀವನ ಮಾಡಲು ಅನೇಕ ಸುಧಾರಣೆಗಳು ಆಗಿಹೋದುವು. ಇವುಗಳಲ್ಲಿ ಬ್ರಹ್ಮಸಮಾಜವು ಕರ್ನಾಟಕದಲ್ಲಿ ಹೆಚ್ಚಾಗಿ ಪ್ರಚಾರಕ್ಕೆ ಬರಲಿಲ್ಲ. ಆರ್ಯಸಮಾಜ, ರಾಮಕೃಷ್ಣ ಮಠ, ಮತ್ತು ಬ್ರಹ್ಮಜ್ಞಾನಸಮಾಜ (Theosophical Society) ಇವು ಸ್ವಲ್ಪಮಟ್ಟಿಗೆ

ಪ್ರಚಾರಕ್ಕೆ ಬಂದಿವೆ. ಮೈಸೂರು ಅರಸರಾದ ಶ್ರೀ ಚಾಮರಾಜೇಂದ್ರ ಒಡೆಯರು ಸ್ವಾಮಿ ವಿವೇಕಾನಂದರು ಅಮೇರಿಕಾಖಂಡಕ್ಕೆ ಹೋಗುವದಕ್ಕೆ ಉತ್ತೇಜನವನ್ನು ಕೊಟ್ಟು ಸಹಾಯಮಾಡಿದರೆಂಬುದನ್ನು ನೆನಪಿನಲ್ಲಿಡಬೇಕು.

## ಮಹಮ್ಮದೀಯ ಮತ

ಮಹಮ್ಮದೀಯ ಮತವು ಕರ್ಣಾಟಕಕ್ಕೆ ಪ್ರವೇಶಿಸಿದ್ದು ಕ್ರಿ. ಶ. ೧೪ ನೇ ಶತಮಾನದಲ್ಲಿ. ಅಲ್ಲಿಂದೀಚೆಗೆ ಅನೇಕ ಮಹಮ್ಮದೀಯ ಸಮ್ರಾಟರು ಕರ್ಣಾಟಕದಲ್ಲಿ ಬಹಮನೀರಾಜ್ಯ, ಸೀರಾಸಂಸ್ಥಾನ, ಮುಂತಾದ ಅನೇಕ ರಾಜ್ಯಗಳನ್ನು ಸ್ಥಾಪಿಸಿದರು. ಮಹಮ್ಮದೀಯ ಮತವು ಹಾಗೂ ಸಂಸ್ಕೃತಿಯು ದಕ್ಷಿಣ ಹಿಂದೂಸ್ಥಾನದ ಪ್ರಾಂತಗಳಲ್ಲೆಲ್ಲಾ ಕರ್ಣಾಟಕದಲ್ಲೇ ಹೆಚ್ಚಾಗಿ ಬೇರೂರಿ ಉನ್ನತ ಸ್ಥಿತಿಯಲ್ಲಿದ್ದುದು. ಬಹಮನೀ ರಾಜ್ಯವು ವೈಭವದಿಂದಿದ್ದ ಕಾಲಕ್ಕೆ, ಆ ಸಂಸ್ಥಾನದ ಸುಲ್ತಾನರಲ್ಲಿ ಇತರ ಪ್ರಸಿದ್ಧ ಮುಸಲ್ಮಾನ ಸಮ್ರಾಟರಂತೆ, ಸುಂದರವಾದ ಮಶೀದಿಗಳನ್ನು ಕಟ್ಟಿಸುವದು, ಆ ಮಶೀದಿಗಳಲ್ಲಿ ವಿದ್ಯಾನಿಲಯಗಳನ್ನೇರ್ಪಡಿಸುವದು, ಹಾಗೂ ಪಂಡಿತರಿಗೂ ಚಿತ್ರಗಾರರಿಗೂ ಆಶ್ರಯ ಕೊಡುವದು ಇವೇ ಮುಂತಾದ ಅನೇಕ ಸ್ತೋತ್ರಾರ್ಹವಾದ ಕೆಲಸಗಳನ್ನು ಮಾಡಿದರು. ಇದಕ್ಕೆ ಗೋಲ್ಕೊಂಡ ಮತ್ತು ಬಿಜಾಪುರದಲ್ಲಿರುವ ಕಟ್ಟಡಗಳೇ ಸಾಕ್ಷಿಗಳಾಗಿವೆ. ೧೫೨೦ ನೇ ಇಸವಿಯಲ್ಲಿ ನಡೆದ ರಾಯಚೂರು ಯುದ್ಧದಲ್ಲಿ ಬಿಜಾಪುರದ ಸೈನ್ಯವು ವಿಜಯನಗರದ ಅರಸನಿಂದ ಸೋಲಿಸಲ್ಪಟ್ಟಾಗ ಹಿಂದೂ ಮುಸಲ್ಮಾನರಲ್ಲಿ ಐಕ್ಯತೆಯನ್ನುಂಟುಮಾಡಲು ಅನೇಕ ಪ್ರಯತ್ನಗಳು ನಡೆದವು. ಬಾಬಾಬುಡನ್ ಬೆಟ್ಟದ ಒಂದು ಗವಿಯಲ್ಲಿ ಬಾಬಾಬುಡನ್ ಎಂಬ ಒಬ್ಬ ಮಹಮ್ಮದೀಯ ಸಾಧುವಿನ ಗೋರಿಯಿದೆಯೆಂದು ಪ್ರತೀತಿಯಿದೆ. ಇದೇ ಗವಿಯಲ್ಲಿ ದತ್ತಾತ್ರೇಯಸ್ವಾಮಿಯಿರುವನೆಂದು ಹಿಂದುಗಳು ನಂಬಿರುವರು. ಇದರಿಂದ ಈ ಸ್ಥಳವು ಹಿಂದೂ ಮುಸಲ್ಮಾನರಿಬ್ಬರಿಗೂ ಪವಿತ್ರವಾದ ಯಾತ್ರಾಸ್ಥಳವಾಗಿದೆ.

ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಮೈಸೂರು ಸಂಸ್ಥಾನ ವನ್ನಾಳುತ್ತಿದ್ದಾಗ ಮಹಮ್ಮದೀಯಮತಕ್ಕೆ ಸ್ವಲ್ಪ ಆಸರೆಯು ಸಿಕ್ಕಿದ್ದುದು ನಿಜ. ಆದರೆ ಟಿಪ್ಪುಸುಲ್ತಾನನು ಸಾಮಾನ್ಯವಾಗಿ ಜನರು ತಿಳಿದಿರುವಂತೆ ಅನ್ಯಮತದ್ವೇಷಿಯಲ್ಲ. ಶೃಂಗೇರಿ ಮಠದ ಸ್ವಾಮಿಗಳಿಗೆ ಸುಲ್ತಾನನು ಬರೆದಿರುವ ವಿನಯ ವಿಧೇಯತೆಯಿಂದ ತುಂಬಿರುವ ಪತ್ರಗಳು, ಟಿಪ್ಪುಸುಲ್ತಾನನಿಗೆ ಅನ್ಯಮತಗಳಲ್ಲಿ ಎಷ್ಟು ಸಹನೆಯಿದ್ದಿತೆಂಬುದನ್ನು ಸ್ಪಷ್ಟಪಡಿಸುತ್ತವೆ. ಟಿಪ್ಪುವು ಶುದ್ಧ ಸುನ್ನಿಯು; ಹಾಗೂ ಅವನ ನಮ್ರತೆ ಮತ್ತು ದೈವಭಕ್ತಿಯನ್ನು, ಅವನ ಪ್ರತಿಪಕ್ಷದವರೂ ಕೂಡ ಒಪ್ಪಿಕೊಳ್ಳುತ್ತಾರೆ.

ಕರ್ಣಾಟಕದಲ್ಲಿ ಮುಸಲ್ಮಾನರ ಸಂಖ್ಯೆಯು ಕಡಿಮೆ. ಆದ್ದರಿಂದ ನಿಜಾಮು ಕರ್ಣಾಟಕದಲ್ಲಿ ಹೊರತು ಮಿಕ್ಕ ಭಾಗಗಳಲ್ಲಿ ಮಹಮ್ಮದೀಯ ಮತದ ಪ್ರಾಬಲ್ಯವು ಬಹಳ ಕಡಿಮೆ. ಆದರೆ, ಕರ್ಣಾಟಕದಲ್ಲಿ ಮುಸಲ್ಮಾನರು ಸ್ವಲ್ಪ ಕಾಲ ಮಾತ್ರ ರಾಜ್ಯಭಾರಮಾಡಿದಾಗ್ಯೂ, ಅವರಿಂದ ಅನೇಕ ದಿವ್ಯವಾದ ಕಟ್ಟಡಗಳು ಕಟ್ಟಲ್ಪಟ್ಟದ್ದಲ್ಲದೆ ಉರ್ದುಭಾಷೆಯ ಅನೇಕ ಶಬ್ದಗಳು, ಹೆಚ್ಚಾಗಿ ಮೈಸೂರು ಪ್ರಾಂತದಲ್ಲಿ, ಕನ್ನಡ ಭಾಷೆಗೆ ಸೇರಿಹೋದುವು.

ಕ್ರೈಸ್ತಮತವು ಬಹುಕಾಲಕ್ಕೆ ಹಿಂದೆಯೇ, ಹಿಂದೂಸ್ಥಾನಕ್ಕೆ ಪ್ರವೇಶಿಸಿ, ಮೊದಲು ಮಲಬಾರಿನಲ್ಲಿಯೂ, ಹಾಗೂ ಮದ್ರಾಸಿನ ಸುತ್ತಮುತ್ತಣಪ್ರದೇಶದಲ್ಲಿಯೂ ಹರಡುತ್ತಿತ್ತು. ಕರ್ಣಾಟಕದಲ್ಲಿ ಆದರ ಮೊದಲನೆಯ ಅಂಕುರವು ಕ್ರಿ. ಶ. ೬ ನೇ ಶತಮಾನದಲ್ಲಿ ಉಡುಪಿಯ ಹತ್ತಿರ ಕಲ್ಯಾಣವೆಂಬ ಊರಿನಲ್ಲಾಯಿತೆಂದು ಹೇಳಬಹುದು. ಮೇಲೆ ಹೇಳಿದ ವೇದಾಂತ ಮತಸ್ಥಾಪಕರ ಸಿದ್ಧಾಂತಗಳು ಕೈಸ್ತಮತತತ್ವಗಳಿಂದ ಬಹುಮಟ್ಟಿಗೆ ಮಾರ್ಪಾಟು ಮಾಡಲ್ಪಟ್ಟವೆಂಬುದು ಕೆಲವು ಕ್ರೈಸ್ತಪಾದ್ರಿಗಳ ಅಭಿಪ್ರಾಯ. ಈ ಅಭಿಪ್ರಾಯವು ಎಷ್ಟರಮಟ್ಟಿಗೆ ನಿಜವೆಂಬುದನ್ನು ಈ ಸಣ್ಣ ನ್ಯಾಸದಲ್ಲಿ ವಿಚಾರಿಸುವುದು ಅನವಶ್ಯಕವೆಂದು ತೋರುತ್ತದೆ.

ಪೋರ್ಚುಗೀಸರು ಇಂಡಿಯಾಕ್ಕೆ ಬಂದಾಗ ಬಿಜಾಪುರದ ಹಾಗೂ ವಿಜಯನಗರದ ರಾಜರು ಅವರಿಗೆ ಆಶ್ರಯವನ್ನು ಕೊಟ್ಟರು. ಆಗ ಅವರು ಬಂದು ನೆಲಸಿದ ಗೋವಾ ಪಟ್ಟಣವು ಈಗಲೂ ರೋಮನ್ ಕ್ಯಾಥೋಲಿಕ್ ಪಂಗಡದವರ ಮುಖ್ಯಪ್ರದೇಶವಾಗಿದೆ. ಇಗ್ನೇಷಿಯಸ್ ಲಾಯಿಲಾ ಎಂಬ ಪ್ರಸಿದ್ಧ ಪಾದ್ರಿಯ ಶಿಷ್ಯನಾದ ಫ್ರಾನ್ಸಿಸ್‌ಸ್ಸೇವಿಯರ್ ಎಂಬವನೂ ಹಾಗೂ ಜೀಸಸ್ ಸಂಘದ ಸ್ಥಾಪಕನಾದ ಹುಡಿಬುಜೊ ಎಂಬವನೂ ಪಶ್ಚಿಮತೀರದಲ್ಲಿ ಬಹಳ ಕೆಲಸವನ್ನು ಮಾಡಿದರು. ರೋಮನ್ ಕ್ಯಾಥೋಲಿಕ್ ಪಂಗಡದವರು ಮೈಸೂರಿಗೆ ೧೭ ನೆ ಶತಮಾನದ ಮಧ್ಯಭಾಗದಲ್ಲಿ ಬಂದರು. ಕೊಯಂಬುತ್ತೂರು ಡಿಸ್ಟ್ರಿಕ್ಟಿನಲ್ಲಿ ಕನ್ನಡಮತ ಪ್ರಚಾರಕಸಭೆ (Mission) ಯೊಂದನ್ನು ಏರ್ಪಡಿಸಿದರು. ೧೭೦೪ ನೇ ಇಸವಿಯಲ್ಲಿ ರೋಮ್‌ದೇಶದ ಸನ್ಯಾಸಿಗಳಾದ ಇವರಿಗೆ ಆಗಿನ ಹಿಂದೂರಾಜರಿಂದ ದ್ರವ್ಯಸಹಾಯವು ದೊರೆಯಿತೆಂದ ಮೇಲೆ ಆ ರಾಜರ ಅನ್ಯಮತ ಸಹನೆಯು ಎಷ್ಟರಮಟ್ಟಿನದಾಗಿರಬೇಕು. ೧೯ ನೇ ಶತಮಾನದ ಪ್ರಾರಂಭದಲ್ಲಿ "ಇಂಡಿಯಾದ ಜನಗಳು" (The People of India) ಎಂಬ ಪುಸ್ತಕದ ಲೇಖಕನಾದ ಅಬ್ಬೆಡೂಬಾಯ್ ಎಂಬಾತನು ಮೈಸೂರು ಪ್ರಾಂತಕ್ಕೆ ಬಂದು ನೆಲಸಿದನು. ಈಗಿನ ಕಾಲಕ್ಕೆ ರೋಮನ್ ಕ್ಯಾಥೋಲಿಕ್ ಪಂಗಡದವರಿಂದ ಸ್ಥಾಪಿಸಲ್ಪಟ್ಟ ಅನೇಕ ಸ್ಕೂಲು ಮತ್ತು ಕಾಲೇಜುಗಳು ಎಷ್ಟೋ ಉನ್ನತ ಸ್ಥಿತಿಯಲ್ಲಿರುವುವು.

ಪ್ರೊಟೆಸ್ಟೆಂಟ್ ಪಂಗಡಕ್ಕೆ ಸೇರಿದ, ಲಂಡನ್ ಮಿಷನ್, ವೆಸ್ಲಿಯನ್ ಮಿಷನ್, ಜೇಸಲ್ ಮಿಷನ್, ಮುಂತಾದ ಸಮಾಜಗಳು ಕರ್ಣಾಟಕದಲ್ಲಿ ಹತ್ತೊಂಬತ್ತನೆ ಶತಮಾನದ ಆದಿ ಭಾಗದಲ್ಲಿ ಕೆಲಸ ಮಾಡಲು ಪ್ರಾರಂಭಿಸಿದವು. ಈ ಸಮಾಜದವರು, ಮೊಟ್ಟಮೊದಲು ಕನ್ನಡದಲ್ಲಿ ಅಚ್ಚಿನ ಅಕ್ಷರಗಳನ್ನು ಮಾಡಿಸುವುದರಲ್ಲಿಯೂ, ಕನ್ನಡದಲ್ಲಿ ನಿಘಂಟುಗಳು, ಪದ್ಯಗದ್ಯ ಸಂಗ್ರಹಗಳು, ಹಾಗೂ ಉತ್ತಮ ಗ್ರಂಥಗಳನ್ನು ಪ್ರಚುರಪಡಿಸುವುದರಲ್ಲಿಯೂ, ಮಾಡಿದ ಪ್ರಯತ್ನಗ

ಕೆಗಾಗಿ ಕನ್ನಡಿಗರು ಅವರಿಗೆ ಎಷ್ಟು ಕೃತಜ್ಞರಾಗಿದ್ದರೂ ತೀರದು. ಇದಲ್ಲದೆ ಈ ಸಮಾಜದವರು ಅನೇಕ ಪಾಠಶಾಲೆಗಳನ್ನೂ, ಆಸ್ಪತ್ರೆಗಳನ್ನೂ ಕಟ್ಟಿಸಿರುವರೆಂಬುದನ್ನು ನಾವು ಮರೆಯಕೂಡದು.

ಕ್ರೈಸ್ತಪಾದ್ರಿಗಳು ಮೇಲ್ಕಂಡ ಧರ್ಮಕೆಲಸಗಳ ಜೊತೆಯಲ್ಲಿ ಅನ್ಯಮತದವರನ್ನೂ, ಅದರಲ್ಲಿಯೂ ಹೆಚ್ಚಾಗಿ ಹಿಂದೂಗಳಲ್ಲಿ ಅಂತ್ಯಜರೆನಿಸಿಕೊಂಡಿರುವವರನ್ನೂ, ತಮ್ಮ ಮತಕ್ಕೆ ಸೇರಿಸಿಕೊಳ್ಳುವ ಕೆಲಸವನ್ನು ಗದ್ದಲವಿಲ್ಲದೆ ಮಾಡುತ್ತಿರುವರೆಂಬುದನ್ನು ನಾವು ಮರೆಯಕೂಡದು. ಆದರೆ ಈ ಪರಿಸ್ಥಿತಿಯು, ಹಿಂದೂ ಜನಾಂಗವು ತನ್ನ ಐಕ್ಯಭಾವವನ್ನು ಮರೆತು, ತನ್ನ ಅಂಗಕ್ಕೆ ಸೇರಿದ ದೀನ ಜನರ ರಕ್ಷಣೆಯ ಭಾರವನ್ನು ಒಂದು ಕಡೆ ಬಿಸುಟು, ಗಾಢ ನಿದ್ರೆಯನ್ನು ಮಾಡುತ್ತಿದೆಯೆಂಬುದರ ಸೂಚನೆಯಲ್ಲದೆ ಮತ್ತೇನು ?

## ಉಪಸಂಹಾರ

ಇಲ್ಲಿಯವರೆಗೆ ಹೇಳಿದ ವಿಷಯಗಳಿಂದ ಕರ್ಣಾಟಕವು ವಿಧವಿಧವಾದ ಮತಗಳಿಗೆ ಆಶ್ರಯಸ್ಥಾನವಾಗಿದ್ದಿತೆಂದು ತಿಳಿಯ ಬರುವುದು. ಜಾತಿವಿಭಜನ ಶಾಸ್ತ್ರಜ್ಞರೂ (ethnologists) ಮತ್ತು ಜಾನುವಾರು ಗಣಕರೂ (statisticians) ಹಿಂದೂಸ್ಥಾನದ ಅಸಂಖ್ಯಾತವಾದ ಜಾತಿಗಳು, ಪಂಗಡಗಳೂ, ಹಾಗೂ ಪೂಜಾವಿಧಿಗಳ ಪಟ್ಟಿಗಳನ್ನು ತಯಾರಿಸಿದ್ದಾರೆ. ಸರ್ವೋತ್ತಮವಾದ ಆಧ್ಯಾತ್ಮಿಕ ಸಿದ್ಧಾಂತಗಳ ಹಾಗೂ ಪರಿಶುದ್ಧವಾದ ದೈವಿಕಾಕಾಂಕ್ಷೆಗಳೊಂದಿಗೆ, ಅನಾಗರಿಕವಾದ ಹೇಯವಾದ ಮತ ಸಿದ್ಧಾಂತಗಳು ಮತ್ತು ಪೂಜಾವಿಧಿಗಳು ಇದ್ದುದೇನೋ ನಿಜ. ಆದರೆ ಇವು ಮೊದಲು ಹೇಳಿದ ದೈವಿಕಾಕಾಂಕ್ಷೆಗಳ ಅಪರಿಪಕ್ವತ್ವದ ಚಿಹ್ನೆಗಳೇ ಹೊರತು ಇವೇ ಆಗಿನ ಕಾಲದ ನಿಜವಾದ ಮತಾಚಾರಗಳೆಂದು ತಿಳಿಯಲಾಗದು.

ಭರತಖಂಡದಲ್ಲಿ ಹಾಗೂ ಕರ್ಣಾಟಕದಲ್ಲಿನ ಮತಾಭಿವೃದ್ಧಿ ಮಾರ್ಗದಲ್ಲಿ ಮುಖ್ಯವಾಗಿ ಎರಡುಲಕ್ಷಣಗಳು ಕಂಡು ಬರುವುವು. ಅವುಯಾವುವೆಂದರೆ ಜನಸಾಮಾನ್ಯದಲ್ಲಿ ವಿಶೇಷ ಮತಪ್ರಚಾರ ಮತ್ತು ಅನ್ಯಮತಸಹನೆ. ಜನಸಾಮಾನ್ಯಕ್ಕೆ ಮತ ಪ್ರಚಾರಣೆಮಾಡುವುದರಲ್ಲಿ

ವೀರಶೈವರು ಮತ್ತು ವೈಷ್ಣವ ದಾಸಕೂಟದವರು ಮುಖ್ಯವಾದವರು. ಭಕ್ತಿರಸಭರಿತವಾದ ಕೀರ್ತನೆಗಳ ಮೂಲಕ ಅತಿಕ್ಲಿಷ್ಟವಾದ ಆಧ್ಯಾತ್ಮಿಕ ಸಿದ್ಧಾಂತಗಳನ್ನು ಪ್ರತಿಪಾದನೆಗೂ, ದಾಸಕೂಟದವರು ತೆಗೆದುಕೊಂಡು ಹೋಗುವರು. ಇದರಿಂದ ಓದುಬರಹ ಬರದಿರುವವರು ಕೂಡ ತಮ್ಮ ಮತ ಸಿದ್ಧಾಂತಗಳನ್ನು ಸುಲಭವಾಗಿ ತಿಳಿದುಕೊಳ್ಳಲು ಅವಕಾಶವುಂಟಾಗಿದೆ.

ಇನ್ನು ಅನ್ಯಮತ ಸಹನೆಯವಿಚಾರವಾಗಿ ಕೆಲವು ಮಾತುಗಳನ್ನು ಹೇಳಬೇಕಾಗಿದೆ. ಜೈನಮತವು ಪ್ರಬಲಿಸಿದ್ದಾಗ ಆ ಮತದ ಆಚಾರ್ಯರು, ವೇದಾಂತ ಮತಾಚಾರ್ಯರುಗಳಂತೆಯೇ ಸನ್ಮಾನಿಸಲ್ಪಡುತ್ತಿದ್ದರೆಂದೂ, ಮುಂದೆ ಕಾಲಾಮುಖರಿಗೂ ಕೂಡ ಇದೇತರದ ಸನ್ಮಾನವು ದೊರೆಯಿತೆಂದೂ ಹಿಂದೆಯೇ ಹೇಳಿದ್ದೇವೆ. ವಿಷ್ಣುವರ್ಧನನ ಅನ್ಯಮತಸಹನೆಯ ವಿಚಾರವನ್ನು ಆಗಲೇ ಸೂಚಿಸಿರುವೆವಷ್ಟೆ. ಜೈನಮತವನ್ನು ಬಿಟ್ಟು ವೈಷ್ಣವಮತಕ್ಕೆ ಸೇರಿದ ಇವನು ಜೈನರನ್ನು ಬಹಳವಾಗಿ ಹಿಂಸಿಸಿದನೆಂದು ಸಾಮಾನ್ಯವಾಗಿ ಪ್ರತೀತಿಯಿದ್ದಾಗ್ಯೂ ಇವನು ಜೈನಬಸ್ತಿಗಳಿಗೆ ದ್ರವ್ಯಸಹಾಯವನ್ನು ಮಾಡಿದ್ದಕ್ಕೆ ಅನೇಕ ಸಾಕ್ಷ್ಯಗಳು ದೊರೆತಿವೆ. ಸಾಧಾರಣವಾಗಿ ನಮ್ಮ ದೊರೆಗಳು ತಾವು ಯಾವ ಮತವನ್ನೇ ಅವಲಂಬಿಸಿರಲಿ ತಮ್ಮಪ್ರಜೆಗಳು ಯಾವ ಮತಕ್ಕೆ ಸೇರಿದವರಾಗಲಿ ಎಲ್ಲರನ್ನೂ ಒಂದೇ ಸಮನಾಗಿ ಪೋಷಿಸುತ್ತಿದ್ದರು. ಅಕ್ಬರನು ಯಾವರೀತಿಯಲ್ಲಿ ಬೇರೆಬೇರೆಮತಸ್ಥರಿಗೆ ಆಶ್ರಯವನ್ನು ಕೊಟ್ಟು ಅವರಲ್ಲಿ ಮತವಿಚಾರವಾಗಿ ಚರ್ಚೆಗಳನ್ನು ನಡೆಸುತ್ತಿದ್ದನೋ ಅದೇ ರೀತಿಯಲ್ಲಿ ವಿಜಯನಗರದ ರಾಜನು ಚರ್ಚೆಗಳನ್ನು ನಡೆಸುತ್ತಿದ್ದನು. ಕರ್ಣಾಟಕದ ಸಮ್ರಾಜನಾದ ಟಿಪ್ಪೂಸುಲ್ತಾನನೂ ತನ್ನಮತದಲ್ಲಿ ಗಾಢವಾದ ವಿಶ್ವಾಸವುಳ್ಳವನಾದರೂ ಹಿಂದೂದೇವಸ್ಥಾನಗಳನ್ನು ಮಠಗಳನ್ನೂ ರಕ್ಷಣೆಮಾಡುವ ಕಾರ್ಯದಲ್ಲಿ ಹಿಂದೆಗೆಯಲಿಲ್ಲ.

ಶೈವ ಮತ್ತು ವೈಷ್ಣವಮತದವರಲ್ಲಿ ಪರಸ್ಪರ ದ್ವೇಷವು ಹೆಚ್ಚಾಗಲು ಯಾರೋ ಒಬ್ಬ ಮಹಾಶಿಯನು ಹರಿಹರ ಮತ್ತು ಶಂಕರನಾರಾ

ಯಣರೆಂಬ ಮೂರ್ತಿಗಳ ಪೂಜೆಯನ್ನು ಸ್ಥಾಪಿಸಿ, "ಏಕಂ ಸದ್ವಿಪ್ರಾಬ ಹುಧಾವದಂತಿ" ಎಂಬ ವೇದವಾಕ್ಯವನ್ನು ದೃಢಪಡಿಸಿದನು. ಈ ಹರಿ ಹರಪೂಜೆಯು ಕರ್ಣಾಟಕದಲ್ಲಿ ಹೊರತು ಮತ್ತೆಲ್ಲಿಯೂ ಕಂಡು ಬರುವುದಿಲ್ಲವೆಂಬುದನ್ನು ನಾವು ಮರೆಯಕೂಡದು. ಬಾಬಾಬುಡ್ಡಬೆಟ್ಟದಲ್ಲಿ ಹಿಂದೂಮುಹಮ್ಮದೀಯ ಮತಗಳ ಮಿಳನ ವಿಚಾರವು ಮಾಡಲ್ಪಟ್ಟಿರುತ್ತೆ. ಯಾವ ಕಾಲಕ್ಕೆ ಮತಗಳ ತಿರುಳು ಕೊಳೆತು, ವಣ ಸಿದ್ಧಾಂತಗಳೂ, ನಿರ್ಜೀವವಾದ ಆಚರಣೆಗಳೂ, ಪ್ರಾಮುಖ್ಯತೆಗೆ ಬಂದವೋ ಆ ಕಾಲಕ್ಕೆ ಮತ ವೈಷಮ್ಯವು ಹುಟ್ಟಿರುವುದು ನಿಜ. ಆದರೆ ಮತಗಳು ಜನಜೀವನದಲ್ಲಿ ತಮ್ಮ ಸ್ವಜವಾದ ಶಕ್ತಿಯೊಂದಿಗೆ ಪ್ರವಹಿಸುತ್ತಿದ್ದ ಕಾಲಕ್ಕೆ ಅನ್ಯಮತಸಹನೆ, ಏಕೀಭಾವಮುಂತಾದ ಉಚ್ಚ ಭಾವನೆಗಳು ತಲೆದೋರುವುವೆಂಬ ವಿಷಯವನ್ನು ಜ್ಞಾಪಕದಲ್ಲಿಡಬೇಕು.

**ಸಂಪದ್ಗಿರಿರಾವ ಕೋಲಾರ**

# VI

# ಲಲಿತಕಲೆ

ಭರತಖಂಡದಲ್ಲಿ ಲಲಿತಕಲೋತ್ಪಾದನೆಗೆ ಭಕ್ತಿರಸವೇ ಬೀಜ ರೂಪವಾಗಿದೆ. ಸೌಂದರ್ಯ ಸ್ವರೂಪ ಪ್ರದರ್ಶನವೇ ಕಲೆಯ ಆಶಯ; ಆನಂದವೇ ಅದರ ಫಲ. ಸುತ್ತ ಮುತ್ತಲಿನ ವಾತಾವರಣವು ಆಶಯದ ಸಾಧನೆಗೆ ಸಹಾಯಕ ಸಾಮಗ್ರಿಯು. ಕರ್ಣಾಟಕವು ಹುಟ್ಟಿ ಹರಡಿದ ಧಾರ್ಮಿಕ ಚಲನೆಗಳಿಗೆಲ್ಲ ವಿಕಾಸಸ್ಥಾನವಾಗಿದೆ. ಕರ್ಣಾಟಕದಲ್ಲಿ ಕಾಣಬರದ ಪ್ರಕೃತಿ ಸೌಭಾಗ್ಯ ವಿಶೇಷವೇ ಇಲ್ಲ. ರಾಜಕೀಯ ಸ್ಥೈರ್ಯವೂ, ಸಂಪದಭಿವೃದ್ಧಿಯೂ ಅರಸರ ಧಾರ್ಮಿಕ ವ್ಯವಸ್ಥಾಪರಣೆಯೂ, ಶಾಂತಿಯೂ ಇದ್ದಾಗ ಕರ್ಣಾಟಕವು ಜಗನ್ಮೋಹನಾಕಾರಗಳಾದ ಕಲಾ ವಿಶೇಷಗಳನ್ನು ಸೃಷ್ಟಿಸಿತು. ಕರ್ಣಾಟಕವನ್ನು 'ಲಲಿತಕಲಾಖನಿ' ಯೆಂದರೆ ಅದು ಅತಿಶಯವೆನಿಸದು. ಪ್ರಕೃತ ವಾಸ್ತು, ಶಿಲ್ಪ, ಚಿತ್ರ ಮತ್ತು ಸಂಗೀತ ಕಲೆಗಳಲ್ಲಿ ಕರ್ಣಾಟಕವು ಪಡೆದಿರುವ ಕಾರ್ಯಸಿದ್ಧಿಯನ್ನು ಸೂಕ್ಷ್ಮವಾಗಿ ಪರೀಕ್ಷಿಸುವೆವು.

## ವಾಸ್ತು ಮತ್ತು ಶಿಲ್ಪ

ವಾಸ್ತುವಿನಲ್ಲಿ ಬಹು ಪುರಾತನ ಕಾಲದಿಂದಲೂ ಔತ್ತರೇಯ ಅಥವಾ ಆರ್ಯ, ದಾಕ್ಷಿಣಾತ್ಯ ಅಥವಾ ದ್ರಾವಿಡನೆಂಬ ಎರಡು ಮಾರ್ಗಗಳಿವೆಯೆಂದು ಹೇಳಬಹುದು. ಈ ಎರಡು ಮಾರ್ಗಗಳಿಗಿರುವ ವ್ಯತ್ಯಾಸವನ್ನು ತಿಳಿಯಲು ಬಯಸುವುದಕ್ಕೆ ಇದು ತಕ್ಕ ಸ್ಥಳವಲ್ಲ. ಕರ್ಣಾಟಕದ ವಾಸ್ತು ವಿಶೇಷಗಳಲ್ಲಿ ದ್ರಾವಿಡ ಮಾರ್ಗದ ಪರ್ಯಸ್ನೇ ಹೆಚ್ಚಾಗಿ ಕಾಣಬರುತ್ತದೆ. ಆದರೆ ಅದರಲ್ಲಿ ಶುದ್ಧ ಕರ್ಣಾಟಕದ ವೈಶಿಷ್ಟ್ಯವೊಂದು ಸ್ಪಷ್ಟವಾಗಿ ಕಾಣಬರುತ್ತದೆ. ಈ ವಿಶೇಷವು ೧೨–೧೩ನೆಯ ಶತಮಾನದ ಕಟ್ಟಡಗಳಲ್ಲಿ ಚನ್ನಾಗಿ ಕಂಡು ಬರುತ್ತದೆ. ಬೌದ್ಧ, ಜೈನ, ಶೈವ ಇತ್ಯಾದಿ ಮತಗಳನ್ನನುಸರಿಸಿ ವಾಸ್ತು ಶಿಲ್ಪ

ವಿಭಾಗ ಮಾಡುವುದು ಸಮಂಜಸವಾಗಿಲ್ಲ. ಏಕೆಂದರೆ ಪ್ರಾಕೃತಿಕ ಭೇದ ಪ್ರಭೇದಗಳೇ ಬೇರೆ ಬೇರೆ ಮಾರ್ಗಗಳಲ್ಲಿ ಕಾಣಬರುವ ವಿಶೇಷಕ್ಕೆ ಮೂಲಕಾರಣ.

ಬೌದ್ಧ ಚೈತ್ಯಗಳೇ ಬಹು ಪುರಾತನವಾದುವು. ಅಜಂತ, ತೇರ (ತಗರ) ಎಲ್ಲೋರ (ವಿಶ್ವಕರ್ಮಗುಹಾ) ಕಾರ್ಲೆ ಮೊದಲಾದೆಡೆಗಳಲ್ಲಿರುವ ವಿಶೇಷಗಳು ಕ್ರಿಸ್ತಶಕ ಮೊದಲನೆಯ ಶತಮಾನಕ್ಕೆ ಸೇರಿದುವು. ಇವೆಲ್ಲ ಬೌದ್ಧ ಸ್ಫೂರ್ತಿಯ ಸೃಷ್ಟಿಗಳು. ನೀಟಾದ ಸ್ಥೂಪಗಳು, ಚತುರ್ಮುಖ, ಬಹುಮುಖ ಮತ್ತು ದುಂಡಾದ ಕಂಬಗಳ ಮೇಲೆ ನಿಂತಿರುವ ಸುತ್ತುಸೂರಿನ ಎತ್ತರವಾದ ಮಾಳಿಗೆಯಿಂದಲೂ, ರಚನವೈವಿಧ್ಯದಿಂದಲೂ ಕೂಡಿರುವುದೇ ಈ ಬೌದ್ಧ ವಾಸ್ತುವಿಶೇಷಗಳಮುಖ್ಯ ಲಕ್ಷಣ. ಕಂಬಗಳ ಮೇಲೆ ಕೆತ್ತಲ್ಪಟ್ಟಿರುವ ಗೊಂಬೆಗಳಲ್ಲಿ ಬೌದ್ಧ ಸನ್ಯಾಸಿಗಳ ಆನಂದ ಜೀವನವು ಪ್ರತಿಬಿಂಬಿತವಾಗಿದೆ. ಈ ವಿಶೇಷವನ್ನು ಸಂಪೂರ್ಣವಾಗಿಯೂ, ವಿಸ್ತಾರವಾಗಿಯೂ ನೋಡಬೇಕಾಗಿದ್ದರೆ ಅಜಂತದ ಚಿತ್ರಕರ್ಮದಲ್ಲೇ ನೋಡಬೇಕು.

ಬಹು ಪುರಾತನ ಕಟ್ಟಡಗಳಲ್ಲಿ ಹಲವು ಶಿವಾಲಯಗಳನ್ನು ಹೇಳಬೇಕು. ಐಹೊಳೆಯ ದುರ್ಗಾದೇವಾಲಯದಲ್ಲಿ ಕೆತ್ತಿರುವ ನಟರಾಜ (ಶಿವ) ಚಿತ್ರವೂ, ಐಹೊಳೆ ಸಮೀಪದಲ್ಲಿರುವ ಹುಚ್ಚಿಮಲ್ಲಗುಡಿಯೂ, ಮತ್ತು ಲಕ್ಕುಂಡಿ, ಗದಗ ಮತ್ತು ಹೋಟಗಿ ದೇವಾಲಯಗಳೂ ಪುರಾತನ ಕೆಲಸದಲ್ಲಿ ಬಹು ಶ್ರೇಷ್ಠವಾದುವು.

ಗುಪ್ತರ ಕಾಲದಲ್ಲಿ ಉಂಟಾದ 'ಹಿಂದೀ ಜ್ಞಾನೋದಯ' ದ ಪ್ರಭಾವವು ದಕ್ಷಿಣ ದೇಶಕ್ಕೂ ಹರಡಿತು. ಆ ಕಾರಣದಿಂದ ಜನರಲ್ಲಿ ಭಕ್ತಿಯೂ, ಶ್ರದ್ಧೆಯೂ ಹೆಚ್ಚಿತು. ಅದೆಲ್ಲವೂ ಶ್ರೇಷ್ಠವೂ ಮಹತ್ತರವೂ ಆದ ಕಲಾ ವಿಶೇಷಗಳ ಸೃಷ್ಟಿಯಲ್ಲಿ ಕೊನೆಗಂಡಿತು. ಪಶ್ಚಿಮತೀರದಲ್ಲಿರುವ ಅನೇಕ ಗುಹಾಂತರ್ದೇವಾಲಯಗಳಾದುದು ಈ ಕಾಲದಲ್ಲೇ. ಎಲ್ಲೋರದ ಒಕ್ಕಲ್ಲಿನಲ್ಲಿ ಕೊರೆದಿರುವ ಕೈಲಾಸದೇವಾಲಯವೇ ಇವುಗಳಲ್ಲೆಲ್ಲ ಅತ್ಯಂತ ಶ್ರೇಷ್ಠವೂ ಜಗನ್ಮೋಹನಾಕಾರವೂ

ಆದುದು. ಕಲಾವಿಮರ್ಶಕಾಚಾರ್ಯರಿದನ್ನು 'ಜಗದಾಶ್ಚರ್ಯವಸ್ತು' ವೆಂದು ಘಂಟಾಘೋಷವಾಗಿ ಹೇಳುತ್ತಾರೆ. ಈ ದೇವಾಲಯದಲ್ಲಿ ಕಾಣಬರುವ ಚಪ್ಪಟೆಯಾದ ಮೇಲ್ಛಾವಣಿ, ಮುಚ್ಚುಸೂರು, ಶಿಖರ ವಿಮಾನ, ಮೊದಲಾದ ಅಂಗ ವಿಶೇಷಗಳಿಂದ ಈ ಕಟ್ಟಡವು ದ್ರಾವಿಡಮಾರ್ಗವನ್ನೇ ಹೆಚ್ಚಾಗಿ ಅವಲಂಬಿಸಿದೆಯೆಂದು ಹೇಳಬಹುದು. ಕಲಾವಿದರು ಮಹಾಬಲಿಪುರದಲ್ಲಿ ಸಾಧಿಸಲಾರದ ಕಲಾಚಾತುರ್ಯವನ್ನಿಲ್ಲಿ ತೋರಿಸಿರುವರು. ಇಲ್ಲಿ ಕಾಣಬಹುದಾದ ಭಿತ್ತಿಚಿತ್ರಗಳಲ್ಲೆಲ್ಲಾ ರಾವಣನು ಕೈಲಾಸಾದ್ರಿಯನ್ನು ಎತ್ತುವಿಕೆ, ದಶಾವತಾರ ಮತ್ತು ಭೈರವಾದಿಗಳು ಕಲಾಕೋವಿದರ ಅಭಿಪ್ರಾಯದಲ್ಲಿ ಉತ್ತಮೋತ್ತಮವಾದವುಗಳಾಗಿವೆ. ಈ ದೇವಾಲಯವು ರಾಷ್ಟ್ರಕೂಟ ಸಮ್ರಾಜನಾದ ಮೊದಲನೆಯ ಕೃಷ್ಣನಿಂದ ಕಟ್ಟಲ್ಪಟ್ಟಿತು.

ಎಲ್ಲೋರಕ್ಕಿಂತಲೂ ಬಾದಾಮಿಯ ಗುಹಾಂತರ್ದೇವಾಲಯಗಳು ಕೊಂಚ ಹಿಂದಿನವು. ಇವುಗಳಲ್ಲೂ ಉತ್ತಮವಾದ, ಶ್ರೇಷ್ಠವಾದ ಕಲಾಚಿಹ್ನೆಗಳೆಲ್ಲವೂ ಇವೆ. ಇಲ್ಲಿ ನಾಲ್ಕು ಗುಹಾಲಯಗಳಿವೆ. ಒಂದು ಶಿವಾಲಯ, ಮತ್ತೊಂದು ವಿಷ್ಣುವಿನಾಲಯ, ಇನ್ನೊಂದು ಜಿನಾಲಯ. ಎಂತಹ ಧಾರ್ಮಿಕೌನ್ನತ್ಯ, ಸಹಿಷ್ಣುತೆ, ಸಹಾನುಭೂತಿ!

ಈ ಕಾಲದ ಶಿಲ್ಪಿಗಳ ಚಾತುರ್ಯವನ್ನು, ಭಾವನಾಶಕ್ತಿಯನ್ನು ಕೊಂಚ ತಿಳಿಯಲೆಳಸುವದಾದರೆ ಔರಂಗಾಬಾದಿನ ಕಲ್ಮನೆಗಳಲ್ಲಿ ಹೆಂಡಕುಡುಕರ ವೈಖರಿಯನ್ನು ಚಿತ್ರಿಸಿರುವ ೧೬ ದೃಶ್ಯಗಳನ್ನು ನೋಡಬೇಕು.

ಕರ್ಣಾಟಕದಲ್ಲಿ ಶುದ್ಧ ದ್ರಾವಿಡ ಮಾರ್ಗದ ದೇವಾಲಯಗಳು ಗಂಗ ಮತ್ತು ಚೋಳರ ಕಾಲದಲ್ಲಿ ಕಟ್ಟಲ್ಪಟ್ಟವು ನಂದಿಯಲ್ಲಿರುವ ಭೋಗೇನಂದೀಶ್ವರ ದೇವಾಲಯವೀ ಮಾರ್ಗಕ್ಕೆ ಉತ್ತಮವಾದ ಉದಾಹರಣೆ. ಈ ಕಾಲದ ಕಲಾವಿಶೇಷವನ್ನು ಕುರಿತು ಡಾ॥ ಆನಂದ ಕುಮಾರಸ್ವಾಮಿಯವರು "ಹಿಂದೂ ವಾಸ್ತುಶಿಲ್ಪದ ಪ್ರಥಮಯುಗ

ವಿದು. ವೈದಿಕ ಧರ್ಮವು ಬೌದ್ಧಧರ್ಮದ ಮೇಲೆ ಹಾಕಿದ ಜಯಧ್ವಜ ಕಾಲವಿದು" ಎಂಬದಾಗಿ ಹೇಳುತ್ತಾರೆ.

ಕಲ್ಯಾಣದ ಚಾಳುಕ್ಯರ ಮತ್ತು ಹೊಯ್ಸಳರ ಕಾಲದ ಕಲಾವಿಶೇಷಗಳನ್ನು ಪರೀಕ್ಷಿಸುವದಕ್ಕೆ ಮೊದಲು ಕರ್ಣಾಟಕದಲ್ಲಿ ಜೈನರು ಈ ರಾಷ್ಟ್ರೀಯಾಂಗಕ್ಕೆ ಲಕ್ಷ್ಯಕೊಟ್ಟು ನಮಗೇನು ಆಸ್ತಿಯನ್ನು ಬಿಟ್ಟಿರುವರೆಂಬುದನ್ನು ನೋಡಬೇಕು. ಇವುಗಳಲ್ಲೆಲ್ಲ ಗೋಮಟೇಶ್ವರ ವಿಗ್ರಹಗಳೂ, ದಕ್ಷಿಣಕನ್ನಡದಲ್ಲಿರುವ ಹತ್ತಾರು ಮಾನಸ್ತಂಭಗಳೂ ಮುಖ್ಯವಾದುವು. ಶ್ರವಣಬೆಳಗೊಳದ ಚಿಕ್ಕಬೆಟ್ಟದ ಮೇಲೆ ಬೈಲಿನಲ್ಲಿ ನಿಂತಿರುವ ಈ ವಿಗ್ರಹವು ೫೭॥ ಅಡಿಗಳ ಎತ್ತರವಾಗಿದೆ. ಏಷ್ಯಾಖಂಡದಲ್ಲೆಲ್ಲ ಇದಕ್ಕಿಂತಲೂ ಎತ್ತರವಾದ ವಿಗ್ರಹವೇ ಇಲ್ಲ. ಗಂಗರಾಚಮಲ್ಲನ ದಂಡನಾಯಕನಾದ ಚಾಮುಂಡರಾಯನು ಕ್ರಿ. ಶ. ೯೮೩ ರಲ್ಲಿ ಇದನ್ನು ಸ್ಥಾಪಿಸಿದನು. ಇದಲ್ಲದೆ ದಕ್ಷಿಣಕನ್ನಡದ ಭೈರರಸು ಒಡೆಯರ ಕಾಲದಲ್ಲಿ ಕಾರ್ಕಳ, ವೇಣೂರುಗಳಲ್ಲಿ ಎರಡು ಗೋಮಟೇಶ್ವರ ವಿಗ್ರಹಗಳು ಸ್ಥಾಪಿಸಲ್ಪಟ್ಟವು. ಕಾರ್ಕಳದ ವಿಗ್ರಹವು (ಕ್ರಿ. ಶ. ೧೪೩೧) ೪೧॥ ಅಡಿ ಎತ್ತರವಿದೆ. ವೇಣೂರಿನ ವಿಗ್ರಹವು (ಕ್ರಿ. ಶ. ೧೬೦೩) ೩೭ ಅಡಿ ಎತ್ತರವಾಗಿದೆ. ದಕ್ಷಿಣಕನ್ನಡದಲ್ಲಿರುವ ಮಾನಸ್ತಂಭಗಳಂತೂ ಮನೋಹರವೂ, ನಾಜೂಕೂ, ನುಣುಪೂ, ಗಂಭೀರವೂ ಆದುವಾಗಿವೆ. ಅವುಗಳಲ್ಲೆಲ್ಲ ಮೂಡಬಿದರೆಯ ೫೦॥ ಅಡಿಗಳ ಎತ್ತರವಿರುವ ಮಾನಸ್ತಂಭವೇ ಶ್ರೇಷ್ಠವಾದುದು. ಹೆಚ್ಚೇಕೆ ಕಾರ್ಕಳದ ಚತುರ್ಮುಖ ಬಸ್ತಿ, ಹಿರಿಯಂಗಡಿಯ ಗುರುಗಳ ಬಸ್ತಿ, ಮೂಡುಬಿದುರೆಯ ಹೊಸಬಸ್ತಿಗಳ ಸೊಗಸನ್ನು ಕಂಡರೆ ಜೈನರ ಕಲಾನೈಪುಣ್ಯವು ಸ್ತೋತ್ರಾರ್ಹವಾದುದೆಂದು ಕಾಣಬರದಿರದು.

೧೨-೧೩ ನೆಯ ಶತಮಾನದಲ್ಲಿ ಕರ್ಣಾಟಕದಲ್ಲಿ ದೇವಾಗಾರಗಳ ನಿರ್ಮಾಣಕಾರ್ಯದಲ್ಲಿ ಕಲೆಯು ಪರಮಾವಧಿಯನ್ನು ಹೊಂದಿತು. ಪ್ರತಿಭಾಶಾಲಿಗಳಾದ ಶಿಲ್ಪಿಗಳು ಜನ್ಮಧಾರಣಮಾಡಿ ತಮ್ಮ ಕಲಾಫಲಗಳನ್ನು ಕನ್ನಡಿಗರಿಗಿತ್ತರು. ಈ ಕಾಲದ ವಾಸ್ತುಶಿಲ್ಪದಲ್ಲಿ ಚಾಳುಕ್ಯ

ಮಾರ್ಗವೆಂದೂ ಹೊಯ್ಸಳಮಾರ್ಗವೆಂದೂ ಎರಡು ಜಾತಿಗಳುಂಟು. ಚಾಳುಕ್ಯಮಾರ್ಗದ ಕಟ್ಟಡಗಳಲ್ಲಿ ದ್ರಾವಿಡಮಾರ್ಗದ ಕುರುಹುಗಳೇ ಹೆಚ್ಚಾಗಿವೆ. ಅವು ಬಳ್ಳಾರಿಜಿಲ್ಲೆಯಲ್ಲಿ ಕಾಣಬರುತ್ತವೆ. ಹೊಯ್ಸಳ ಮಾರ್ಗದಲ್ಲಿ ವಿಪುಲವೂ ಸೂಕ್ಷ್ಮವೂ ಆದ ಶಿಲ್ಪ ವಿಶೇಷವುಂಟು. ಹಿಂದೊಮ್ಮೆ ಸೂಚಿಸಿದಂತೆ ಈ ಮಾರ್ಗದಲ್ಲಿ ಕರ್ಣಾಟಕದ ವೈಶಿಷ್ಟ್ಯ ವೊಂದುಂಟು. ಈ ಮಾರ್ಗದ ಕಟ್ಟಡಗಳು ಸಾಧಾರಣವಾಗಿ ಮೈಸೂರು ದೇಶದಲ್ಲೇ ಹೆಚ್ಚು. ಕರ್ಣಾಟಕದಲ್ಲಿ ಈಕಾಲವು ಲಲಿತಕಲೋತ್ಪಾದಕಯುಗವಾಗಿತ್ತು. ಕಟ್ಟಡಗಳಲ್ಲಿ ಕಂಡುಬರುವ ಕಲಾ ಕೌತುಕವಂತಿರಲಿ; ಈ ಕಾಲದ ಶಿಲಾಶಾಸನಗಳು ಒಂದೊಂದೂ ಒಂದೊಂದು ಕಲಾಪಕ್ವಫಲಗಳಂತಿವೆ.

ದ್ರಾವಿಡ ಮಾರ್ಗದಲ್ಲಿ ಪ್ರಧಾನದೇವತೆಯಿರುವ ಗರ್ಭಗೃಹಕ್ಕಿಂತಲೂ ಮಹಾದ್ವಾರಗಳೂ, ಗೋಪುರಗಳೂ, ಸುತ್ತುಮಂಟಪಗಳೂ, ರಾಜಾಂಗಣಗಳೇ ಪ್ರಧಾನವೂ ಕಲಾದೃಷ್ಟಿಯಿಂದ ಶ್ರೇಷ್ಠವೂ ಆಗಿರುತ್ತವೆ. ಈ ಜಾತಿಯಲ್ಲಿ ಕೆತ್ತನೆಯಕೆಲಸವಷ್ಟಿಲ್ಲ ಭಿತ್ತಿಚಿತ್ರಗಳಿಗಷ್ಟು ಗಮನವನ್ನು ಕೊಡುತ್ತಿರಲಿಲ್ಲ. ಕೊಂಚ ಕೊಂಚವಿದ್ದರೂ ಸಾಧಾರಣವಾಗಿದ್ದುವು. ಅಲಂಕಾರದಲ್ಲಾಗಲಿ, ಸೌಂದರ್ಯದಲ್ಲಾಗಲಿ ಅತಿಶಯವೇನೂ ಇರಲಿಲ್ಲ. ಆದರೆ ಚಾಳುಕ್ಯ ಮಾರ್ಗದ ಶಿಲ್ಪಿಗಳು ಮಾತ್ರ ಭಿತ್ತಿಚಿತ್ರದ ಅಲಂಕರಣಕ್ಕೆ ಹೆಚ್ಚು ಪ್ರಾಧಾನ್ಯವನ್ನು ಕೊಡುತ್ತಿದ್ದರು. ಅಲಂಕರಣಕಾರ್ಯದಲ್ಲಿ ಶಿಲ್ಪಿಗಳು ಶ್ಲಾಘ್ಯತಮವಾದ ಕುಶಲತೆಯನ್ನು ತೋರಿಸುತ್ತಿದ್ದರು. ಒಳಬಾಗಿಲ ಗೆಯ ಕೆತ್ತನೆಯು ವರ್ಣನಾತೀತವಾಗಿತ್ತು. ಅದರೊಳಗಿನ ಕಲಾ ನಕ್ಷೆಗಳು ಬೆಳ್ಳಿಬಂಗಾರದ ಕೆಲಸವನ್ನೂ ಮೀರಿಸುತ್ತಿದ್ದುವು. ಕುರುವತ್ತಿಯ ಮಲ್ಲಿಕಾರ್ಜುನ ದೇವಾಲಯವೂ, ಹರಿಹರೇಶ್ವರ ದೇವಾಲಯವೂ ಚಾಳುಕ್ಯಮಾರ್ಗದ ಉತ್ತಮೋದಾಹರಣೆಗಳು.

ಹೊಯ್ಸಳ ಮಾರ್ಗದ ಕಲಾವಿಶೇಷಗಳು (ಇದನ್ನು ತಪ್ಪು ಗ್ರಹಿಕೆಯಿಂದ ಚಾಳುಕ್ಯಮಾರ್ಗವೆಂದು ಹಲವರು ಕರೆಯುವರು) ದ್ವಾರಸಮುದ್ರದಲ್ಲಾಳಿದ ಬಲ್ಲಾಳರಾಜರ ಆಶ್ರಯ ಪ್ರೋತ್ಸಾಹಗ

ಳಿಂದ ಹುಟ್ಟಿದುವು. ಈ ಹೊಯ್ಸಳಮಾರ್ಗದ ಕಟ್ಟಡಗಳನ್ನು 'ಪೇಟಿಕಾಜಾತಿ' ಯೆನ್ನಬಹುದು. ಇದಕ್ಕೆ ಪ್ರತಿಯಾಗಿ ದ್ರಾವಿಡ ಮಾರ್ಗದ ವಿಸ್ತಾರವೂ ಅಗಾಧವೂ ಆದ ಕಟ್ಟಡಗಳಿಗೆ 'ನಗರಜಾತಿ' ಯೆಂದು ಹೆಸರು. ಈ ನಗರಜಾತಿಯ ಕಟ್ಟಡಗಳೇ ಮುಂದೆ ಪಟ್ಟಣ ಗಳನ್ನು ಕಟ್ಟುವುದಕ್ಕೆ ಆದರ್ಶಗಳಾದುವು. ಹೊಯ್ಸಳಮಾರ್ಗದ ವಾಸ್ತು ವಿಶೇಷಗಳು, ಅವಿರುವ ಭಾಗದ ವಾಯುಗುಣವನ್ನನುಸರಿಸಿ ಒತ್ತಟ್ಟಾಗಿಯೂ ವಿರಳವಾಗಿಯೂ ಇರುತ್ತವೆ. ಈ ಕಟ್ಟಡಗಳ ಅಸ್ಥಿ ಭಾರವು ಬಹುಮುಖಾಕೃತಿಯುಳ್ಳದು. ಸಾಧಾರಣವಾಗಿ ಮೂರು ಗರ್ಭಗೃಹಗಳಿರುವ 'ತ್ರಿಕೂಟಾಚಲ' ವೇ ಈ ದೇವಾಲಯಗಳ ಮು ಖ್ಯ ಲಕ್ಷಣ. ಒಮ್ಮೊಮ್ಮೆ ನಾಲ್ಕು ಐದು ಗರ್ಭಗೃಹಗಳಿರುವು ದುಂಟು. ಎಷ್ಟು ಗೃಹಗಳಿದ್ದರೂ ಜಗಲಿಯಮೇಲೆ ರಚನೆಯಲ್ಲಿ ಒಂದು ಬಗೆಯ ಸೌರಸ್ಯವೂ ವೈಚಿತ್ರ್ಯವೂ ಕಾಣಬರುತ್ತದೆ. ಶಿಲ್ಪಿ ಗಳು ದೇವಾಲಯದ ಇತರ ಭಾಗಗಳಿಗಿಂತ ಗರ್ಭಗೃಹ, ವಿಮಾನಗ ಳಿಗೇ ಹೆಚ್ಚು ಗಮನವನ್ನು ಕೊಡುತ್ತಿದ್ದರು.

ಗೋಪುರಾಕಾರದ ಶಿಖರಗಳು ಒಮ್ಮೊಮ್ಮೆ ಚಚ್ಚೌಕವಾಗಿಯೂ ಒಮ್ಮೊಮ್ಮೆ ಬಹುಮುಖಾಕೃತಿಯಾಗಿಯೂ ನಕ್ಷತ್ರಾಕಾರವಾದ ಆಧಾರರಚನೆಯುಳ್ಳದಾಗಿಯೂ ಇರುವುವು. ಗೋಡೆಗಳೆಲ್ಲವೂ ಅಂಕಣಗಳಾಗಿ ವಿಭಾಗವಾಗಿದ್ದು, ಅವುಗಳಲ್ಲೆಲ್ಲ ಸಹಜವೂ, ಜೀವಕಳಾಪೂರ್ಣವೂ, ಪ್ರತಿಭಾಪ್ರದರ್ಶಕವೂ, ಶಿಲ್ಪಿಯ ಕರಕೌಶಲ್ಯ ದರ್ಪಣವೂ ಆದ ಭಿತ್ತಿಚಿತ್ರಗಳಿಂದ ತುಂಬಿ ಜೆಳಗುತ್ತಲಿರುವುವು. ವರ್ತುಳ, ಚತುರ್ಭುಜ, ಬಹುಭುಜ, ನಕ್ಷತ್ರಮೊದಲಾದ ವಿವಿಧರೂ ಪದಿಂದ ಕೂಡಿದ ಕಂಬಗಳನ್ನು, ಆ ಕಂಬಗಳಲ್ಲಿ ಕಂಡುಬರುವ ಶಿಲ್ಪಿ ಯ ಸೌಂದರ್ಯ ಸೃಷ್ಟಿಸಾಮ್ರಾಜ್ಯವನ್ನು, ಕಂಬಗಳಮೇಲೆ ಮಾಳಿಗೆ ಯನ್ನು ಹೊತ್ತು ವಿಭ್ರಮವಿಲಾಸಗಳಿಂದ ಸೌಂದರ್ಯ ಸೌರಭವನ್ನು ನಲ್ದೆಸೆಗಳಿಗೆಸೆಯುತ್ತಿರುವ ಮದನಕೈವಿಗ್ರಹಗಳನ್ನು, ಒಳಮಾಳಿ ಗೆಯ ಭುವನೇಶ್ವರಿಯ ಮೃದುರೇಖಾವಿಳಾಸವನ್ನು, ಪ್ರಾಣಿಪಂಕ್ತಿಗ ಳನ್ನು, ಜಾಲಂಧ್ರಗಳನ್ನು ಕಂಡು ಆನಂದಿಸಬೇಕಲ್ಲದೆ ಓದಿ ಸುಖ

ವಿಲ್ಲ. ಬರೆಯಲು ಸಾಧ್ಯವಿಲ್ಲ. ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯವು ಈ ಮಾರ್ಗಕ್ಕೆ ಪರಮೋತ್ಕೃಷ್ಟವಾದ ಉದಾಹರಣೆಯು.

ಈ ಕಾಲದ ವಾಸ್ತುಶಿಲ್ಪದಲ್ಲಿ ಅತಿಶಯವಿಚಾರವೊಂದುಂಟು. ಅಲ್ಲಲ್ಲಿ ಹಲವು ವಿಗ್ರಹಗಳಡಿಯಲ್ಲಿ ಆಯಾಯಾ ಶಿಲ್ಪಿಯ ಹೆಸರುಗಳು ಕೆತ್ತಲ್ಪಟ್ಟಿವೆ. ಅಂತಹ ಶಿಲ್ಪಿವರ್ಯರಲ್ಲಿ ಮಲ್ಲಿತಮ್ಮ, ದಾಸೋಜ, ಮಲ್ಲೋಜ, ಚೌಡಯ್ಯ, ಮತ್ತು ಸರಸ್ವತೀದಾಸರು ಕಲಾವಿಶಾರದರೆಂದು ಕಾಣಬರುತ್ತದೆ. ಇವರಲ್ಲನೇಕರು ಹೊಯ್ಸಳಸಮ್ರಾಜರಿಂದ ಬಿರುದುಬಿಲ್ಲೆಗಳನ್ನು ಪಡೆದಿದ್ದರು. ವೈಷ್ಣವಮತದ ಭಕ್ತಿಮಾರ್ಗದಿಂದ ಹುಟ್ಟಿಬೆಳೆದ ಧಾರ್ಮಿಕಜ್ಞಾನೋದಯವು ಹೊಯ್ಸಳಮಾರ್ಗದ ನೂರಾರು ವಾಸ್ತುಶಿಲ್ಪವಿಶೇಷದ ಕಟ್ಟಡಗಳು ಕರ್ಣಾಟಕದಲ್ಲಿ ಸೃಷ್ಟಿಯಾಗಲು ಕಾರಣಭೂತವಾಯಿತು. ಆದರೆ ಈ ಕಲಾವೈಭವಚಲಸೆಯು ೧೪ ನೆಯ ಶತಮಾನಾರಂಭದಲ್ಲಿ ಮೊದಲಾದ ಮುಹಮ್ಮದೀಯರ ದಂಡಯಾತ್ರೆಗಳಿಂದ ಕೊನೆಗಂಡಿತು. ಸಾರಾಂಶವಿಷ್ಟು ಕರ್ಣಾಟಕದಲ್ಲಿ ವಾಸ್ತುಶಿಲ್ಪವು ಹೊಯ್ಸಳಬಳ್ಳಾಳರ ಕಾಲದಲ್ಲಿ ಪರಿಪೂರ್ಣತೆಯ ಪರಮಾವಧಿಯನ್ನು ಹೊಂದಿತೆಂದು ಹೇಳಬೇಕು.

ವಿಜಯನಗರದರಸರ ಕಾಲದಲ್ಲಿ ಅದರಲ್ಲೂ, ಕೃಷ್ಣದೇವರಾಯನ ಕಾಲದ ಸಾಮ್ರಾಜ್ಯವೈಭವೋದ್ಯೋಗದಲ್ಲಿ ದೇವಾಗಾರರಚನಾಕಲೆಯೂ ಕೊಂಚ ಕಾಣಬಂತು. ಆದರೂ ಆ ದೇವಾಲಯಗಳಲ್ಲಿ ಮಹಾದ್ವಾರಗಳು, ಗೋಪುರಗಳು, ಸುತ್ತುಮಂಟಪಗಳು ಇಷ್ಟಲ್ಲದೆ ಮತ್ತೆ ಇನ್ನೇನೂ ವಿಶೇಷವಿಲ್ಲ. ಕೆತ್ತನೆ ಕೆಲಸವು ಕೇವಲ ನೀರಸವಾದುದು. ಚಿತ್ರಗಳಲ್ಲಿ ಜೀವವಿಲ್ಲ; ರೇಖೆಯಲ್ಲಿ ಮಾರ್ದವವಾಗಲಿ, ಮಾಧುರ್ಯವಾಗಲಿ ಇಲ್ಲ. ಆದರೂ ಹಂಪೆಯ ವಿಜಯವಿಠಲನಗುಡಿಯು ಆ ಕಾಲದ ವಾಸ್ತುಶಿಲ್ಪಕ್ಕೂ ದ್ರಾವಿಡಮಾರ್ಗಕ್ಕೂ ಲಕ್ಷಣವಾದ ಉದಾಹರಣೆಯಾಗಿದೆ. ಇದರಲ್ಲಿ ದ್ರಾವಿಡ ಹೊಯ್ಸಳಮಾರ್ಗಗಳ ಮಿಳನವು ಕಾಣಬರುತ್ತದೆ.

ಕರ್ಣಾಟಕದಲ್ಲಿ ಆಳಿದ ಮುಹಮ್ಮದೀಯ ಅರಸರು ಅಲ್ಲಲ್ಲಿ ಮು ಖ್ಯವಾಗಿ ಬಿಜಾಪುರದಲ್ಲಿ ಅತ್ಯುತ್ತಮವಾದ ವಾಸ್ತುವಿಶೇಷಗಳನ್ನು ನಮಗೆ ಉಳಿಸಿರುವರು. ಅಲ್ಲದೆ ಹಿಂದೂವಾಸ್ತುಶಿಲ್ಪದ ಮೇಲೆ ಮುಹಮ್ಮದೀಯರು ತಮ್ಮ ಕಲಾವರ್ಚಸ್ಸನ್ನು ಬೀರಿದರು. ಇದನ್ನು ಹಂಪೆಯ ಮಂತ್ರಾಲೋಚನಾಮಂದಿರದ (ಸಭಾಮಂಟಪ) ಕಮಾನು ಗಳಲ್ಲೂ, ಹಲವು ವೀರಶೈವ ಮಠಗಳಲ್ಲೂ ನೋಡಬಹುದು. ಬಿಜಾ ಪುರದ (ಜೋಳಗುಮ್ಮಟ) ಮುಹಮ್ಮದ್ ಅದಿಲ್‌ಶಾಹಿಯ ಗೋರಿ ಯು ಅದ್ಭುತ ವಾಸ್ತುವಿಶೇಷವೆಂದೇ ಹೇಳಬೇಕು. ಈ ಗುಮಟವು ೧೯೮ ಅಡಿಗಳೆತ್ತರವಾಗಿದೆ. ಇದರ ವ್ಯಾಸವೇ ೧೨೦ ಅಡಿಗಳೆಂದರೆ ಮಿಕ್ಕ ಅಂಗಗಳ ಪ್ರಮಾಣವನ್ನು ವಾಚಕರೇ ಊಹಿಸಲಿ. ದಕ್ಷಿ ದೇಶದಲ್ಲೆಲ್ಲ ದೊಡ್ಡದಾದ ಮಶೀದಿಯೊಂದು ಬೆಳಗಾಮಿಯಲ್ಲುಂಟು. ಅದನ್ನು ಮೊದಲನೆಯ ಅದಿಲಶಾಹಿಯು ಕಟ್ಟಿಸಿದನು. ಅಲ್ಲದೆ ಇಬ್ರ ಹೀಂ ಅದಿಲಶಾಹಿಯ ರೋಜಾ ಮಕ್ತುರಮಹಾಲ್ ಮುಂತಾದಕಟ್ಟ ಡಗಳು ಅಲ್ಲಿವೆ. ಶ್ರೀರಂಗಪಟ್ಟಣ ಶೀರ್ಯಗಳ ಮಶೀದಿಗಳೂ ಶ್ರೀರಂಗಪ ಟ್ಟಣದ ದರಿಯಾದೌಲತ್ತು ಮಂದಿರವೂ ಸೆನಪಿನಲ್ಲಿಡತಕ್ಕ ರಾಷ್ಟ್ರೀಯ ಅವಶೇಷಗಳು. ಮೈಸೂರಿನ ಅರಮನೆಯು ಹಿಂದೂಮುಹಮ್ಮ ದೀಯ ವಾಸ್ತುಗಳ ಸಂಕೀರ್ಣಫಲವು. ಅನೇಕ ದೇಶೀಯ ಶಿಲ್ಪಿ ಗಳೇ ಈ ಸೌಧವನ್ನು ಕಟ್ಟಿದವರೆಂಬುದನ್ನು ಗಮನಿಸಿದರೆ ವಂಶಪಾ ರಂಪರ್ಯವಾಗಿ ಬಂದ ಕಲೆಯು ಇನ್ನೂ ಹಲವು ಮನೆತನಗಳಲ್ಲಿ ಉಳಿ ದಿರುವುದೆಂಬುದು ಸ್ಪಷ್ಟವಾಗುತ್ತದೆ.

## ಚಿತ್ರಕಲಾ

ಜಗದ್ವಿಖ್ಯಾತವಾದ ಅಜಂತದ ಚಿತ್ರಕಲೆಯ ಮೇಲೆ ಕರ್ಣಾಟ ಕಕ್ಕೆ ಹಕ್ಕುಂಟು. ಅಲ್ಲಿನ ಅನೇಕ ಚಿತ್ರಕೆಲಸಗಳು ಬಾದಾಮಿಯ ಚಾಳುಕ್ಯರ ಕಾಲದಲ್ಲಿ ಮುಗಿದುವು. (ಕ್ರಿ. ಶ. ೭ ನೆಯ ಶತಮಾನ) ಒಂದು ಚಿತ್ರದಲ್ಲಿ ಇಮ್ಮಡಿ ಪುಲಕೇಶಿಯ ರೂಪವೂ ಕೂಡ ಕಾಣ ಬರುತ್ತದೆ. ಅಲ್ಲದೆ ಅಜಂತದ ಬಳಿಯಿರುವ ಇಂದುಕಾಂತವು ಮೊದಲನೆಯ ಪುಲಕೇಶಿಯ ರಾಜಧಾನಿಯಾಗಿತ್ತು. ಚಾಳುಕ್ಯರ

ಮತ್ತು ಹೊಯ್ಸಳರ ಕಾಲದ ವಾಸ್ತುಶಿಲ್ಪ ವಿಶೇಷಗಳೆ ಭಿತ್ತಿಚಿತ್ರಗಳಲ್ಲಿ ಕಾಣಬರುವ ರೇಖಾಮಾರ್ದವವೂ, ಮೂರ್ತಿಸಂಪೂರ್ಣಾಗಿಭ್ಧಿಯೂ, ಜೀವಕಳೆಯೂ ಅಜಂತದ ಭಿತ್ತಿಗಳಲ್ಲೂ, ಬಳಮಾಳಿಗೆಗಳ ಭಿತ್ತಿಫಲಕಗಳಲ್ಲೂ, ಭುವನೇಶ್ವರಿಗಳಲ್ಲೂ ಮಕರತೋರಣಗಳಲ್ಲೂ ಕಾಣಬರುತ್ತದೆ. ಅಜಂತವನ್ನು ಬಿಟ್ಟರೆ ಶಿತ್ತನಿವಾಸಿಲ್ (ಪುದುಕೋಟೆ) ಸಿಂಗ್ರಿಯ (ಸಿಲೋನ್) ಇವೆರಡು ಸ್ಥಳಗಳಲ್ಲಿ ಮಾತ್ರ ಪ್ರಾಚೀನವಾದ ಚಿತ್ರಕಲೆಯ ಅವಶೇಷಗಳು ಕಾಣಬರುತ್ತವೆ. ಮತ್ತೆನ್ನೆಲ್ಲಿಯೂ ಇಲ್ಲ. ಅಜಂತದ ಮೂರ್ತಿಗಳ ಮೇಲೆ ಕಂಡುಬರುವ ಆಭರಣಗಳೆಲ್ಲವೂ ಸಾಧಾರಣವಾಗಿ ದಕ್ಷಿಣದೇಶದ ಆಭರಣಗಳನ್ನು ಹೋಲುತ್ತವೆ. ಈ ಕಾರಣಗಳಿಂದ ಅಜಂತದ ಕಲಾವಿಶೇಷದಲ್ಲಿ ಬೌದ್ಧರ ಸ್ಫೂರ್ತಿಯೂ ಆವೇಶವೂ ಇದ್ದರೂ ಅಲ್ಲಿನ ಕಲಾಕರ್ಮವೆಲ್ಲವನ್ನೂ ಮಾಡಿದವರು ದಾಕ್ಷಿಣಾತ್ಯಕಲಾಕೋವಿದರೆಂಬುದರಲ್ಲಿ ಅನುಮಾನವೇ ಇಲ್ಲ.

ಎಲ್ಲೋರದ ಕೈಲಾಸ ದೇವಾಲಯದ ಒಳಮಾಳಿಗೆಯಲ್ಲೂ ಪ್ರಾಚೀನ ಚಿತ್ರಕಲೆಯ ಚಿಹ್ನೆಗಳಿವೆಯೆಂಬದಾಗಿ ಡಾ॥ ಆನಂದಕುಮಾರಸ್ವಾಮಿಯವರು ಹೇಳುವರು. ಪ್ರಾಚೀನವಾದ ಚಿತ್ರಕಲಾ ಅವಶೇಷಗಳು ಕರ್ನಾಟಕದಲ್ಲಿ ಇನ್ನೆಲ್ಲೂ ಇಲ್ಲ. ಆದರೆ ಶಿಲೆಯಲ್ಲಿ ಲಾವಣ್ಯಸೌರಭವು ಸೂಸುವಂತೆ, ಶೀಲಾವಿಲಾಸವು ಮನವನಪಹರಿಸುವಂತೆ, ಸಮುಕಟ್ಟು ಕಣ್ಕಟ್ಟುವಂತೆ, ಚಿತ್ರಿಸಬಲ್ಲ ಕಲಾವಿದರು ಪಟದಲ್ಲೂ ಚಿತ್ರಕರ್ಮವನ್ನು ತೀರಿಸಲು ಬಲ್ಲರೆಂದು ನಾವು ಊಹಿಸುವುದರಲ್ಲಿ ಬಾಧಕವೇನು ಇರಲಾರದು.

ಬಿಜಾಪುರದ ಸುಲ್ತಾನರ ಕಾಲದಲ್ಲಿ ಶಿಲ್ಪಿಗಳಿಗೂ ಚಿತ್ರಗಾರರಿಗೂ ಪೂರ್ಣ ಪ್ರೋತ್ಸಾಹವಿತ್ತು. ಮೊಗಲರ ಕಾಲದ ಭಾವಚಿತ್ರಗಳನೇಕಗಳನ್ನು ಬಿಜಾಪುರದ ಚಿತ್ರಗಾರರೇ ಬರೆದರು. ೧೬ ರಿಂದ ೧೮ನೆಯ ಶತಮಾನದವರೆಗೂ ಉತ್ತರ ಕರ್ಣಾಟಕದಲ್ಲಿ ರಾಜಕೀಯ ಬವಲಾವಣೆಗಳಿಂದ ಶಾಂತಿಯಿಲ್ಲದಿರಲು ಮೈಸೂರೊಡೆಯರ ಆಸ್ಥಾನಕ್ಕೆ ಅನೇಕ ಕಲಾವಿದರು ಬಂದು ಸೇರಿದರು. ಮುಮ್ಮಡಿ ಕೃಷ್ಣರಾಜ

ಒಡೆಯರವರು ಕಲಾಪೋಷಕರಾಗಿದ್ದರು. ಮೈಸೂರು ವೆಂಕಟರ
ಮಣಸ್ವಾಮಿಯ ದೇವಾಲಯದ ಒಳಮಾಳಿಗೆಯಲ್ಲಿ ಚಿತ್ರಕಲೆಯ
ಗುರುತಿದ್ದಂತೆ ತೋರಿಬರುತ್ತದೆ. ಮೈಸೂರು ಜಗನ್ಮೋಹನ ಅರ
ಮನೆಯಲ್ಲೊಂದು (ಪುಸ್ತಕ)ಚಿತ್ರಮಾಲೆಯುಂಟು. ಅದರಲ್ಲಾವನೋ
ಒಬ್ಬ ಪ್ರತಿಭಾಶಾಲಿಯಾದ ಚಿತ್ರಗಾರನು ಕೃಷ್ಣರಾಜಒಡೆಯರ ಆಸ್ಥಾ
ನದಲ್ಲಿ ಮುಖ್ಯಮುಖ್ಯವಾಗಿದ್ದವರ ಭಾವಚಿತ್ರಗಳನ್ನೆಲ್ಲ ಚಿತ್ರಿಸಿ,
ಸೂಕ್ಷ್ಮವಾಗಿ ಬಣ್ಣಹಚ್ಚಿರುವನು. ಇದರಲ್ಲಿ ನಾವು ಮುಖ್ಯವಾಗಿ
ಗಮನಿಸಬೇಕಾದುದು ರೇಖಾಸ್ವಾರಸ್ಯವನ್ನು. ರೇಖಾವಿಲಾಸವೇ
ಭಾರತೀಯ ಚಿತ್ರಕ ಯ ಪ್ರಧಾನವಾದ ಸಾಧನಾಫಲವು.

ಬಹು ಹಿಂದಿನ ಕಾಲದಿಂದ ಸಂತಾನಪರಂಪರೆಯಾಗಿ ಈ ಕಲೆ
ಯು ನಡೆದುಬಂದರೂ ಈಗ ಆ ಕಲೆಯರಿತ ಮನೆತನದವರೊಬ್ಬರೂ
ಇಲ್ಲ. ಅಲ್ಲಲ್ಲಿ ಹಲವರು ಗಾಜಿನ ಮೇಲೆ ದೇವತಾ ರೂಪಗಳನ್ನು
ಚಿತ್ರಿಸುವರು ; ಮತ್ತೆ ಕೆಲವರು ಅಲ್ಲಲ್ಲಿ ಗಾಜಿನ ಚೂರುಗಳನ್ನು
ಮಿನುಗುವಂತೆ ಹಚ್ಚಿ ಸಂತೆಯಮಾರಾಟಕ್ಕೆ ಹಲವು ಚಿತ್ರಗಳನ್ನೂ
ಸಿದ್ಧಪಡಿಸುವರು. ನಮ್ಮ ಹಿರಿಯರೇಳಿಸಿದ ಕಲೆಯು ಇಷ್ಟರಲ್ಲಿ
ಪರಿಣಮಿಸಿತು.

ಈಗೀಗ ಬಂಗಾಳದಲ್ಲಿ ಭಾರತೀಯ ಚಿತ್ರಕಲೆಯನ್ನು ಪುನ
ರುಜ್ಜೀವನ ಮಾಡಲು ಮಹಾ ಪ್ರಯತ್ನಗಳು ನಡೆಯುತ್ತಲಿವೆ.
ಅಜಂತದ ಕಲಾಸಂದೇಶವೇ ಈ ಪ್ರಯತ್ನಕ್ಕೆ ಮೂಲಕಾರಣವಾಗಿದೆ.
ಮೈಸೂರಿನ ಕೆ. ವೆಂಕಟಪ್ಪನವರೂ ಈ ಪ್ರಯತ್ನದಲ್ಲಿ ಭಾಗಿಗಳಾಗಿ
ರುವರು. ಅಜಂತಕ್ಕೆ ಹೆರ್ರಿಂಗ್‌ಹ್ಯಾಂರವರನ್ನು ಹಿಂಬಾಲಿಸಿ,
ಅಲ್ಲಿನ ಕಲಾವಿಶೇಷಗಳನ್ನು ಎತ್ತಿ ಉದ್ಧರಿಸಿದ ಕಲಾವಿದರಲ್ಲಿ ನಮ್ಮ
ವೆಂಕಟಪ್ಪನವರೂ ಒಬ್ಬರು. ‘ಶಿವರಾತ್ರಿ’ ‘ಅರ್ಧನಾರೀಶ್ವರ’ ಚಿತ್ರ
ಗಳಲ್ಲಿ ತಮ್ಮ ಪ್ರತಿಭೆಯನ್ನಾಗಲೇ ಅವರು ತೋರ್ಪಡಿಸಿರುವರು.
ದಂತದ ಮೇಲಣ ಭಾವಚಿತ್ರಗಳಲ್ಲಿ ಅವರು ತೋರಿಸಿರುವ ಕಲಾಕೌ
ಶಲ್ಯವನ್ನು ಕಂಡು ಬೆರಗಾಗದವರಾರು! ಯನ್. ಜಿ. ಪಾವಂಜಿ

ಮತ್ತು ಯಸ್. ಆರ್. ಪೋತದಾರ ಎಂಬಿಬ್ಬರು ಕಲಾಯುವಕರೂ ಮುಂದೆ ಕರ್ನಾಟಕಕ್ಕೆ ಹೆಸರನ್ನು ತರುವವರಾಗಿರುವರು.

## ಸಂಗೀತ

ಭರತಖಂಡದಲ್ಲಿ ಗಾಂಧರ್ವ ವಿದ್ಯೆಯು ಬಹು ಪುರಾತನವಾದ ಕಲೆ. ಇದರ ಹುಟ್ಟುಕತೆಯನಚ್ಚುಕಟ್ಟಾಗಿ ಅರಿತವರಿಲ್ಲ. ಸಂಗೀವನ್ನೀಗ ಉತ್ತರಾದಿ ಮತ್ತು ದಕ್ಷಿಣಾದಿ ಅಥವಾ ಕರ್ನಾಟಕ ಎಂಬದಾಗಿ ಎರಡುವಿಭಾಗನಾಡಬಹುದು. ಇವೆರಡು ಮಾರ್ಗಗಳಿಗೂ ಆಧಾರವೂ, ಮೂಲವೂ ಒಂದೇ ಆದರೂ ಸಾಧನಸರಣಿಯಲ್ಲಿ ವ್ಯತ್ಯಾಸವು ಕಾಡುಬರುತ್ತದೆ. ಕರ್ನಾಟಕ ಸಂಗೀತವು ಪ್ರಾಚೀನ ಸಂಗೀತದ ಪಾರಶುಧ್ಯವನ್ನು ಉಳಿಸಿಕ್ಕೊಂಡಿದೆ. ಉತ್ತರಾದಿ ಸಂಗೀತವಾದರೋ ಇಸ್ಲಾಮಿ ಸಂಸ್ಕೃತಿಯ ಸಂಪರ್ಕದಿಂದ ಒಂದು ಬಗೆಯ ಸಾಂಕರ್ಯವನ್ನು ಹೊಂದಿರುತ್ತದೆ. ಉತ್ತರ ಕರ್ನಾಟಕದಲ್ಲಿ ಉತ್ತರಾದಿ ಕರ್ನಾಟ ಸಂಗೀತಗಳೆರಡೂ ಉಂಟು.

ಕರ್ನಾಟಕದಲ್ಲಿ (ಕ್ರಿ. ಶ. ೧೨ ನೆಯ ಶತಮಾನ) 'ಸಂಗೀತ ಪ್ರಸಂಗ ಭಂಗಿ' ಎಂಬ ಬಿರುದಪ್ರಖ್ಯಾತನಾದ ಹೊಯ್ಸಳ ವೀರ ಬಳ್ಳಾಳನೇ ನಮಗೆ ಪ್ರಥಮ ಪರಿಚಿತ ಗಾಂಧರ್ವಿಗನು. ವಿಜಯನಗರದ ಗೋಪಾಲನಾಯಕನಿಗೂ ಅಮೀನಖಾನನಿಗೂ ಸಂಗೀತ ವಿಚಾರವಾಗಿ ಅಲ್ಲಾಉದ್ದೀನನ ಆಸ್ಥಾನದಲ್ಲಿ ಘೋರತರ್ಕವಾದಂತೆ ಒಂದು ವದಂತಿಯುಂಟು. ನಮಗೆ ತಿಳಿದು ಬಂದಿರುವ ಹಾಡುಗಬ್ಬಿಗರಲ್ಲಿ ಪ್ರಾಚೀನನಾದ ಜಯದೇವನು (ಕ್ರಿ. ಶ. ೧೨ ನೆಯ ಶತಮಾನ) ಹೇಳಿರುವ ಅನೇಕ ರಾಗಗಳಲ್ಲಿ 'ಕರ್ನಾಟ' ವೂ ಒಂದು. ಆಯಾ ರಾಗಕ್ಕೆ ಆಯಾ ದೇಶದ ಹೆಸರೇ ಕೊಡಲ್ಪಟ್ಟಿದೆ. ಬಹುತರ ನೆರೆಹೊರೆಯ ದೇಶೀಯರಿಗೆ ಆರಾಗಗಳೇ ಆ ದೇಶದಲ್ಲ ಶ್ರೇಷ್ಠವಾದುವೆಂದು ತೋರಿಬಂದಿರಬಹುದು. ಅಂತಹ ರಾಗಗಳಲ್ಲಿ ಕರ್ನಾಟವೂ ಒಂದಾಗಿರಬಹುದು. ಅದೇ ಈಗಿನ 'ಕಾನಡ' ರಾಗವಿರಬೇಕು. 'ಕನ್ನಡ' ವೆಂಬದಾಗಿ ಮತ್ತೊಂದು ರಾಗವೂ ಉಂಟು.

ಭರತಖಂಡದ ಸಂಗೀತಶಾಸ್ತ್ರಕ್ಕೆಲ್ಲ ಸಾರಂಗದೇವನೇ ಆದಿ ಲೇಖಕನು. ಇವನು ಯಾದವ ರಾಮಚಂದ್ರನ (ಕ್ರಿ. ಶ. ೧೩ ನೆಯ ಶತಮಾನ) ಆಸ್ಥಾನದಲ್ಲಿದ್ದು 'ಸಂಗೀತರತ್ನಾಕರವನ್ನು' ಬರೆದನು. ಇದಕ್ಕೆ ವಿಜಯನಗರದ ಪ್ರೌಢದೇವರಾಯನ (ಕ್ರಿ. ಶ. ೧೫ ನೆಯ ಶತಮಾನ) ಆಸ್ಥಾನದ ಕಲಿನಾಥನೊಂದು ವ್ಯಾಖ್ಯಾನವನ್ನು ಬರೆದನು. ಆದರೆ ಆ ವ್ಯಾಖ್ಯಾನವು ದೊರೆತಿಲ್ಲವಾಗಿ ಶೃಂಗಾರ ರತ್ನಾಕರದ ಗುಟ್ಟೇ ಒಬ್ಬರಿಗೂ ಗೊತ್ತಾಗಿಲ್ಲ. ಕಲ್ಲಿನಾಥನಿಗೆ 'ಅಭಿನವ ಭರತಾಚಾರ್ಯ' ನೆಂದೂ ಹೆಸರುಂಟು. ಮೊಟ್ಟಮೊದಲು ಕನ್ನಡದಲ್ಲಿ ಸಂಗೀತಶಾಸ್ತ್ರವಿಚಾರವಾಗಿ ಬರೆದವನು ನಿಜಗುಣಶಿವಯೋಗಿಯು. (ಕ್ರಿ. ಶ. ೧೫೦೦) ಇವನ ಗ್ರಂಥಕ್ಕೆ ವಿವೇಕ ಚಿಂತಾಮಣಿಯೆಂದು ಹೆಸರು. ವಿಜಯನಗರದರಸು ಮನೆತನಕ್ಕೆ ಸೇರಿದ ರಾಮಾಮಾತ್ಯನೇ (ದಾಕ್ಷಿಣಾತ್ಯ) ಕರ್ಣಾಟ ಸಂಗೀತವನ್ನು ವಿಶದೀಕರಿಸಿ ಬರೆದವನು. ಅವನ ಗ್ರಂಥಕ್ಕೆ 'ಸ್ವರಮೇಳ ಕಲಾನಿಧಿ' ಯೆಂದು ಹೆಸರು ಸಾಳುವ ವಂಶದ ಮನೆತನದ ತಿಪ್ಪನೆಂಬುವನು (ಸು. ಕ್ರಿ. ಶ. ೧೪೫೦) ತಾಳದೀಪಿಕೆಗೆ ವ್ಯಾಖ್ಯಾನವನ್ನು ಬರೆದನು. ಕ್ರಿ. ಶ. ೧೬ ನೆಯ ಶತಮಾನಾರಂಭದಲ್ಲಿ ಭಕ್ತಿಮಾರ್ಗ ಪ್ರಸಾರಕರಾದ ಮಧ್ವ ಹರಿದಾಸರು ಸಂಗೀತಕ್ಕೆ ಮಾಡಿದುಪಕಾರವನ್ನು ಮರೆಯಲಾಗದು. ಅಂತಹ ಕವಿಸಂತರಲ್ಲಿ ಪುರಂದರವಿಠಲ (ಕ್ರಿ. ಶ. ೧೫೪೦) ನೇ ಪ್ರಥಮನು, ಪ್ರಖ್ಯಾತನು. ಕರ್ಣಾಟಕ ಸಂಗೀತ ಶಾಸ್ತ್ರಾಧ್ಯಯನಕ್ಕೆ ಪುರಂದರನಗೀತೆಗಳೇ ಆದಿ.

ಮೊಗಲರ ಪ್ರಾಬಲ್ಯವು ದಕ್ಷಿಣ ದೇಶದಲ್ಲಿ ಹರಡಿದಂದಿನಿಂದ, ಸಂಗೀತಕಲಾ ಪೋಷಕರಾದ ಅನೇಕ ಮೊಗಲಪಾದುಷಹರು ದಕ್ಷಿಣ ದೇಶದಿಂದ ಸಂಗೀತ ಶಾಸ್ತ್ರಜ್ಞರನ್ನು ಉತ್ತರ ದೇಶಕ್ಕೆ ಕರೆತರಿಸಿ, ಅಲ್ಲಿ ಸಂಗೀತ ವಿಚಾರದಲ್ಲುಂಟಾಗಿದ್ದ ಅವ್ಯವಸ್ಥೆಯನ್ನು ಅವರ ಸಹಾಯದಿಂದ ಸರಿಪಡಿಸಿದರು. ಹಾಗೆ ಉತ್ತರಕ್ಕೆ ಹೋಗಿದ್ದವರಲ್ಲಿ ಪುಂಡರೀಕವಿಠಲನೆಂಬುವನೊಬ್ಬನು. ಇವನು ತಾನು ಕರ್ಣಾಟಕನೆಂದು ಹೇಳಿಕೊಂಡಿರುವನು. ನರ್ತನ ನಿರ್ಣಯ, ರಾಗಮಾಲಾ, ರಾಗ

ಮಂಜರಿ, ಸಂಗೀತವೃತ್ತರತ್ನಾಕರ, ಶೀಘ್ರಬೋಧಿನೀನಾಮ ಮಾಲಾ ಮೊದಲಾದ ಗ್ರಂಥಗಳನ್ನು ಬರೆದಿರುವನು. ಖಾನ್‌ದೇಶ ದಲ್ಲಿದ್ದ ವನನ್ನು ಅಕಬರನು ದಿಹಲಿಗೆ ಕರೆಸಿಕೊಂಡನು.

ವಿಜಯನಗರದರಸರೂ ಈ ಕಲೆಗೆ ತಕ್ಕ ಪ್ರೋತ್ಸಾಹವನ್ನು ಕೊಟ್ಟರೆಂದರಿತೆವು. ಅವರ ತರುವಾಯ ವಿಜಯನಗರದ ಮಾಂಡ ಲಿಕರಾದ ತಂಜಾಊರು ನಾಯಕರು ಈ ಕಲಾಭಿವೃದ್ಧಿಗೆ ಹೆಚ್ಚು ಪ್ರೋತ್ಸಾಹವನ್ನಿತ್ತರು. ಅಚ್ಯುತಪ್ಪನಾಯಕ, ರಘುನಾಥನಾಯ ಕರ ಕಾಲದಲ್ಲಿ ತಂಜಾವೂರು ಸಂಗೀತಕ್ಕೆ ನೆಲೆವೀಡಾಯಿತು. ಮರಾ ಠರ ಕಾಲದಲ್ಲೂ ಇಲ್ಲಿ ಸಂಗೀತಕ್ಕೆ ತಕ್ಕ ಪ್ರೋತ್ಸಾಹವಿತ್ತು. ತುಳು ಜಾಮಹಾರಾಜನ (ಕ್ರಿ. ಶ. ೧೮ ನೆಯ ಶತಮಾನ) ಆಸ್ಥಾನದಲ್ಲಿ ಪ್ರತಿಭಾಶಾಲಿಯಾದ ಅದೆಪ್ಪಯ್ಯನೆಂಬ ಸಂಗೀತಗಾರನಿದ್ದನು. ಅವ ನು ಕನ್ನಡಿಗನು. ಈಗ ದಕ್ಷಿಣ ದೇಶದಲ್ಲಿ ವಾಡಿಕೆಯಲ್ಲಿರುವ ಕರ್ಣಾ ಟಕ ಸಂಗೀತವು ಸಾರಂಗದೇವನ ವಂಶೀಯ ತಾನಪ್ಪಾಚಾರ್ಯರ ಶಿಷ್ಯನಾದ ವೆಂಕಟಮಖಿಯು ಮಾಡಿದ ವ್ಯವಸ್ಥೆಯನ್ನೇ ಅನುಸರಿ ಸಿರುತ್ತದೆ. ಈತನು ರಾಗಗಳೆಲ್ಲವನ್ನು ೭೨ ಮೇಳಕರ್ತರನ್ನಾಗಿ ವಿಭಾ ಗಿಸಿದನು. ಆತನು ಬರೆದ ಗ್ರಂಥಕ್ಕೆ 'ಚತುರ್ದಂಡಿ ಪ್ರಕಾಶಿಕಾ' ಎಂಬ ದಾಗಿ ಹೆಸರು.

೧೯ ನೆಯ ಶತಮಾನದಲ್ಲಿ ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನವು ಅನೇಕ ಸಂಗೀತ ವಿದ್ವಾಂಸರಿಗೆ ಆಶ್ರಯಸ್ಥಾ ನವಾಗಿದ್ದಿತು. 'ಸದಾಶಿವರಾಯರೆಂಬುವರಲ್ಲಿನ ಪ್ರಖ್ಯಾತ ಕಲಾವಿ ದರು. ಇಂದಿಗೂ ಮೈಸೂರೊಡೆಯರ ಆಸ್ಥಾನದಲ್ಲಿ ಪ್ರಖ್ಯಾತರಾದ ವೈಣಿಕಶಿಖಾಮಣಿಗಳೂ, ಗಾನವಿಶಾರದರೂ, ಶೋಭಿಸುತ್ತಿರುವರು. ಪ್ರಾಚೀನಕಾಲದಿಂದಲೂ ಪರಂಪರೆಯಾಗಿ ಬರುತ್ತಿರುವ ಸಂಗೀತ ಕಲೆಯು ಇಂದಿಗೂ ಮೈಸೂರೊಡೆಯರ ರಾಜಾಶ್ರಯಕ್ಕೆ ಒಳಗಾಗಿ ವೃದ್ಧಿಹೊಂದುತ್ತಲಿದೆ.

## ಉಪಸಂಹಾರ

"ಹಿಂದೂಸ್ಥಾನದ ಕಲಾವಿಶೇಷಗಳಲ್ಲಿ ಎಲ್ಲ ಯುಗಗಳಲ್ಲೂ ಒಂದೇ ಬಗೆಯ ಕೌತುಕವು, ಕುಶಲತೆಯು ಕಾಣಬರುತ್ತದೆ. ಮಡಕೆಕುಡಿಕೆಗಳಿಂದ ಮೊದಲ್ಗೊಂಡು ವಾಸ್ತುಶಿಲ್ಪದವರೆಗೂ, ಚೂರು ಅರಳೆಯ ಬಟ್ಟೆ ಮೊದಲ್ಗೊಂಡು ದೇವಾಗಾರದವರೆಗೂ ಒಂದೇ ವಿಧವಾದ ವ್ಯಂಜಕವೂ ಅರ್ಥಪೂರ್ವಕವೂ ಆದ ಕಲಾವೈಖರಿಯು ಕಂಡುಬರುತ್ತದೆ. ಭಾರತೀಯ ಕಲೆಯು ಪುರುಷಾರ್ಥಪ್ರಧವಾದುದು ; ಅರ್ಥಗಾಂಭೀರ್ಯವುಳ್ಳುದು. ಆಧುನಿಕ 'ಲಲಿತ' ಅಥವಾ 'ನಿಷ್ಫಲ' ಕಲೆಗೂ ಜನ ಜೀವನಕ್ಕೂ ಸಂಬಂಧವೇ ಇಲ್ಲ. ಆ ಕಲೆಯು ಒಗಟೆಯಂತಿದೆಯಾದಕಾರಣ ಜನ ಸಾಮಾನ್ಯದಲ್ಲಿ ಕಲಾಭಿರುಚಿಯನ್ನು ಹೆಚ್ಚಿಸುವುದಕ್ಕೆ ಸಾಧಕವಾಗಿಲ್ಲ......................

ವಾಸ್ತುಶಿಲ್ಪವೊಂದು ಕಲಾ ವಿಶೇಷವಾಗಿ ಗಣಿಸಲ್ಪಡಲಿಲ್ಲ ; ಕೇವಲ ಔಪಯೋಗಿಕ ಪದಾರ್ಥವಾಗೆಣಿಸಲ್ಪಟ್ಟಿತು.........ಕಲೆಯೆಂಬುದು ಸ್ವೈಜಗುಣ ; ಈ ಗುಣವೆಲ್ಲರಿಗೂ ಸಾಮಾನ್ಯವಾದುದು. ಪ್ರತ್ಯಹವೂ ಎಲ್ಲರಿಂದಲೂ, ಅವರವರ ಶಕ್ತ್ಯಾನುಸಾರ ಸೃಷ್ಟಿಸಲು ಸಾಧ್ಯವಾದುದು." ಎಂಬ ಡಾ॥ ಆನಂದಕುಮಾರಸ್ವಾಮಿಯವರ ಹೇಳಿಕೆಯಂತೆ ಕರ್ಣಾಟಕದಲ್ಲಿ ಕಾಣಬರುವ ಬುಟೇದಾರಿ (ಚಂಕೀ) ವಸ್ತ್ರ, ರತ್ನಗಂಬಳಿಯುಸೆಯ್ಗೆ, ಕೆತ್ತನೆಯ ಕೆಲಸ, ಖಂಡರಣೆ, ಲೋಹಕರ್ಮ, ದಾರುಕರ್ಮ, ಮುಂತಾದ ಕುಶಲಕಲೆಗಳಲ್ಲೆಲ್ಲ ಕನ್ನಡಿಗರ ಕಲಾಭಿರುಚಿಯನ್ನು, ಕಲಾಕೌಶಲ್ಯವನ್ನು ನೋಡಬಹುದು. ಹಿಂದಿನ ಕಾಲದಲ್ಲಿ ಈ ಕೆಲಸಗಳೆಲ್ಲವೂ ಆಯಾಯಾ ಕೆಲಸಗಾರರ ಕಲಾಶ್ರೇಣಿಗಳಲ್ಲಿ ಉತ್ಪತ್ತಿಯಾಗುತ್ತಿತ್ತು. ಆ ಶ್ರೇಣಿಗಳ ಕೆಲಸಗಾರರಲ್ಲಿ ವಂಶಾನುಕ್ರಮವಾಗಿ ಬಂದ ಕರಕೌಶಲ್ಯವಿತ್ತು. ಈಗಲಾದರೋ ಆರ್ಥಿಕಅವ್ಯವಸ್ಥಾ ಸ್ಥಿತಿಗಳಿಂದಲೂ, ರಾಜಾಶ್ರಯದ ಅಭಾವದಿಂದಲೂ ಆ ಕೆಲಸಗಾರರ ಕಲಾಪ್ರತಿಭೆಯು ಅಲ್ಲಲ್ಲೇ ಕೊನೆಗಂಡಿತು. ಆದರೂ ಒಂದೊಂದು ಮನೆತನದಲ್ಲಿ ಹಲವರು

ಇಂದಿಗೂ ಕಲಾಸಕ್ತಿಯನ್ನು ರಕ್ಷಿಸಿಕೊಂಡಿರುವರು. ಅಂಥವರಲ್ಲಿ ಶಿವಮೊಗ್ಗ ಜಿಲ್ಲೆಯ ಗುಡಿಗಾರ ಮನೆತನದವರೊಬ್ಬರು. ಅವರು ಇಂದಿಗೂ ಲೋಹದಲ್ಲೂ ಮರದಲ್ಲೂ ಉತ್ತಮವಾದ ಪ್ರತಿಮೆಗಳನ್ನು ಕೆತ್ತುವರು.

ಪ್ರಕೃತ ಲಲಿತಕಲೆಗೆ ತಕ್ಕ ಪ್ರೋತ್ಸಾಹವಿಲ್ಲ; ಕಲಾವಿದರಿಗೆ ಆಶ್ರಯವಿಲ್ಲ. ಜನಸಾಮಾನ್ಯದಲ್ಲಿ ರಸಿಕತೆಯಿಲ್ಲ. ಕಲಾಭಿರುಚಿಯಿಲ್ಲ. ಸೌಂದರ್ಯದಲ್ಲಿ ಆನಂದವನ್ನು ಕಂಡು, ಆ ಆನಂದದಿಂದ ಸೌಖ್ಯವನ್ನು ಹೊಂದುವ ಚಿಚ್ಛಕ್ತಿಯು ಜನರಿಗೆ ಹೋಯಿತು. ಸಾರ್ವಜನಿಕ ಸೌಧಗಳಲ್ಲಾಗಲಿ, ದೇವಾಲಯಗಳಲ್ಲಾಗಲಿ, ಚಿತ್ರಗಳಲ್ಲಾಗಲಿ, ಸಂಗೀತದಲ್ಲಾಗಲಿ ಎಲ್ಲಿ ನೋಡಿದರೂ ಪವಿತ್ರವೂ ಪರಿಶುದ್ಧವೂ ಆದ ಕಲಾಭಿರುಚಿಯ ಅಭಾವ ಚಿಹ್ನೆಗಳೇ ಕಾಣಬರುತ್ತವೆ. ಹೆಚ್ಚೇಕೆ ಯಾರಭಯವೂ ಇಲ್ಲದೆ ಈ ಕಾಲವನ್ನು 'ಕಲಾಸಂಕರ' ಯುಗವೆಂದು ಕರೆಯಬಹುದು.

ಪ್ರದರ್ಶನಗಳು, ಉಪನ್ಯಾಸಗಳು, ಮೊದಲಾದ ಮಾರ್ಗಗಳ ಮೂಲಕ ಜನರಲ್ಲಿ ಕಲಾಸಕ್ತಿಯನ್ನು ಹೆಚ್ಚಿಸಲು ಕರ್ಣಾಟಕದಲ್ಲಿ ಈಗಲೀಗ ಹಲವು ಪ್ರಯತ್ನಗಳು ನಡೆಯುತ್ತಲಿವೆ. ಈ ಪ್ರಯತ್ನವು ಕರ್ಣಾಟಕದಲ್ಲಿ ನಿಜವಾಗಿ ಸಂಪೂರ್ಣವಾಗಿ ಫಲಿಸಬೇಕಾದರೆ ಮೈಸೂರೊಡೆಯರ ಆಸ್ಥಾನದಲ್ಲೆ. ಅದೊಂದೇ ಈಗ ನಮ್ಮೆಲ್ಲರ ಆಶಯಗಳಿಗೆ ಆಶ್ರಯಸ್ಥಾನವು.

ಸಂಪದ್ಗಿರಿರಾವ ಕೋಲಾರ.

VII

# ಕರ್ಣಾಟಕ ಸಾಹಿತ್ಯ

---

## ಕನ್ನಡನುಡಿಯ ಪ್ರಾಚೀನತೆ

"ಬೌದ್ಧರೇ ಕನ್ನಡಭಾಷೆಗೆ ಆದಿಕವಿಗಳು; ಸುಮಾರು ಕ್ರಿಸ್ತಶಕದ ಆದಿಭಾಗದಿಂದಲೂ ಕನ್ನಡಭಾಷೆಯಲ್ಲಿ ಗ್ರಂಥರಚನೆಯಾಗುತ್ತಿದ್ದಿರಬೇಕು. ಬೌದ್ಧಮತದ ನಾಶದೊಂದಿಗೆ ಬೌದ್ಧಗ್ರಂಥಗಳೂ ನಾಶವಾದವು" ಎಂಬದಾಗಿ ಹಲವು ವಿದ್ವಾಂಸರ ಮತ. ಈ ಸಿದ್ಧಾಂತಕ್ಕೆ ಅವರು ಸಾಕಾದಷ್ಟು ಕಾರಣಗಳನ್ನು ಕೊಡುವರು.

ನಾವೀಗ ಚರ್ಚಿಸುತ್ತಿರುವ ಕಾಲಕ್ಕೆ ಶಾಸನಗಳಲ್ಲದೆ ನಮಗೆ ಮತ್ತಾವ ಸಾಧನಗಳೂ ಇಲ್ಲ. ಒಂದೆರಡು ಸಾಹಿತ್ಯ ಸಾಧನಗಳಿದ್ದರೂ ಅವುಗಳಿಂದ ನಮ್ಮ ಕೆಲಸವು ಪೂರ್ಣವಾಗಿ ಫಲಕಾರಿಯಾಗುವದಿಲ್ಲ. ಮೊಟ್ಟಮೊದಲು ಆಂಧ್ರಕರ್ಣಾಟಕ ದೇಶದ ಹಲವು ಶಾಸನಗಳನ್ನು ಪರೀಕ್ಷಿಸುವ. ಮಾಸಕಿ, ಸಿದ್ಧಾಪುರ, ಭಟ್ಟಿಪ್ರೋಲು, ಅಮರಾವತಿ, ಜಗ್ಗಯ್ಯಪೇಟೆ, ಮಳವಳ್ಳಿ, ಬನವಾಸಿಯ ಶಾಸನಗಳೆಲ್ಲವೂ ಬ್ರಾಹ್ಮೀಲಿಪಿಯಲ್ಲೂ, ಪ್ರಾಕೃತಭಾಷೆಯಲ್ಲೂ ಬರೆಯಲ್ಪಟ್ಟಿವೆ. ಅಲ್ಲದೆ ತಮಿಳುದೇಶದಲ್ಲಿ ದೊರೆತ ಪಲ್ಲವಶಾಸನಗಳೆಲ್ಲವೂ (Luder's list nos 1200, 1205, 1327, 1328 and 1194) ಪ್ರಾಕೃತಭಾಷೆಯಲ್ಲಿಯೇ ಇವೆ. ಇವುಗಳಿಂದ:

(ಅ) ರಾಜರು ಪ್ರಜೆಗಳೆಲ್ಲರಿಗೂ ತಮ್ಮಾಜ್ಞೆಯನ್ನು ತಿಳಿಯಪಡಿಸುತ್ತಿದ್ದರೆಂದೂ;

(ಇ) ಅಶೋಕನು ಜನರೆಲ್ಲರಿಗೂ ಧರ್ಮತತ್ವಗಳನ್ನು ತಿಳಿಯಹೇಳಲು ವಿಷಯಗಳನ್ನು ಪ್ರಚಾರಪಡಿಸುತ್ತಿದ್ದನೆಂದೂ;

(ಉ) ವಿಪ್ರರು, ಕ್ಷತ್ರಿಯರು, ವಿದ್ವಾಂಸರು, ಅಕ್ಕಸಾಲಿಗರು, ವರ್ಧಕರು, ಕಾಮಿಕರು ಚರ್ಮಕಾರರು ಮೊದಲಾದ ಸಾಲ್ಕೂವರ್ಣದ ಪಂಡಿತ ಪಾಮರರೂ ದಾನಧರ್ಮಗಳನ್ನು ಮಾಡಿ, ಆವಿಚಾರವನ್ನು ಶಾಸನಗಳಲ್ಲಿ ಬರೆಸುತ್ತಿದ್ದರೆಂದೂ ;

ತಿಳಿಯಬರುತ್ತದೆ. ಅಂದರೆ ಸಾಧಾರಣವಾಗಿ ದ್ರಾವಿಡದೇಶದಲ್ಲೆಲ್ಲ ಪ್ರಾಕೃತವು ಚನ್ನಾಗಿ ಗೊತ್ತಿತ್ತೆಂದು ಸ್ಪಷ್ಟವಾಯಿತು. ಸಾಹಿತ್ಯವನ್ನಾಶ್ರಯಿಸಿದರೂ ಇದೇ ಸಿದ್ಧಾಂತವೇ ಸ್ಥಿರವಾಗುತ್ತದೆ. ಅಂದರೆ ಸುಮಾರು ಕ್ರಿ. ಶ. ೪ ನೆಯ ಶತಮಾನದವರೆಗೂ ದಕ್ಷಿಣದೇಶದಲ್ಲಿ ಪ್ರಾಕೃತವು ಎಲ್ಲರ ವ್ಯವಹಾರಭಾಷೆಯಾಗಿತ್ತೆಂದು ಗೊತ್ತಾಯಿತು.

ದಕ್ಷಿಣದೇಶಕ್ಕೆ ಬಂದ ಬೌದ್ಧಮತ ಪ್ರಚಾರಕರು ಆ ದೇಶೀಯರಿಗೆ ಪ್ರಾಕೃತವು ಪರಿಚಯವಿದ್ದುದರಿಂದ ತಮ್ಮ ಮತತತ್ವಗಳನ್ನು ನಿರಾತಂಕವಾಗಿ ಜನರಿಗೆ ಬೋಧಿಸುತ್ತ ಬಂದರು. ಆದುದರಿಂದಲೇ ನಮಗೆ ಬೌದ್ಧರ ಗ್ರಂಥಗಳೊಂದೂ ದ್ರಾವಿಡ ದೇಶಭಾಷೆಗಳಲ್ಲಿ ಕಾಣಬಂದಿಲ್ಲ.

ಇನ್ನು ಸಾಹಿತ್ಯ ಸಾಧನಗಳನ್ನು ಪರೀಕ್ಷಿಸುವ. ಕ್ರಿ. ಶ. ೯ ನೆಯ ಶತಮಾನದ ರಾಷ್ಟ್ರಕೂಟ ನೃಪತುಂಗನ ಕವಿರಾಜಮಾರ್ಗವೇ ನಮಗೆ ದೊರೆತಿರುವ ಕೇವಲ ಪುರಾತನ ಗ್ರಂಥ. ಕವಿರಾಜಮಾರ್ಗವು ಲಕ್ಷಣಗ್ರಂಥ; ಕಾವ್ಯಾರಂಭಕ್ಕೆ ಮೊದಲು ಲಕ್ಷಣಗ್ರಂಥವು ಹುಟ್ಟಿರಲಾರದು; ನೃಪತುಂಗನು ಅನೇಕ ಪುರಾಣಕವಿಗಳನ್ನೂ, ಪುರಾತನಕವಿಗಳನ್ನೂ, ಚಿರಂತನಾಚಾರ್ಯರನ್ನೂ ಸ್ಮರಿಸಿರುವನು. ತನ್ನ ಗ್ರಂಥದಲ್ಲಿ ಬೇರೊಂದು ಕಾವ್ಯದಿಂದ ಪದ್ಯಗಳನ್ನೆತ್ತಿ ಲಕ್ಷ್ಯಗಳಾಗಿ ಉದಾಹರಿಸಿರುವನು. ಅಂದರೆ ನೃಪತುಂಗನಿಗೆ ಹಿಂದೆ (ಕ್ರಿ. ಶ. ೯ ನೆಯ ಶತಮಾನ) ಅನೇಕ ಕವಿಗಳಿದ್ದರೆಂದೂ, ಕನ್ನಡದಲ್ಲಿ ಗ್ರಂಥರಚನೆಯಾಗುತ್ತಿತ್ತೆಂದೂ, ಸ್ಪಷ್ಟವಾಗುತ್ತದೆ. ಆ ಕವಿಗಳು "ಕವಿರಾಜಮಾರ್ಗದಕಾಲಕ್ಕೆ ಕನಿಷ್ಠಪಕ್ಷ ಒಂದೆರಡು ಶತಮಾನಗಳು ಹಿಂದಿ

ನವರಾದರೂ ಆಗಿರಬೇಕು." ಅಂದರೆ ಕ್ರಿ. ಶ. ೭ ನೆಯ ಶತಮಾನದಲ್ಲೇ ಕವಿಗಳೂ ಕನ್ನಡಗ್ರಂಥಗಳೂ ಇರಬೇಕೆಂದಾಯಿತು.

ಮೌರ್ಯ, ಶಾತವಾಹನ, ಕದಂಬರ ಕಾಲದವರೆಗೂ ಅಂದರೆ ಕ್ರಿ. ಶ. ೪ ನೆಯ ಶತಮಾನದವರೆಗೂ ಪ್ರಾಕೃತವೇ (ದೇಶಭಾಷೆ) ವ್ಯವಹಾರಭಾಷೆಯಾಗಿತ್ತೆಂದು ಹಿಂದೆಯೇ ತಿಳಿಸಿದ್ದಾಯಿತು. ಆರನೆಯ ಶತಮಾನಾರಂಭಕ್ಕೆ ಬರುವವರೆಗೂ ಕನ್ನಡದ ಸುಳಿವೇ ಕಾಣಬರುವುದಿಲ್ಲ. ಬಾದಾಮಿಯ ಮಂಗಳೇಶನ (ಕ್ರಿ. ಶ. ೫೯೭-೬೦೮) ದೇ ಮೊಟ್ಟಮೊದಲನೆಯ ಕನ್ನಡ ಶಾಸನವು. ಚೂಡಾಮಣೀ ವ್ಯಾಖ್ಯಾನಕರ್ತನಾದ ಶ್ರೀವರ್ಧದೇವನೂ, ಗಂಗದುರ್ವಿನೀತನೂ ಕ್ರಿ. ಶ. ೭ ನೆಯ ಶತಮಾನದವರು.

ಸಾರಾಂಶವಿಷ್ಟು:— ಕರ್ಣಾಟಕದಲ್ಲಿ ಬೌದ್ಧಮತವು ಅಷ್ಟು ಚೆನ್ನಾಗಿ ಪ್ರಚಾರವೂ ಆಗಲಿಲ್ಲ; ಕೊಂಚಕೊಂಚವಾಗಿದ್ದರೂ ಜೈನಮತ ಪ್ರಾಬಲ್ಯದಿಂದ ಬೌದ್ಧಮತವು ಬಹುಬೇಗ ಕೊನೆಗಂಡಿತು. ಪ್ರಾಕೃತವು ದಕ್ಷಿಣದೇಶದಲ್ಲೆಲ್ಲ ಸಾಮಾನ್ಯವಾಗಿ ಅರ್ಥವಾಗುತ್ತಿದ್ದಿತು. ಆದಕಾರಣ ಬೌದ್ಧಮತಪ್ರಚಾರಕರು ಪ್ರಾಕೃತದಲ್ಲೇ ತಮ್ಮ ಪ್ರಚಾರಕರ್ಮವನ್ನು ನಡೆಸಿದರು. ದ್ರಾವಿಡಭಾಷಾವ್ಯವಸಾಯಕ್ಕೆ ಅವರು ಕೈಹಾಕಲು ಅವಕಾಶವೂ ಇರಲಿಲ್ಲ, ಆವಶ್ಯಕತೆಯೂ ಕಾಣಬರಲಿಲ್ಲ. ಅಂದಮೇಲೆ "ಬೌದ್ಧರೇ ಕನ್ನಡಕ್ಕಾದಿಕವಿಗಳು ಬೌದ್ಧಮತದನಾಶದೊಂದಿಗೆ ಬೌದ್ಧಗ್ರಂಥಗಳೂ ನಾಶವಾದುವು" ಎಂಬ ಊಹೆಯು ನಿರಾಧಾರವಾದುದು. ಸಮರ್ಪಕವೂ, ಶಾಸ್ತ್ರೀಯವೂ, ನಿರ್ವಿವಾದವೂ ಆದ ಕಾರಣಗಳನ್ನು ಕಂಡಮೇಲೂ ಬಿಸಿಲ್ಗುದುರೆಯನ್ನೇರಿ, ಚೈತ್ಯಾರಾಮ ಸ್ತೂಪವಿಹಾರಗಳಿಗೆ ಹೋಗಿ, ಬೌದ್ಧಯುಗದ ದ್ರಾವಿಡಗ್ರಂಥಗಳು ಅಲ್ಲಿ ಹೂತುಕೂತಿರಬಹುದೆಂದು ಭ್ರಮಿಸಿ, ಒಂದಾನೊಂದು ದಿನ ನಮಗಾಗ್ರಂಥಗಳು ಸಿಗುವುವೆಂಬದಾಗಿ ಕಾದು ಕೂತಿರುವ ಹಲವು ಬಾಂಧವರ ನೆಮ್ಮದಿಯ ನಂಬುಗೆಯನ್ನು ಕಂಡು ನಮಗೆ ನಗೆಬರುತ್ತದೆ.

ಕದಂಬ ಅರಸರ ಕಡೆಗಾಲದವರೆಗೂ ವಾಙ್ಮಯಪ್ರಪಂಚವೆಲ್ಲವೂ (ಸಾಂಸ್ಕೃತಿಕ) ಆರ್ಯಸ್ಫೂರ್ತಿಯಿಂದಲೂ, ಪ್ರಾಕೃತ ವಿಶೇಷದಿಂದಲೂ ತುಂಬಿಹೋಗಿತ್ತು. ಪ್ರಾಕೃತವು ಪಾಮರರ ವ್ಯವಹಾರ ಭಾಷೆಯಲ್ಲದೆ ಪಂಡಿತರ ವಿದ್ವದ್ಭಾಷೆಯೂ ಆಗಿತ್ತು. ಪ್ರಾಕೃತದಲ್ಲೇ ಅನೇಕ ಕಾವ್ಯಗಳೂ, ನಾಟಕಗಳೂ ಬರೆಯಲ್ಪಟ್ಟವು. ಸಂಸ್ಕೃತ ನಾಟಕಗಳಲ್ಲೆಲ್ಲ ಪ್ರಧಾನ ಪುರುಷ ಪಾತ್ರಗಳನ್ನುಳಿದು ಮಿಕ್ಕ ಪಾತ್ರಗಳ ಭಾಷೆಯೆಲ್ಲ ಪ್ರಾಕೃತವೆ. ಜನರೆಲ್ಲರಿಗಾಗಿ ಪ್ರದರ್ಶನಕ್ಕಾಗಿ ಬರೆದ ನಾಟಕಗಳ ಭಾಷೆಯು ಎಲ್ಲರಿಗೂ ತಿಳಿಯುತ್ತಿದ್ದಿರಬೇಕು. ೫-೬ ನೆಯ ಶತಮಾನದಿಂದ ಕರ್ಣಾಟಕ ದೇಶದಲ್ಲಿ ಹುಟ್ಟಿದ ನವೀನ ರಾಜಕೀಯ ಚಲನಗಳಿಂದಲೂ, ಕನ್ನಡಿಗರಲ್ಲುಂಟಾದ ಹೊಸ ಸ್ವಾಭಿಮಾನದಿಂದಲೂ, ಆರ್ಯಸಂಸ್ಕೃತಿಯಿಂದಲೂ, ಪ್ರಾಕೃತಭಾಷೆಯಿಂದಲೂ ಉಂಟಾದ ವರ್ಚಸ್ಸಿನಿಂದ ರೂಕ್ಷಾವಸ್ಥೆಯಲ್ಲಿದ್ದ ಕನ್ನಡವು ವೃದ್ಧಿಹೊಂದುತ್ತ ಬಂತು. ಬರಹಕ್ಕೆ ಬ್ರಾಹ್ಮೀಲಿಪಿಯನ್ನೇ ಉಪಯೋಗಿಸಿತು. ಪ್ರಾಕೃತ ಶಬ್ದಗಳನ್ನೇ ತೆಗೆದುಕೊಂಡು ಶಬ್ದಸಂಪತ್ತಿಯನ್ನು ಹೆಚ್ಚಿಸಿಕೊಂಡಿತು. ಆದಕಾರಣವೇ ಕನ್ನಡದಲ್ಲಿ ತತ್ಸಮಶಬ್ದಗಳಿಗಿಂತಲೂ ತದ್ಭವಶಬ್ದಗಳಿಗೇ ಕನ್ನಡಭಾಷಾ ದೃಷ್ಟಿಯಿಂದ ಶ್ರೇಷ್ಠತ್ವವಧಿಕ. ಮೊದಲು ಮೊದಲು ಬಂದ ತದ್ಭವಗಳೆಲ್ಲವೂ ಪ್ರಾಕೃತದಿಂದ ತೆಗೆದುಕೊಂಡಂಥವು. ಕ್ರಿ. ಶ. ೫-೬ ನೆಯ ಶತಮಾನದ ಹಲವು ಶಾಸನಗಳಲ್ಲಿ ಪ್ರಾಕೃತ ಕನ್ನಡ ಮಿಶ್ರವನ್ನು ಕಾಣಬಹುದು. (ಉದಾ: 'ಬಲದೇವಾಚಾರ್ಯರ ಪಾಉಗ್ಗಮಣ') ಚಾವುಂಡರಾಯ ಪುರಾಣ ಮೊದಲಾದ ಗ್ರಂಥಗಳಲ್ಲಿ ಕೂಡ (೧೦ ನೆಯ ಶತಮಾನ) ಪ್ರಾಕೃತ ಪದ್ಯಗಳನ್ನೂ, ವಾಕ್ಯಗಳನ್ನೂ ನೋಡಬಹುದು. ಇದನ್ನೆಲ್ಲ ಪರ್ಯಾಲೋಚಿಸಿದರೆ ಕನ್ನಡವು ವಾಙ್ಮಯ ಭಾಷೆಯಾಗುವುದಕ್ಕೆ ಮೊದಲು ಕರ್ಣಾಟಕದಲ್ಲಿ ಪ್ರಾಕೃತವೇ ಪ್ರಬಲ ದೆಶೆಯಲ್ಲಿತ್ತೆಂದು ತೋರಿಬರುವುದಿಲ್ಲವೆ ?

**ಕಾಲವಿಭಾಗ** :—ಪಂಪನೇ ಕನ್ನಡಕ್ಕಾದಿಕವಿ. ವಿಕ್ರಮಾರ್ಜುನ ವಿಜಯವೇ ಕನ್ನಡಕ್ಕಾದಿಕಾವ್ಯ. ಅಂದರೆ ನಿಜವಾಗಿಯೂ

ಕರ್ನಾಟಕ ವಾಙ್ಮಯದ ಇತಿಹಾಸವು ಕ್ರಿ. ಶ. ೧೦ ನೆಯ ಶತಮಾನದಿಂದ ಆರಂಭವಾಗುತ್ತದೆ. ಅಂದಿನಿಂದ ಎಡಬಲಗಳಿಂದ ಬಂದು ಸೇರುವ ಉಪನದಿಗಳಿಂದೊಡಗೂಡಿ ಅವಿಚ್ಛಿನ್ನವಾಗಿಯೂ ಗಂಭೀರವಾಗಿಯೂ ಕರ್ನಾಟಕ ಸಾಹಿತ್ಯರಸ ಪ್ರಪೂರ್ಣ ಪ್ರವಾಹವು ಹರಿಯುತ್ತಲಿದೆ. ಪ್ರವಾಹದಿಕ್ಕೆಲದಲ್ಲಿ ನಿಂತು ವಿಹಂಗಮ ದೃಷ್ಟಿಯಿಂದ ಆ ಸಾಹಿತ್ಯಲಹರಿಯ ಕುರುಹನ್ನು ವಾಚಕರಿಗೆ ಪರಿಚಯ ಮಾಡಿಕೊಡಲು ಪ್ರಯತ್ನಿಸುವೆವು.

ಸಾಧಾರಣವಾಗಿ ಕರ್ನಾಟಕ ವಾಙ್ಮಯೇತಿಹಾಸಕ್ಕೆ ಕೈಯಿಕ್ಕಿದವರೆಲ್ಲರೂ ಜೈನ, ವೀರಶೈವ, ವೈಷ್ಣವ ಮುಂತಾದ ಮತಗಳನ್ನು ಅನುಸರಿಸಿ ಸಾಹಿತ್ಯ ಚರಿತ್ರೆಯಲ್ಲಿ ಕಾಲವಿಭಾಗ ಮಾಡಿರುವರು. ಈ ವಿಭಾಗಕ್ರಮವು ಅಸಮಂಜಸವಲ್ಲವಾದರೂ ಶುದ್ಧ ಸಾಹಿತ್ಯ ದೃಷ್ಟಿಯಿಂದ ಅಷ್ಟು ಸಮರ್ಪಕವಾಗಿಲ್ಲ. ನಾವೀಗ ಎಲ್ಲರಿಗೂ ವಿಶ್ವಸನೀಯವಾದಮಾರ್ಗವನ್ನು ಹಿಡಿದು ಕಾಲವಿಭಾಗ ಮಾಡುವೆವೆಂದು ನಂಬಿಲ್ಲ. ಆದರೂ ಕಾಲ, ದೇಶ, ಕಾರಣ, ನಿಮಿತ್ತಗಳನ್ನು ಲಕ್ಷಿಸಿ, ಕವಿಕರ್ಮಕ್ಕೆ ಮೂಲಕಾರಣವಾದ ಸ್ಫೂರ್ತಿವಿಶೇಷವನ್ನು ಗಮನಿಸಿ, ಕಾವ್ಯಕ್ಕೆ ರಸವೇ ಆತ್ಮವೆಂಬುದನ್ನು ಜ್ಞಾಪಕದಲ್ಲಿಟ್ಟು, ಕರ್ನಾಟಕ ವಾಙ್ಮಯೇತಿಹಾಸವೆಲ್ಲವನ್ನು (ಕ್ರಿ. ಶ. ೧೦ ನೆಯ ಶತಮಾನದಿಂದ) ಕ್ಷಾತ್ರಯುಗ, ಮತ ಪ್ರಚಾರಕಯುಗ, ಸಾರ್ವಜನಿಕಯುಗ ಮತ್ತು ಆಧುನಿಕ (ವೈಜ್ಞಾನಿಕ) ಯುಗವೆಂಬದಾಗಿ ನಾಲ್ಕು ವಿಭಾಗಮಾಡುತ್ತೇವೆ.

## ಕ್ಷಾತ್ರಯುಗ

### (೧೦, ೧೧ ನೆಯ ಶತಮಾನ)

**ಕಾಲವಿಶೇಷ** :—ಕರ್ನಾಟಕ ಇತಿಹಾಸವನ್ನು ವಾಚಕರು ಕೊಂಚ ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ ಕ್ರಿ. ಶ. ೬ನೆಯ ಶತಮಾನದಿಂದ ಮೊದಲ್ಗೊಂಡು ೧೧ ನೆಯ ಶತಮಾನದವರೆಗೂ ಹತ್ತಾರು ರಾಜಮನೆತನದವರು ಸಾಮ್ರಾಜ್ಯಪದವಿಗಾಗಿ ಒಬ್ಬರಮೇಲೊಬ್ಬರು

ಬಿದ್ದು ಯುದ್ಧವನ್ನು ಮಾಡುತ್ತಲೇ ಇದ್ದರೆಂಬುದು ಗೊತ್ತಾಗುತ್ತದೆ. ಚಾಳುಕ್ಯರೂ ಪಲ್ಲವರೂ, ರಾಷ್ಟ್ರಕೂಟರೂ ಚಾಳುಕ್ಯರೂ, ಗಂಗರಸರೂ ರಾಷ್ಟ್ರಕೂಟರೂ, ಚೋಳರೂ ಗಂಗರಸರೂ, ರಾಷ್ಟ್ರಕೂಟರೂ ಪೂರ್ವಪಶ್ಚಿಮ ಚಾಳುಕ್ಯರೂ ರಣಾಂಗಣದಲ್ಲಿ ನಿಂತು ಒಂದೇ ಸಮನಾಗಿ ಕಾದಾಡುತ್ತಿದ್ದರು. ರಾಜರೂ ಸಾಮಂತರೂ, ಪ್ರಜಾಪ್ರಮುಖರೂ ತಮ್ಮ ಪ್ರಧಾನಾಯುಷ್ಯವನ್ನೆಲ್ಲ ಕೊಳ್ಗುಳಪ್ರಸಂಗದಲ್ಲೇ ಕಳೆಯುತ್ತಿದ್ದರು. ಆಗಿನಕಾಲದರಸರಿಗೆ ಕ್ಷಾತ್ರಪ್ರದರ್ಶನವೊಂದಲ್ಲದೆ ಮತ್ತಾವುದರಲ್ಲೂ ಹೆಚ್ಚು ಆಸಕ್ತಿಯಿರಲಿಲ್ಲ. ಪ್ರಜೆಗಳೂ ಪ್ರಭುವನ್ನೇ ಅನುಕರಿಸುತ್ತಿದ್ದರು. ತುರುಕರುಗಳನ್ನೂ, ಆಳರಸನ್ನೂ ಕಾಪಾಡುವುದರಲ್ಲೇ ನೂರಾರುಮಂದಿ ಶೂರರು ಇಂದ್ರಲೋಕವನ್ನು ಸೇರಿದರು. ಕನ್ನಡನಾಡಿನಲ್ಲಿ ಕಂಡುಬರುವ ಸಾವಿರಾರು ವೀರಗಲ್ಲುಗಳೇ ಇದಕ್ಕೆ ಸಾಕ್ಷಿ. ವೀರಮಾತೆಯರನೇಕರು ಸ್ವಸ್ವಾಮಿ ಸ್ವದೇಶ ಸಂರಕ್ಷಣೆಗಾಗಿ ತಮ್ಮ ಗಂಡಂದಿರನ್ನು, ಸೋದರರನ್ನು, ಬಂಧುಗಳನ್ನು ಅರ್ಪಿಸಿ ತಾವೂ ಆಕಾರ್ಯಸಾಧನೆಯಲ್ಲಿ ಪರಲೋಕವನ್ನು ಸೇರಿದರು. ಅಲ್ಲಲ್ಲಿ ನಮ್ಮ ಕನ್ನಡನಾಡಿನಲ್ಲಿ ಸಿಗುವ ಮಹಾಸತಿಯ ಕಲ್ಲುಗಳೇ ಈ ಅಂಶವನ್ನು ಘೋಷಿಸುತ್ತಲಿವೆ. ಆದಕಾರಣ ಆಗಿನ ಆಸ್ಥಾನಗಳಲ್ಲಿ ಕವಿಕರ್ಮಕ್ಕೆ ವೀರರಸವೇ ಪ್ರಧಾನರಸವಾಯಿತು. ಆ ಕಾಲದ ಕವಿಗಳನೇಕರು ತಾವರಿಯದೆಯೇ ತಮ್ಮ ಗ್ರಂಥಗಳಲ್ಲಿ ವೀರರಸವನ್ನು ಹೆಚ್ಚಾಗಿ ಪೋಷಿಸಿದರು. ಇದಕ್ಕೆ ಆಗಿನ ಕಾಲದ ರಾಜಕೀಯ ಸಾಂಘಿಕ ಸ್ಥಿತಿಯೇ ಕಾರಣ. 'ಕಾವ್ಯವು ಕವಿಯ ಕಾಲದ ಕನ್ನಡಿ' ಎಂಬ ಜಾಣ್ನುಡಿಯು ಈ ಕಾಲದ ಕಾವ್ಯಗಳಿಂದ ನಿಜವೆನಿಸುತ್ತದೆ.

**ಕವಿಗಳು** :—ಪಂಪ, ಪೊನ್ನ, ರನ್ನರು ಈ ಕಾಲದ ರತ್ನತ್ರಯಗಳು. ಸಾಹಿತ್ಯಸಾಮ್ರಾಜ್ಯಕ್ಕಾಗ ಅವರೇ ಸಮ್ರಾಜರು. ಪಂಪನು (೯೪೧) ಚಾಳುಕ್ಯಸಾಮಂತಶ್ರೇಷ್ಠನಾದ ಅರಿಕೇಸರಿಯ ಪೋಷಣೆಗೊಳಗಾಗಿ ಸಂಕ್ಷೇಪವಾಗಿ ಭಾರತವನ್ನು ಬರೆದು, ಅರ್ಜುನನನ್ನು ಅದರಲ್ಲಿ ನಾಯಕನನ್ನಾಗಿ ಮಾಡಿ, ತನ್ನಪೋಷಕನಾದ ಚಾಳು

ಕ್ಕ ಅರಿಕೇಸರಿಯನ್ನು ಅರ್ಜುನನಿಗೆ ಹೋಲಿರುವನು ; ಈ ಚಂಪೂ ಕಾವ್ಯಕ್ಕೆ ವಿಕ್ರಮಾರ್ಜುನವಿಜಯವೆಂದು ಹೆಸರು. ಪೊನ್ನನು (೯೫೦) ರಾಷ್ಟ್ರಕೂಟ ಮುಮ್ಮಡಿ ಕೃಷ್ಣನಿಂದ ಕವಿಚಕ್ರವರ್ತಿ ಯೆಂಬ ಬಿರುದನ್ನು ಪಡೆದನು. ಇವನು ಬರೆದ ರಾಮಕಥೆಗೆ 'ಭುವನೈಕ ರಾಮಾಭ್ಯುದಯ' ವೆಂದು ಹೆಸರು. ಆದರೆ ಈ ಕಾವ್ಯವು ನಮಗೆ ಸಿಕ್ಕಿಲ್ಲವಾಗಿ ಇದರ ವಿಚಾರವಾಗಿ ಹೆಚ್ಚು ಹೇಳಲು ಸಾಧ್ಯವಿಲ್ಲ. ರನ್ನನು (೯೯೩) ಬರೆದ ಗದಾಯುದ್ಧಕ್ಕೆ 'ಸಾಹಸಭೀಮವಿಜಯ' ವೆಂದು ಹೆಸರು. ಇವನು ತನ್ನೊಡೆಯನಾದ ಸತ್ಯಾಶ್ರಯನನ್ನು ಭೀಮನಿಗೆ ಹೋಲಿಸಿ ಈ ಚಂಪೂಕಾವ್ಯವನ್ನು ರಚಿಸಿದನು. ಗುಣವರ್ಮ (೯೦೦) ನೆಂಬೊಬ್ಬ ಕವಿಯು ಗಂಗರಾಜನೊರ್ವನನ್ನು ಮೃಚ್ಛಕಟಿಕಾ ಕರ್ತೃವಾಡ ಶೂದ್ರಕನಿಗೆ ಹೋಲಿಸಿ ಶೂದ್ರಕವೆಂಬ ಗ್ರಂಥವನ್ನು ಬರೆದನು. ಇದಕ್ಕೆ 'ಭುವನೈಕ ವೀರಚರಿತೆ' ಯೆಂದೂ ಹೆಸರಿದ್ದಂತೆ ಕಾಣಬರುತ್ತದೆ. ಶ್ರೀವಿಜಯ (೯೧೫) ನೆಂಬೊಬ್ಬ 'ಅನುಪಮಕವಿ' ಯು ರಾಷ್ಟ್ರಕೂಟ ಮುಮ್ಮಡಿ ಇಂದ್ರನ ದಂಡನಾಯಕನಾಗಿದ್ದನು. ಇವನ ಕಾವ್ಯಗಳು ನಮಗೆ ಸಿಕ್ಕಿಲ್ಲವಾದರೂ ಈ 'ಅರಿವಿಂಗೋಜನು' ರಚಿಸಿದ ಶಾಸನವೊಂದು ಸಿಕ್ಕಿದೆ. ಶಾಸನವೇ ಒಂದು ಪುಟ್ಟಕಾವ್ಯ ದಂತಿದೆ. 'ಸರ್ವವಿಕ್ರಮತುಂಗ' ನೆಂಬ ಹೆಸರಿನಿಂದವನ ಕವಿತೆಯ ರಸವು ಸ್ಪಷ್ಟವಾಗುತ್ತದೆ. ಸಂಧಿವಿಗ್ರಹಿ ದಾಮರಾಜನು (೧೦೮೫) ತ್ರಿಭುವನಮಲ್ಲನ (೧೦೭೬-೧೧೨೬) ಸಾಮಂತನಾದ ಗಂಗಪೆರ್ಮಾಡಿಯ ಆಶ್ರಯದಲ್ಲಿದ್ದ ಕವಿಯು. ಇವನು ಬರೆದೊಂದು ಶಾಸನದಿಂದಲೇ ಅವನ ಕವಿತೆಯು ವೀರರಸಭೂಯಿಷ್ಟವಾದುದೆಂದು ಕಾಣಬರುತ್ತದೆ. ರನ್ನನ ಗದಾಯುದ್ಧವನ್ನು ತಿದ್ದಿ ಬರೆದವನು ದಂಡನಾಯಕ ಕೇತಿ. ಇವನ ಕವಿತೆಯೂ ದಂಡನಾಯಕ ಶ್ರೀವಿಜಯನ ಕವಿತೆಯಂತೆಯೇ ಇದ್ದಿರಬಹುದೆಂದೂಹಿಸುವುದರಲ್ಲಿ ಬಾಧಕವೇನೂ ಇಲ್ಲ.

**ಪುರಾಣಗಳು** :—ಈ ಕಾಲವು ಜೈನಪುರಾಣಗಳಿಗೂ ಪ್ರಖ್ಯಾತವಾದುದು. ಪಂಪ, ಪೊನ್ನ, ರನ್ನರಿಗೆ 'ರತ್ನತ್ರಯ' ವೆಂದು

ಹೆಸರು. ಇವರು ಮೂವರೂ ಕ್ರಮವಾಗಿ ಆದಿಪುರಾಣ, ಶಾಂತಿ ಪುರಾಣ, ಅಜಿತಪುರಾಣಗಳನ್ನು ಬರೆದು ಜಿನಧರ್ಮಸಮುದ್ಧರಣರೆನಿಸಿದರು. ಇವೆಲ್ಲವೂ ಚಂಪೂ ಕಾವ್ಯಗಳು. ಚಾವುಂಡರಾಯನು (೯೭೮) ತ್ರಿಷಷ್ಟಿಲಕ್ಷಣ ಮಹಾಪುರಾಣವನ್ನು ಗದ್ಯದಲ್ಲಿ ಬರೆದನು. ಇದೇ ಕನ್ನಡದಲ್ಲಿ ಗದ್ಯಕ್ಕಾದಿಗ್ರಂಥ. ಈ ಕಾಲದಲ್ಲಿ ಗದ್ಯಕ್ಕೆ ಹೆಚ್ಚು ಶ್ರೇಷ್ಠತೆಯುಂಟಾಗದಿದ್ದರೂ, ಒಬ್ಬನಾದರೂ ಗದ್ಯಗ್ರಂಥ ರಚನೆಗೆ ಲಕ್ಷ್ಯಕೊಡದೆ ಹೋದರೂ, ಚಾಳುಕ್ಯ ರಾಷ್ಟ್ರಕೂಟರ ಶಾಸನಗಳನೇಕಗಳಲ್ಲಿ ಆ ಕಾಲದ ಗದ್ಯಶೈಲಿಯ ಲಕ್ಷಣವೂ, ಶಬ್ದಸಂಪತ್ತಿಯೂ ಕೊಂಚ ಮಟ್ಟಿಗೆ ತಿಳಿಯ ಬರುತ್ತದೆ.

**ಇತರ ಗ್ರಂಥಗಳೂ ಕವಿಗಳೂ** :—ಈ ಕಾಲದಲ್ಲಿ ಕಾವ್ಯ ಪುರಾಣಗಳನ್ನುಳಿದು ಬೇರೆ ಯಾವ ವಿಧವಾದ ಸಾಹಿತ್ಯ ಸ್ವರೂಪವೂ ಹೊರಬೀಳಲಿಲ್ಲವೆಂದಾಗಲಿ, ಜೈನರನ್ನುಳಿದು ಅನ್ಯಮತಾನುಯಾಯಿಗಳು ಕವಿಕರ್ಮವನ್ನು ಕೈಕೊಳ್ಳಲಿಲ್ಲವೆಂದಾಗಲಿ ಭಾವಿಸಲಾಗದು. ನೃಪತುಂಗ (೮೧೫) ನಾಗವರ್ಮ (೯೯೦) ದಿ ಲಾಕ್ಷಣಿಕರು ಕವಿರಾಜಮಾರ್ಗ, ಛಂದೋಂಬುಧಿಗಳನ್ನು ರಚಿಸಿದರು. ವಿಜ್ಞಾನಶಾಸ್ತ್ರವೇತ್ತರಾದ ಜಯಬಂಧುನಂದನ (ಸು. ೮೦೦) ಚಂದ್ರರಾಜ (೧೦೨೫) ರು ಕ್ರಮವಾಗಿ ಸೂಪಶಾಸ್ತ್ರ, ಮದನತಿಲಕಗಳನ್ನು ರಚಿಸಿದರು. ರವಿನಾಗಭಟ್ಟ (೯೭೫) ನಾಗವರ್ಮಾಚಾರ್ಯ (೧೦೭೦) ಕರ್ಣರಸ (೧೦೮೪) ದಿವಾಕರ (ಸು. ೭೩೪) ನಾರಾಯಣಭಟ್ಟ (೧೦೬೩) ಕವಿಕಮಲಾದಿತ್ಯ (೯೮೦) ಮುಂತಾದ ಬ್ರಾಹ್ಮಣ ಕವಿಗಳೂ ಜೈನಕವಿಗಳೊಡನಾಡಿಗಳಾಗಿ ಕರ್ಣಾಟಕ ಸಾಹಿತ್ಯ ಸೇವೆಯನ್ನು ಮಾಡಿದರು.

**ಕಡೆನುಡಿ** :—ಮೇಲಿನ ಸಂಕ್ಷೇಪ ಪರೀಕ್ಷಣದಿಂದ ೧೦-೧೧ನೆಯ ಶತಮಾನದ ಕರ್ಣಾಟಕ ಸಾಹಿತ್ಯ ಲಕ್ಷಣಗಳನ್ನನುಸರಿಸಿ 'ಕ್ಷಾತ್ರಯುಗ'ವೆಂದು ಕಾವಿಟ್ಟ ಹೆಸರು ಈ ಕಾಲಕ್ಕೆ ಕೊಂಚ ಮಟ್ಟಿಗೆ ಒಪ್ಪುತ್ತದೆ. ಈ ಕಾಲದ ಕಾವ್ಯಗಳಲ್ಲಿ ವೀರರಸವೇ ಪ್ರಧಾನವೆಂಬುದು ನಿಶ್ಚಯವಾಯಿತು. ಹೆಚ್ಚಾಗಿ ಜೈನರೇ ಈ ಕಾಲದಲ್ಲಿ ಗ್ರಂಥ ರಚನೆಯನ್ನು ಮಾಡಿದರೂ ಈ ವಿಚಾರದಲ್ಲಿ ಬ್ರಾಹ್ಮಣರೂ ಹಿಂದುಳಿ

ದಿರಲಿಲ್ಲವೆಂದು ತಿಳಿದೆವು. ಕಾವ್ಯಪುರಾಣಗಳಷ್ಟೇ ಅಲ್ಲದೆ ಇತರ ಸಾಹಿತ್ಯಸ್ವರೂಪಗಳೂ ಹುಟ್ಟಿದವೆಂಬುದನ್ನರಿತೆವು. ಚಂಪೂ ಶೈಲಿಯೇ ಈ ಕಾಲದ ಪ್ರಮುಖ ಲಕ್ಷಣವೆಂಬುದನ್ನು ಗ್ರಹಿಸಿದ್ದಾಯಿತು. ಕನ್ನಡಗದ್ಯವು ಆ ಕಾಲದ ಶಾಸನಗಳಲ್ಲಿ ಒಳಗೊಳಗೇ ಒಂದು ವಿಧವಾದ ಸರಣಿಯನ್ನು ವೃದ್ಧಿಪಡಿಸಿಕೊಳ್ಳುತ್ತಿತ್ತೆಂದು ಗೊತ್ತಾಯಿತು.

ಈ ಕಾಲದ ಸಾಹಿತ್ಯದಿಂದ ಅರಸರೂ, ಪ್ರಮುಖರೂ ಸುಖಲೋಲುಪರಾಗದೆ ಪ್ರಜಾಸುಖಾಭಿಲಾಷಿಗಳಾಗಿದ್ದರೆಂದೂ, ಜನರು ಜಾತಿಮತ ದ್ವೇಷಾಸೂಯೆಗಳಲ್ಲಿ ನಿರತರಾಗದೆ ಪರಮತ ಸಹಿಷ್ಣುತೆಯುಳ್ಳೂ, ಸಹಾನುಭೂತಿಯುಳ್ಳೂ ಮಾರ್ಗದರ್ಶಿಗಳಾಗಿದ್ದರೆಂದೂ ತಿಳಿದು ಬರುತ್ತದೆ. ಹೆಚ್ಚೇಕೆ ಈ ಯುಗದ ಸಾಹಿತ್ಯವು ಸ್ಫೂರ್ತಿದಾಯಕವಾದುದು ; ಜೀವಕಳೆಯಿಂದ ತುಂಬಿದುದು ; ಪವಿತ್ರವಾದುದು; ಪ್ರತಿಭಾಸೂಚಕವಾದುದು.

## ಮತಪ್ರಚಾರಕ ಯುಗ

(೧೨ ರಿಂದ ೧೬ ನೆಯ ಶತಮಾನದ ವರೆಗೆ)

**ಕಾಲವಿಶೇಷ** :—ವೈದಿಕಧರ್ಮವು ಜೈನಧರ್ಮವನ್ನೆದುರಿಸಿದ ಕಾಲವಿದು. ನಾಸ್ತಿಕ ಮತ ಪ್ರಾಬಲ್ಯವನ್ನು ನಾಶಮಾಡಲು ಪ್ರತಿಜ್ಞೆಮಾಡಿ, ಒಂದರಹಿಂದೊಂದು ಹೊಸ ಹುರುಪಿನಿಂದೆದ್ದ ಆಸ್ತಿಕಮತ ಚಲನಗಳ ಯುಗವಿದು. ರಾಮಾನುಜಾಚಾರ್ಯ, ಬಸವೇಶ್ವರ, ಮಧ್ವಾಚಾರ್ಯ, ವಿದ್ಯಾರಣ್ಯರ ಜನನ, ಸಾಹಸಕಾರ್ಯಗಳು ಕರ್ಣಾಟಕದಲ್ಲೊಂದು ಹೊಸ ವಾತಾವರಣವನ್ನು ಕಲ್ಪಿಸಿದುವು. ಜನರಲ್ಲಿ ಹೊಸ ಹೊಸ ಭಾವನೆಗಳನ್ನೂ, ಆಶೆಗಳನ್ನೂ ಹುಟ್ಟಿಸಿದುವು. ಧಾರ್ಮಿಕ ಪ್ರಪಂಚದಲ್ಲೊಂದು ಪ್ರಳಯವಾಯಿತು ; ನೂತನ ಸೃಷ್ಟಿಗೆ ಬೇಕಾದ ಉತ್ಸಾಹ, ಚೈತನ್ಯ, ಶ್ರದ್ಧಾಭಕ್ತಿ ಮುಂತಾದ ಗುಣಗಳು ಜನರಲ್ಲಿ ಮೂಡಿದುವು. ಈ ಗುಣಗಳೊಂದಿಗೆ ಸಾಮಾನ್ಯ ಜನರಲ್ಲಿ, ಸಾಧಾರಣವಾಗಿ ಇಂತಹ ಸಂಘಟನೆಗಳಲ್ಲಿ ಕಾಣಬರುವ ಅನ್ಯಮತ ದ್ವೇಷವೂ, ಪರಮತ ಅವಹೇಳನಾಭಾವವೂ ಜನಸಾಮಾನ್ಯದಲ್ಲುಂ

ಟಾಯಿತು. ಒಬ್ಬೊಬ್ಬ ಮತಾನುಯಾಯಿಯೂ ತನ್ನ ಮತಪ್ರಚಾರ ಕಾರ್ಯದಲ್ಲಿ ನಿರತನಾದಕಾರಣ ಜನಾಂಗದ ಉಚ್ಚಭಾವನೆಗಳಿಗೆ ಕೊಂಚಲೋಪ ಬಂತು. ಜೈನಮತವ್ಸೂರಿದ್ದ ಬೇರನ್ನು ಕೀಳಬೇಕೆಂಬುದೇ ಆಸ್ತಿಕಮತ ಚಲನಧ್ಯೇಯವಾಗಿತ್ತು. ಆ ಕೆಲಸವು ಆಗುತ್ತ ಬರಲು ಆಸ್ತಿಕ ಮತಗಳಲ್ಲೇ ವಿದ್ವೇಷವುಂಟಾಯಿತು. ವೈಷ್ಣವರಿಗೂ ಶೈವರಿಗೂ ಕಲಹಕ್ಕಾರಂಭವಾಯಿತು. ೧೪ ನೆಯ ಶತಮಾನದಲ್ಲಿ ಮತ್ತೆ ವೈಧಿಕ ಧರ್ಮಾಚರಣೆಗೇ ಲೋಪ ಬರುವ ಸನ್ನಿವೇಶವೊದಗಲು ವಿದ್ಯಾರಣ್ಯರು ಹುಟ್ಟಿ ಮತ್ತೆ ವೈದಿಕ ಮತೋದ್ಧಾರವನ್ನು ಮಾಡಿದರು. ಆದರೆ ಯುಗವೆಲ್ಲ ಧಾರ್ಮಿಕ ಚಲನೆಗಳಿಂದಲೂ, ಮತಪ್ರಚಾರದಿಂದಲೂ ತುಂಬಿಹೋಗಿತ್ತು. ಈ ಕಾಲವೈಪರೀತ್ಯ ವಿಶೇಷಗಳೆಲ್ಲವೂ ಈ ಕಾಲದ ಕಾವ್ಯಗಳಲ್ಲಿ ಪ್ರತಿಬಿಂಬಿತವಾಗಿವೆ. ಈ ಕಾಲದ ಸಾಹಿತ್ಯದಲ್ಲಿ ಕಂಡು ಬರುವ ವಿಶೇಷಗಳನ್ನು ಸ್ಥೂಲವಾಗಿ ಹೀಗೆ ವಿಭಜಿಸಬಹುದು:

(ಅ) ಜೈನರೂ, ವೀರಶೈವರೂ, ಬ್ರಾಹ್ಮಣರೂ ತಮ್ಮ ತಮ್ಮ ಮತದ ಮೇಲ್ಮೆಯನ್ನು ತೋರ್ಪಡಿಸುವುದಕ್ಕಾಗಿಯೂ, ಮತತತ್ವಗಳನ್ನು ಜನರಿಗೆ ಬೋಧಿಸಿ ಪ್ರಚಾರಪಡಿಸುವುದಕ್ಕಾಗಿಯೂ ಅನೇಕ ಪುರಾಣಗಳನ್ನೂ, ಕಾವ್ಯಗಳನ್ನೂ ಬರೆದರು;

(ಇ) ಈ ಕಾಲದ ಗ್ರಂಥಗಳಲ್ಲಿ ಒಂದು ಮತದ ಉತ್ಕೃಷ್ಟತೆಯನ್ನು ತೋರಿಸುವುದು ಮಾತ್ರವೇ ಅಲ್ಲದೆ ಪರಮತ ದೂಷಣವನ್ನು ಮಾಡುವುದೂ ಒಂದು ಲಕ್ಷಣವಾಗಿದೆ;

(ಉ) ಪ್ರಭುಗಳಲ್ಲೂ ಪ್ರಜೆಗಳಲ್ಲೂ ಭೋಗಪರಾಯಣತೆಯು ಕೊಂಚ ಹೆಚ್ಚಿತು. ಆದಕಾರಣ ಕಾಲದ ನೀತಿಯ ನಡತೆಯೇ ಬದಲಾಯಿಸಿತು., ಕಾವ್ಯಗಳಲ್ಲಿ ಶೃಂಗಾರರಸವೇ ಪ್ರಧಾನವಾಯಿತು ;

(ಎ) ಕ್ಷಾತ್ರಯುಗವನ್ನು ವಿವರಿಸುವ, ಪ್ರತಿಭಾಸೂಚಕವಾದ ಕಾವ್ಯಗಳಾವುವೂ ಹುಟ್ಟಲಿಲ್ಲವಾದರೂ ಕಾವ್ಯರಚನಾ

ಕ್ರಮದಲ್ಲೂ ಸಾಹಿತ್ಯ ಸ್ವರೂಪದಲ್ಲೂ ಹೊಸ ಹೊಸ ಮಾರ್ಗಗಳು ಅಲ್ಲಲ್ಲಿ ಕಾಣಬರುತ್ತವೆ ;

(೬) ವಚನ ಷಟ್ಪದಿಗಳೇ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಈ ಯುಗದ ನೂತನ ಸೃಷ್ಟಿಯು. ಇದೇ ಈ ಕಾಲದ ಸಾಹಿತ್ಯದ ವೈಶಿಷ್ಟ್ಯವು. ಪದ್ಯಕವಿತೆಗೆ ಜೈನರಾದಿ ಕವಿಗಳಾದರೆ ಗದ್ಯಕವಿತೆಗೆ ವೀರಶೈವರಾದಿ ಕವಿಗಳು.

**ಕವಿತಾವಿಶೇಷ** :—ಆಸ್ತಿಕಮತ ವಿರೋಧದಿಂದ ಜೈನಮತ ದುರ್ಗಾಲಕ್ಕೆ ಭಂಗಬರುತ್ತಿರಲು, ಈ ವಿಪತ್ತಿನಿಂದ ಪಾರಾಗಲು ಜೈನರು ತಮ್ಮ ಶಕ್ತಿಯನ್ನೆಲ್ಲ ಜೈನಮತೋದ್ಧರಣ ಕಾರ್ಯದಲ್ಲಿ ವಿನಿಯೋಗಿಸಿದರು. ಕ್ಷಾತ್ರಯುಗಕ್ಕಿಂತಲೂ ಅಧಿಕವಾಗಿ ಜೈನ ಕವಿಗಳು ಗ್ರಂಥರಚನೆಯನ್ನುಮಾಡಿದರು. ಜೈನತೀರ್ಥಂಕರರ ಪುರಾಣಗಳು ನೂರಾರು ಹುಟ್ಟಿದುವು. ಆ ಪುರಾಣಲೇಖರನ್ನೆಲ್ಲ ವಿಸ್ತರಿಸಿ ಬರೆಯಲು ಇಲ್ಲಿ ಅವಕಾಶವಿಲ್ಲ. ಅಂತಹ ಪುರಾಣಲೇಖರಲ್ಲಿ ರಾಮಚಂದ್ರಚರಿತ ಪುರಾಣಕರ್ತನಾದ ನಾಗಚಂದ್ರನೂ (೧೧೦೫) ಚಂದ್ರಪ್ರಭಾಪುರಾಣ ಕರ್ತೃವಾದ ಅಗ್ಗಳನೂ (೧೧೮೯) ನೇಮಿನಾಥ ಪುರಾಣವನ್ನು ಬರೆದ ಕರ್ಣಪಾರ್ಯನೂ (೧೧೪೦) ಅನಂತನಾಥ ಪುರಾಣವನ್ನು ರಚಿಸಿದ ಜನ್ನನೂ (೧೨೦೯) ಪುಷ್ಪದಂತ ಪುರಾಣವನ್ನು ಬರೆದ ಇಮ್ಮಡಿ ಗುಣವರ್ಮನೂ (೧೨೩೫) ಧರ್ಮನಾಥ ಪುರಾಣವನ್ನು ಬರೆದ ಮಧುರನೂ (೧೩೮೫) ಜೈನರಲ್ಲಿ ಮುಖ್ಯರು. ಜಗನ್ನಾಥವಿಜಯದ ರುದ್ರಭಟ್ಟ (೧೧೮೦) ಪರಿಚಾರಿತ್ರದ ಪೋಲಾಳ್ವ (೧೨೨೪) ಕೃಷ್ಣಲೀಲಾ, ರಾಮಾಯಣ ಗ್ರಂಥಕರ್ತೃವಾದ ಕವಿ ಲಕ್ಷ್ಮೀಧರ (೧೪೧೦) ಭಾರತದ ಕುಮಾರವ್ಯಾಸ (೧೪೩೦)ರಾಮಾಯಣದ ಕುಮಾರವಾಲ್ಮೀಕಿ (೧೫೦೦) ಮೊದಲಾದವರು ಪ್ರಮುಖ ಬ್ರಾಹ್ಮಣಕವಿಗಳು. ಹರಿಹರ (೧೧೬೫) ರಾಘವಾಂಕ(೧೧೬೫) ಸಿದ್ಧರಾಮ (೧೧೬೦) ಕೊಂಡಗೂಳಿ ಕೇಶಿರಾಜ (೧೧೬೦) ಮಲ್ಲಿಕಾರ್ಜುನಪಂಡಿತ (೧೧೬೦ ಚಕ್ರಪಾಣಿರಂಗನಾಥ (೧೧೯೫) ಲಕ್ಕಣ್ಣದಂಡೇಶ (೧೪೨೮) ಚಾಮರಸ (೧೪೩೦) ಮಗ್ಗೆಯಮಾಯಿದೇವ

(೧೪೩೦) ಗುಬ್ಬಿಯ ಮಲ್ಲಣ್ಣ (೧೪೭೫) ನೀಲಕಂಠಾಚಾರ್ಯ(೧೪೮೫) ಮುಂತಾದ ನೂರಾರು ಲೇಖಕರು ಈ ಕಾಲದ ಪ್ರಧಾನ ವೀರಶೈವ ಲೇಖಕರು. ಅಲ್ಲದೆ ನೂರಾರು ವಚನಕಾರರುಂಟು. ಇದರಿಂದ ಮತಪ್ರಚಾರಕಾರ್ಯವು ಎಷ್ಟು ಹುರುಪಿನಿಂದಲೂ, ಚುರುಕಿನಿಂದಲೂ ನಡೆಯಿತೆಂಬುದು ವಿಶದವಾಗುತ್ತದೆ.

ಸ್ವಮತೋತ್ಕೃಷ್ಟ ಪ್ರದರ್ಶನದೊಂದಿಗೆ ಪರಮತನಿಂದೆಯೂ ಈಕಾಲದ ಕಾವ್ಯಗಳಲ್ಲಿ ಸೇರಿ ಕವಿಗಳ ಮನೋನೈರ್ಮಲ್ಯಕ್ಕೆ ಕೊಂಚ ಕಳಂಕವನ್ನು ತಂದಿತು. ಇದಕ್ಕೆ ನಯಸೇನನ (೧೧೧೨) ಧರ್ಮಾಮೃತವೂ, ಬ್ರಹ್ಮಶಿವನ (೧೧೨೫) ಸಮಯ ಪರೀಕ್ಷೆಯೂ, ವೃತ್ತವಿಲಾಸನ (೧೧೬೦) ಧರ್ಮಪರೀಕ್ಷೆಯೂ, ರಾಘವಾಂಕನ(೧೧೬೫) ಹರಿಶ್ಚಂದ್ರಕಾವ್ಯವೂ ಉತ್ತಮವಾದ ಉದಾಹರಣೆಗಳು. ಜೈನಕವಿಗಳಿಗೂ, ವೀರಶೈವಕವಿಗಳೂ ಇದ್ದ ಬದ್ಧದ್ವೇಷವು ಬ್ರಾಹ್ಮಣಕವಿಗಳಿಗೂ ಜೈನವೀರಶೈವಕವಿಗಳಿಗೂ ಇರಲಿಲ್ಲ. ಅಂತೂ ಈ ಯುಗದ ಸಾಹಿತ್ಯದಲ್ಲಿ ಕಾಣಬರುವ ರಾಗದ್ವೇಷಗಳು ಜನಾಂಗದ ಅವನತಿಯ ಸೂಚನೆಗಳೆಂದೇ ಹೇಳಬೇಕು.

ಈ ಅವನತಿಯ ಚಿಹ್ನೆಗಳನ್ನು ಮತ್ತೊಂದು ರೂಪದಲ್ಲಿ ಈಕಾಲದ ಸಾಹಿತ್ಯದಲ್ಲೇ ಕಾಣಬಹುದು. ಹಿಂದಿನ ಯುಗದಲ್ಲಿ ಪ್ರಭುಗಳೂ ಪ್ರಜೆಗಳೂ ಕಷ್ಟಸಹಿಷ್ಣುಗಳಾಗಿಯೂ, ಮುಕ್ತಿಪ್ರಾಪ್ತಿಯಲ್ಲಿ ಲಕ್ಷ್ಯವನ್ನುಳ್ಳವರಾಗಿಯೂ ಇದ್ದರೆಂದೂ, ಈ ಗುಣಗಳು ಆ ಕಾಲದ ಸಾಹಿತ್ಯದಲ್ಲಿ ವೀರರಸದಲ್ಲಿ ಪರಿಣಮಿಸಿತೆಂದೂ ತಿಳಿದೆವು. ಈ ಯುಗದಲ್ಲಾದರೋ ದೇಶದಲ್ಲಿ ಶಾಂತಿಯೂ, ಸಂಪತ್ತೂ, ಸುಖವೂ ಹೆಚ್ಚಿದಂತೆಲ್ಲ ಪ್ರಭುಗಳೂ ಪ್ರಜೆಗಳೂ ಸುಖಲೋಲುಪರಾದರು. ಜನರ ನೀತಿಯಲ್ಲಿ ಪತನವು ಕಾಣಬಂತು. ಆದಕಾರಣ ಈ ಕಾಲದ ಅನೇಕ ಕಾವ್ಯಗಳಲ್ಲಿ ಶೃಂಗಾರರಸವೇ ಪ್ರಧಾನವಾಗಿ ಕಾಣಬರುತ್ತದೆ. ನೇಮಿಚಂದ್ರನ (೧೧೭೦) ಲೀಲಾವತಿ, ಕವಿಕಾಮನ (೧೨೦೦) ಸ್ತನಶತಕ, ಜನ್ನನ (೧೨೦೬) ಸ್ಮರತಂತ್ರ, ಆಂಡಯ್ಯನ (೧೨೩೫) ಮದನವಿಜಯ ಇವುಗಳಿಂದೇನು ಸ್ಫುರಿಸುತ್ತದೆ? ಮದನತಿಲಕ, ಶೃಂಗಾ

ರಕಾವ್ಯ, ಶೃಂಗಾರಸಾರ, ಸೊಬಗಿನಸೋನೆ, ಅಮರುಕ ಮೊದಲಾದ ಗ್ರಂಥಗಳೇ ಈ ಕಾಲದ ನೈತಿಕಸ್ಥಿತಿಯನ್ನು ಪ್ರತಿಬಿಂಬಿಸುವ ಕನ್ನಡಿಗಳಲ್ಲವೆ?

ಆದರೆ ಸಾಹಿತ್ಯ ದೃಷ್ಟಿಯಿಂದ ಕ್ಷಾತ್ರಯುಗವನ್ನು ಮೀರಿಸಲಾರದೆ ಹೋದರೂ ಸಾಹಿತ್ಯದ ಬೆಳವಳಿಕೆಯಲ್ಲಿ ಈ ಯುಗವು ಹೊಸದಾರಿಗಳನ್ನು ಹಾಕಿತು. ಬಿಕ್ಕಟ್ಟೂ, ದೀರ್ಘಸಮಾಸಯುಕ್ತವೂ ಆದ ಚಂಪೂ ಕಾವ್ಯಗಳಿಗೆ ಬದಲಾಗಿ ಸುಲಭವೂ, ಸರಳವೂ ಆದ ಷಟ್ಪದಿ, ಸಾಂಗತ್ಯ, ವಚನ ಗ್ರಂಥಗಳು ತಲೆ ಹಾಕಿದುವು. 'ವಚನ' ವೇ ಈ ಕಾಲದ ಸಾಹಿತ್ಯಕ್ಕೆ ಜೀವವು. ಇದೇ ವೀರಶೈವರು ಕನ್ನಡ ಸಾಹಿತ್ಯಕ್ಕೆ ಮಾಡಿದ ಶಾಶ್ವತವೂ ಸ್ತೋತ್ರಾರ್ಹವೂ ಆದ ಸೇವೆಯು. ಕಾದಂಬರಿ, ಪ್ರಬಂಧ, ಶತಕ, ಕೀರ್ತನೆ ಮೊದಲಾದ ನೂತನ ಸಾಹಿತ್ಯಸ್ವರೂಪಗಳೂ ಈ ಕಾಲದಲ್ಲಿ ಹುಟ್ಟಿದುವು. ಮುಂದಿನ ಸಾರ್ವಜನಿಕ ಯುಗದ 'ಹಾಡುಗಬ್ಬ' ಗಳಿಗೆ ಈ ಯುಗದ ಸಾಹಿತ್ಯವು ಪ್ರಥಮ ಸೋಪಾನವಾಯಿತು.

ಇದೇ ಯುಗದಲ್ಲೇ ನಾಗವರ್ಮ, ಮಲ್ಲಿಕಾರ್ಜುನ, ಕೇಶಿರಾಜ, ರುದ್ರಭಟ್ಟ, ಉದಯಾದಿತ್ಯ, ಈಶ್ವರ, ಮಾಧವ ಮುಂತಾದ ಲಾಕ್ಷಣಿಕರು ಜನ್ಮಧಾರಣನ್ನು ಮಾಡಿದರು. ಗಣಿತಶಾಸ್ತ್ರ, ವೈದ್ಯಶಾಸ್ತ್ರ, ಸೂಪಶಾಸ್ತ್ರ ಮುಂತಾದ ಶಾಸ್ತ್ರಗ್ರಂಥಗಳು ಹುಟ್ಟಿದುವು. ಈ ಕಾಲದ ಸಾಹಿತ್ಯವು ಗುಣ ಮತ್ತು ಶ್ರೇಷ್ಠತೆಯಲ್ಲಿ ಇಲ್ಲವಾದರೂ ಪರಿಮಾಣ ಮತ್ತು ವ್ಯಾಪ್ತಿದೃಷ್ಟಿಯಿಂದ ಸಾರ್ವಜನಿಕಯುಗ ಕ್ಷಾತ್ರಯುಗಗಳನ್ನು ಮೀರಿಸಿರುತ್ತದೆ.

## ೧೬ ರಿಂದ ೧೯ ನೆಯ ಶತಮಾನದವರಿಗೆ

**ರಾಜಕೀಯಸ್ಥಿತಿ**:—ಈ ಯುಗದಲ್ಲಿ ಕರ್ಣಾಟಕ ದೇಶದಲ್ಲೆಲ್ಲ ಅನಾಯಕವುಂಟಾಗಿತ್ತು. ಆಂತರಿಕವಾದ ಅನೈತಿಕ ವ್ಯಾಧಿಯಿಂದಲೂ, ಬಾಹ್ಯವಾದ ಪರದೇಶೀಯ ಸಂಸ್ಕೃತಿಯ ವಾತಾಹತಿಯಿಂದಲೂ ಪೆಟ್ಟುತಿಂದು ವಿಜಯನಗರ ಸಾಮ್ರಾಜ್ಯವು ಒಡೆದು

ಚೂರುಚೂರಾಯಿತು. ಕೋಟೆಕೋಟೆಗೂ ನಾಯಕರಾದರು ; ಊರೂರಿಗೂ ಪಾಳೆಯಗಾರರಾದರು. ಮರಾಠಾಸರದಾರರೂ ಪೇಷ್ವೆಗಳೂ ಒಂದು ಕಡೆ, ಮಹಮ್ಮದೀಯ ನವಾಬರೂ ಸುಲ್ತಾನರೂ ಸುಭಾದಾರರೂ ಒಂದು ಕಡೆ ದೇಶದಲ್ಲೆಲ್ಲ ದಾಂಧಲೆಯನ್ನುಂಟು ಮಾಡುತ್ತ ಬಂದರು. ಈ ಮಧ್ಯೆ ಫ್ರೆಂಚರೂ, ಇಂಗ್ಲೀಷರೂ ಮುಂತಾದ ಪರದೇಶೀಯ ವ್ಯಾಪಾರಿಗಳು ತಮ್ಮ ಸಂಧಾನ ಚಾತುರ್ಯದಿಂದ ದಕ್ಷಿಣದೇಶದ ರಾಜಕೀಯ ವ್ಯವಹಾರಗಳಿಗೆ ಕೈ ಹಾಕಿ ಅನೇಕ ರಾಜರನ್ನೂ, ನಾಯಕರನ್ನೂ, ನವಾಬರನ್ನೂ, ಸುಲ್ತಾನರನ್ನೂ ಸೂತ್ರದಗೊಂಬೆಗಳಂತೆ ಆಡಿಸಿ, ಒಬ್ಬರಮೇಲೊಬ್ಬರನ್ನೆತ್ತಿಹಾಕಿ, ತಮ್ಮಿರುವಿಕೆಯನ್ನು ಭದ್ರಪಡಿಸಿಕೊಂಡರು. ದೇಶೀಯರಲ್ಲಿ ರಾಜಕೀಯ ಉಚ್ಚಭಾವನೆಯ ಚಿಹ್ನೆಗಳಾವುವೂ ಕಾಣಬರಲಿಲ್ಲ.

**ಸಮಾಜಸ್ಥಿತಿ** :—ಆಗಿನ ಸಮಾಜದಲ್ಲಿ ಜೀವವಿರಲಿಲ್ಲ. ಪೌರುಷವಿರಲಿಲ್ಲವೆಂದರೆ ಅದು ಸುಳ್ಳಾಗಲಾರದು. ಅಲ್ಲಲ್ಲಿ ಒಬ್ಬೊಬ್ಬ ಪುರುಷನನ್ನೂ, ಸಜೀವಿಯನ್ನೂ ನೋಡಬಹುದಾಗಿತ್ತು. ಅಷ್ಟಲ್ಲದೆ ಅನ್ಯಥಾ ಇಲ್ಲ. ಸಮಾಜಗೌರವದಲ್ಲಿ, ಸಮಾಜನೀತಿಯಲ್ಲಿ, ಸಮಾಜ ವ್ಯವಸ್ಥೆಯಲ್ಲಿ ಉನ್ನತಶಿಖರವನ್ನೇರಿದ್ದ ದೇಶೀಯರು ಅಧಃಪಾತಾಳಕ್ಕೆ ಬಿದ್ದರು. ತಮ್ಮ ಮನೆಗಳನ್ನು ನೆಟ್ಟಗಿಡಲು ತಾವು ಅಶಕ್ತರೆಂದೂ ಅಯೋಗ್ಯರೆಂದೂ ಲೋಕಕ್ಕೆ ಸಾರಿದರು. ಕುರುಡು ಮತಾಭಿಮಾನವೂ, ಅಂಧ ಶ್ರದ್ಧೆಯೂ, ದುರಾಚಾರಗಳೂ ಸಮಾಜದಲ್ಲಿ ಹೊಕ್ಕು ಸ್ವಾತಂತ್ರ್ಯಚಲನೆಗೂ, ವೃದ್ಧಿವಿಕಾಸಕ್ಕೂ ಆತಂಕವನ್ನುಂಟುಮಾಡಿದುವು.

**ಧಾರ್ಮಿಕಸ್ಥಿತಿ** :—ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ, ದ್ವೈತ ಇವುಗಳ ಸಂಪೂರ್ಣತತ್ವವು ಜನಸಾಮಾನ್ಯದ ತಲೆಗೆ ಹತ್ತಲಿಲ್ಲ. ಜ್ಞಾನಮಾರ್ಗವೂ, ಯೋಗಾಭ್ಯಾಸವೂ ಪಾಮರರ ಉನ್ನತಿಗೆ ಪರಿವರ್ತನೆಗೆ ಸುಲಭಮಾರ್ಗಗಳಾಗಿ ಕಾಣಬರಲಿಲ್ಲ. ಆದಕಾರಣ ಸಮಾಜದ ಉನ್ನತಿಗೆ ಸುಲಭವಾದಮಾರ್ಗವನ್ನು ತೋರಿಸಿ ಧರ್ಮವನ್ನು

ಸಾರ್ವಜನಿಕವಾಗಿ ಮಾಡುವ ಸದುದ್ದೇಶ್ಯದಿಂದ ಮಧ್ವಹರಿದಾಸರು ದುಯಿಸಿದರು. ಸುಲಭವೂ, ಶುದ್ಧವೂ, ಶುಷ್ಕವೇದಾಂತರಹಿತವೂ, ಭಾವೋತ್ತೇಜಕವೂ ಆದ ಭಕ್ತಿಮಾರ್ಗವನ್ನು ಜನರಿಗೆ ಬೋಧಿಸುತ್ತ ಬಂದರು. ಅತ್ಯಲ್ಪಕಾಲದಲ್ಲೇ ಪುರಂದರ, ಕನಕ ಮೊದಲಾದ ದಾಸಶ್ರೇಷ್ಠರು ಅವನತಿಯ ಜಾರುಗಲ್ಲಿನ ಮೇಲೆ ವೇಗವಾಗಿ ಉರುಳುತ್ತಲಿದ್ದ ಸಮಾಜವನ್ನು 'ಪತನ'ದಿಂದುದ್ಧರಿಸಿದರು. ಎಲ್ಲಮತಾನುಯಾಯಿಗಳಲ್ಲೂ ಭಕ್ತಿಮಾರ್ಗಕ್ಕೇ ಶ್ರೇಷ್ಠಸ್ಥಾನವು ಸಿಕ್ಕಿತು.

**ಸಾಹಿತ್ಯವಿಶೇಷ:**—ಹಿಂದಿನ ಯುಗಗಳೆರಡರಲ್ಲೂ ಸೃಷ್ಟಿಯು 'ರಾಜರ' ಅಥವಾ 'ವಿದ್ಯಾಪಕ್ಷಪಾತಿ'ಗಳ ಸುತ್ತಮುತ್ತಲೂ ಆಗುತ್ತಲಿತ್ತು. ಆ ಕಾರಣದಿಂದ ಜನಸಾಮಾನ್ಯಕ್ಕೂ ಸಾಹಿತ್ಯಕ್ಕೂ ಸಾಮೀಪ್ಯಸಂಬಂಧವಿರಲಿಲ್ಲ. ಎರಡನೆಯ ಯುಗದಲ್ಲಿ ಈ ಸಂಬಂಧವು ಕೊಂಚ ಹೆಚ್ಚಿತು. ಈ ಯುಗದಲ್ಲಾದರೋ ರಾಜಕೀಯ, ಸಾಂಘಿಕ, ಧಾರ್ಮಿಕ ಪರಿಸ್ಥಿತಿಗಳಿಂದ ಜನಸಾಮಾನ್ಯದಲ್ಲಿ ಒಂದು ಬಗೆಯ ಬದಲಾವಣೆಯುಂಟಾಯಿತು. ಅದರಲ್ಲೂ ವೈಷ್ಣವ ಪುರಾಣಗಳಿಂದಲೂ ಕವಿಸಂತರ ಭಕ್ತಿಸಂದೇಶಗಳಿಂದಲೂ ಎಲ್ಲರಲ್ಲೂ ವಿದ್ಯುತ್ಪ್ರಭಾವವುಂಟಾಯಿತು. ನೂರಾರು ಕವಿಗಳು, ರಾಜರಿಗಲ್ಲ, ತಮ್ಮ ಪೋಷಕರಿಗಲ್ಲ, ಸಮಾಜಕ್ಕೆ, ದೇಶಕ್ಕೆ ನೂರಾರು ಗ್ರಂಥಗಳನ್ನು ಬರೆದರು. ಜನಸಾಮಾನ್ಯಕ್ಕಾಗಿ ಈ ಕಾಲದ ಕವಿಗಳು ಬರೆದರಾದ ಕಾರಣ ಸುಲಭವಾದ, ಸರಳವಾದ ಸರಣಿಯನ್ನನುಸರಿಸಿದರು. 'ಹಾಡುಗಬ್ಬಗಳಸುಗ್ಗಿ'ಯೆನ್ನಬಹುದಾದೀಯುಗದಲ್ಲಿ ಸಾಂಗತ್ಯ, ರಗಳೆ, ದ್ವಿಪದಿ, ತ್ರಿಪದಿ, ಕೀರ್ತನೆ, ಯಕ್ಷಗಾನ ಮೊದಲಾದ ಸಾಹಿತ್ಯ ವಿಶೇಷಗಳು ಹುಟ್ಟಿದುವು. ಜನಸಾಮಾನ್ಯದಲ್ಲಿ ಜ್ಞಾನವನ್ನು ಹೆಚ್ಚಿಸುವುದೇ ಈ ಕಾಲದ ಮುಖ್ಯ ಆಶಯವಾದುದರಿಂದ ಶಾಸ್ತ್ರ, ಇತಿಹಾಸ, ಜೀವನ ಚರಿತ್ರೆ, ವಿಡಂಬನ, ಕಥೆ ಮುಂತಾದ ಗದ್ಯಪದ್ಯ ಗ್ರಂಥಗಳ ರಚನೆಯಾಯಿತು. ಕಾಲಗತಿಯನ್ನನುಸರಿಸಿ ಕನ್ನಡಗ್ರಂಥದ ಶೈಲಿಯಲ್ಲುಂಟಾದ ಬದಲಾವಣೆಯಿರಲಿ, ಕನ್ನಡಭಾಷೆಯಲ್ಲೇ ಪ್ರಬಲವಾದ ಬದಲಾವಣೆಯುಂಟಾಯಿತು. ಹಳಗನ್ನಡವು ಹೋಯಿತು; ಹೊಸ

ಗನ್ನಡವು ಬಂತು. ಸಾರ್ವಜನಿಕ ಕವಿಗಳ ಕೈಗೆ ಸಿಕ್ಕಿ ತಿಳಿಗನ್ನಡ ವಾಗುತ್ತ ಬಂತು. ಶ್ರೀಪಾದರಾಯ (೧೫೦೦), ಪುರಂದರದಾಸ (೧೫೪೦), ಕನಕದಾಸ (೧೫೫೦), ಜಗನ್ನಾಥದಾಸ(೧೭೫೦) ಮುಂತಾದ ನೂರಾರು ಕವಿಸಂತರುದಯಿಸಿ ಭಕ್ತಿರಸಭರಿತವಾದ ಹಾಡುಗಳನ್ನು ಕಟ್ಟಿ, ಉತ್ತಮಧಾರ್ಮಿಕ ತತ್ವಗಳನ್ನು ಮನೆಮನೆಗೂ ಒಯ್ದರು. ತಿಮ್ಮಣ್ಣ (೧೫೧೦) ಚಾಟುವಿಠಲನಾಥ (೧೫೩೦) ಕನಕದಾಸ (೧೫೫೦) ವಿರೂಪಾಕ್ಷಪಂಡಿತ (೧೫೮೪) ಸಹಜಾನಂದ (೧೬೫೦) ಚಿಕ್ಕದೇವರಾಜ (೧೭೦೪) ಲಕ್ಷ್ಮೀಶ (೧೭೦೦) ಮೊದಲಾದವರು ಭಕ್ತಿರಸದಿಂದ ತುಂಬಿತುಳುಕುತ್ತಲಿರುವ ಭಾರತ, ಭಾಗವತ, ಮೋಹನತರಂಗಿಣಿ, ಚನ್ನಬಸವ ಪುರಾಣ, ಭಕ್ತಿರಸಾಯನ, ಪ್ರಹ್ಲಾದಚರಿತ್ರೆ, ಗೀತಗೋಪಾಲ, ಜೈಮಿನಿ, ಮುಂತಾದ 'ಹಾಡುಗಬ್ಬ'ಗಳನ್ನೂ ಕ್ರಮವಾಗಿ ವಿರಚಿಸಿ, ನಾಲ್ಕುಹೊತ್ತಿನಲ್ಲೂ ಹೆಂಗಸರ ಮಕ್ಕಳಬಾಯಲ್ಲಿ ನಲಿಯುತ್ತಿರುವಂತೆ ಮಾಡಿದರು.

ಹರಿದಾಸರ ಪದಗಳೊಂದಿಗೆ ವೀರಶೈವಕವಿಗಳ ರಗಳೆಗಳೂ ವಚನಗಳೂ ಸೇರಿ ಸಾರ್ವಜನಿಕರ ಸಾಹಿತ್ಯಾಭಿರುಚಿಯನ್ನೂ ಹೆಚ್ಚಿಸಿದುವು. ಹೆಚ್ಚಿಸುವುದಕ್ಕಿಂತಲೂ ಅಧಿಕವಾಗಿ ಸಾರ್ವಜನಿಕರ ಸಾಹಿತ್ಯಾಭಿರುಚಿಯನ್ನು ಪರಿಶುದ್ಧಪಡಿಸಿದುವು. ಶತಕಗಳೂ ಯಕ್ಷಗಾನಗಳೂ ಸಾವಿರಾರು ಹುಟ್ಟಿದುವು. ಸಂಚಿಯ ಹೊನ್ನಮ್ಮ, ಶೃಂಗಾರಮ್ಮ, ಮುಂತಾದ ಹತ್ತಾರು ಸ್ತ್ರೀಲೇಖಕರು ಹುಟ್ಟಿ ಸಮಾಜಕ್ಕೆ ನೂತನ ಶಕ್ತಿಯನ್ನು ಕೊಟ್ಟರು. ಈ ಕಾಲದ ಕಾವ್ಯಗಳನೇಕಗಳು ಬಾಜನೆಗಬ್ಬಗಳು. ಅಂದರೆ ಭಕ್ತಿರಸವೇ ಈ ಕಾಲದ ಸಾಹಿತ್ಯದಲ್ಲಿ ಪ್ರಧಾನ ರಸವೆಂದಂತಾಯಿತು. ಕವಿಸಂತರ ಕೀರ್ತನೆಗಳನ್ನು ಕೇಳಿ ಕರ್ಣಾನಂದ ಹೊಂದದ ಗೃಹಿಣಿಯಿಲ್ಲ; ಜಂಗಮರ ರಸವಚನಕಬಳಗಳನುಣ್ಣದ ದಾರಿಗರಿಲ್ಲ; ಪುರಾಣಶ್ರವಣಕ್ಕಾಗಿ ಅಲ್ಲಲ್ಲಿ ಗುಂಪುಗೂಡದ ಹಳ್ಳಿಗಳಿಲ್ಲ. ಆ ಕಾಲದಲ್ಲಿ ವೀರಶೈವರ ವಚನವನ್ನಾಗಲಿ, ದಾಸರಪದವನ್ನಾಗಲಿ ಸರ್ವಜ್ಞನ ಪದ್ಯವನ್ನಾಗಲಿ ಹಾಡದ ಪಾಪಿಯೇ ಇರಲಿಲ್ಲ.

## ಆಧುನಿಕ (ವೈಜ್ಞಾನಿಕ) ಯುಗ

### ೧೯ ನೆಯ ಶತಮಾನದಿಂದ

**ಇಸ್ಲಾಮಿಾ ಮತ್ತು ಈಸಾಯಿ ಸಂಸ್ಕೃತಿ :—** ಹಿಂದಿನ ಯುಗದ ಸಾಹಿತ್ಯವೆಲ್ಲ ಕೇವಲ ಪಾರಮಾರ್ಥಿಕ ವಿಚಾರಗಳಲ್ಲೇ ಮುಳುಗಿ ಹೋಯಿತು. ಅಂದ ಮಾತ್ರಕ್ಕೆ ವೈಜ್ಞಾನಿಕವಿಚಾರಗಳಾವುವೂ ಸಾಹಿತ್ಯಪ್ರಪಂಚವನ್ನು ಹೊಗಲಿಲ್ಲವೆಂದರ್ಥವಲ್ಲ. ಆದರೆ ೧೯ ನೆಯ ಶತಮಾನದಿಂದ ಕನ್ನಡ ಸಾಹಿತ್ಯವು ಒಂದು ನವೀನ ಬೆಳವಳಿಕೆಗೆ ಒಳಗಾಯಿತು. ಇಸ್ಲಾಮಿಾ ಮತ್ತು ಈಸಾಯಿಾ ಸಂಸ್ಕೃತಿಯ ಸಂಬಂಧದಿಂದ ಸಾಹಿತ್ಯರೂಪಗಳೇ ಬದಲಾಯಿಸಿದುವು; ಸರಣಿಯಮಾರ್ಗವೇ ಬೇರೆಯಾಯಿತು ; ಕವಿಗಳ ಆಶಯಗಳೇ ಬದಲಾದುವು. ಶಿಕ್ಷಣಕ್ರಮವೂ, ಶಾಲೆಯ ಪಾಠಪ್ರವಚನಗಳೂ ಜನರಲ್ಲೆಲ್ಲ ಅದ್ಭುತ ಚಳವಳಿಯನ್ನುಂಟುಮಾಡಿತು. ಆಂಗ್ಲೇಯರ ಪ್ರಭುತ್ವವುಂಟಾದಂದಿನಿಂದ ರಾಜಕೀಯ, ಆರ್ಥಿಕ, ಸಾಮಾಜಿಕ ಪರಿಸ್ಥಿತಿಗಳಲ್ಲಿ ಪರಿವರ್ತನಗಳಾಗಿ, ಅವುಗಳ ವರ್ಚಸ್ಸು ಜನರ ನಡೆನುಡಿಗಳ ಮೇಲೆಲ್ಲ ಚನ್ನಾಗಿ ಬಿತ್ತು. ಒಟ್ಟಿನ ಮೇಲೆ ಈ ಯುಗವು ಶುದ್ಧ ಕವಿತಾದೃಷ್ಟಿಯಿಂದ ಶುಷ್ಕಯುಗವೆನ್ನ ಬೇಕು. ಆದರೆ ಈ ಕಾಲದ ಗದ್ಯಸಾಹಿತ್ಯದ ಸರ್ವತೋಮುಖವಾದ ಬೆಳವಳಿಕೆಯು ಪ್ರಶಂಸನೀಯವಾದುದು.

**ಸಾಹಿತ್ಯವಿಶೇಷ :—** ಈ ವೈಜ್ಞಾನಿಕ ಯುಗದ ಲೇಖಕರಲ್ಲಿ ಕವಿಗಳುಂಟು, ಗದ್ಯ ಲೇಖಕರುಂಟು, ನಾಟಕ ಕರ್ತೃಗಳುಂಟು, ವಿಮರ್ಶಕರುಂಟು, ಇತಿಹಾಸ ಲೇಖಕರುಂಟು, ಕೇವಲ ಪರಿವರ್ತನಕಾರರುಂಟು. ಆದರಿವರನ್ನು ಶುದ್ಧ ಕರ್ಣಾಟಕ ಪಂಡಿತರು, ಶುದ್ಧ ಆಂಗ್ಲೇಯ ಪಂಡಿತರು, ಆಂಗ್ಲ ಕರ್ಣಾಟಕ ಪಂಡಿತರು ಎಂದು ಸ್ಥೂಲವಾಗಿ ಮೂರು ವಿಭಾಗಮಾಡಬಹುದು. ಮೊದಲನೆಯ ಗುಂಪಿನವರಿಗೆ ಪಶ್ಚಿಮದ ಗಾಳಿಯು ಸೋಕಿಲ್ಲ, ಓಬೀರಾಯನ ಕಾಲದ ವಿಷಯಗಳೇ ಅವರ ಲೇಖನಗಳಿಗೆ ವಸ್ತುಕಗಳು. ಸಂಸ್ಕೃತವೇ

ಅವರ ವಾತಾವರಣ. ಹೊಸದೊಂದೂ ಅವರಿಗೆ ರುಚಿಸದು. ಹಳೆಯ ಮಾರ್ಗವನ್ನು ಬಿಟ್ಟವರು ಕದಲುವಂತಿಲ್ಲ. ಇವರಿಗೇ ಪಂಡಿತರೆಂದು ಹೆಸರು. ಇವರಿಗೆ ಸಮಾಜದಲ್ಲಿ ಹೆಚ್ಚಾದ ಗೌರವವಿಲ್ಲ. ರಾಜಾಶ್ರಯವಂತೂ ಕನಸಿನಲ್ಲೂ ಇಲ್ಲ. ಎರಡನೆಯ ಪಂಗಡದವರಿಗೆ ಸಮಾಜದಲ್ಲಿ ಒಂದು ಗೌರವಸ್ಥಾನವುಂಟು. ಅದರಲ್ಲೂ ಪದವೀಧರರಾದರಂತೂ ಹೇಳಬೇಕಾದುದೇ ಇಲ್ಲ. ಆದರೆ ಅವರಿಗೆ ಕರ್ಣಾಟಕ ಸಂಸ್ಕೃತಿಯಿಲ್ಲ ; ಕರ್ಣಾಟಕ ವಾತಾವರಣವಿಲ್ಲ ; ಆಂಗ್ಲೇಯ ಭಾಷೆಯಲ್ಲೂ, ಈಸಾಯಿಸಂಸ್ಕೃತಿಯಲ್ಲೂ, ಆಧುನಿಕ ವಿಜ್ಞಾನ ವಿಚಾರದಲ್ಲೂ ಅವರ ಮೆದುಳೇ ಬದಲಾಯಿಸಿರುವುದು. ಈ ಎರಡು ಪಂಗಡದವರಿಗೂ ಸದಾ ಯುದ್ಧವಾಗುತ್ತಲೇ ಇರುವುದು. ಕನ್ನಡ ಪಂಡಿತರು ಸಂಸ್ಕೃತದಿಂದ ಭಾಷಾಂತರ ಮಾಡುತ್ತಿರುವರು, ಪಾಶ್ಚಾತ್ಯ ಭಾಷಾಪಾರಂಗತರು ಐರೋಪ್ಯ ಭಾಷೆಗಳಿಂದ ಭಾಷಾಂತರ ಮಾಡುತ್ತಿರುವರು. ಈ ಎರಡು ಪಂಗಡದವರಲ್ಲೂ ಶಕ್ತಿಯಿಲ್ಲ, ಸ್ವಾತಂತ್ರ್ಯವಿಲ್ಲ, ಪ್ರತಿಭೆಯಿಲ್ಲ. ಮೂರನೆಯ ಪಂಗಡಕ್ಕೆ ಸೇರಿದವರ ಸಹಾಯದಿಂದ ಕನ್ನಡ ಸಾಹಿತ್ಯಕ್ಕೆ ಅಮೋಘವಾದ ಸಹಾಯವಾಗುತ್ತಲಿದೆ. ಗದ್ಯಗಳೂ, ಪದ್ಯಗಳೂ, ನಾಟಕಗಳೂ, ವಿಮರ್ಶ ಗ್ರಂಥಗಳೂ ಸಾವಿರಾರು ಹೊರಬೀಳುತ್ತಲಿವೆ.

(ಅ) ಆಚ್ಚಿನ ಕಾರ್ಖಾನೆ ;

(ಇ) ಸಾಹಿತ್ಯ ಇತಿಹಾಸ ಸಂಶೋಧನೆ ; ಪುರಾತನ ಗ್ರಂಥ ಪ್ರಕಟನೆ ;

(ಉ) ಬಂಗಾಳ, ಮಹಾರಾಷ್ಟ್ರ, ಆಂಧ್ರದೇಶಗಳಲ್ಲಾಗುತ್ತಿರುವ ಸಾಹಿತ್ಯ ಚಳವಳಿ ;

(ಎ) ಸ್ವದೇಶ, ಸ್ವಭಾಷೆ, ಸ್ವರಾಜ್ಯ ವಿಚಾರಗಳಲ್ಲಿ ದೇಶೀಯರಲ್ಲೆಲ್ಲ ಉಂಟಾಗಿರುವ ಪರಿವರ್ತನೆ ;

(ಒ) ಕರ್ಣಾಟಕದ ಏಕೀಕರಣೋದ್ಯಮ

ಮೊದಲಾದ ಹಲವು ಕಾರಣಗಳಿಂದ ಕರ್ಣಾಟಕ ಸಾಹಿತ್ಯದಲ್ಲೂ ನವೀನ ಚಲನೆಗಳು ಮೊದಲಾಗಿವೆ.

ಖಂಡಕಾವ್ಯಗಳು, ಪ್ರಾಸರಹಿತ ಪದ್ಯಗಳು, ಸಣ್ಣ ಕಥೆಗಳು, ಪದಗಳು, ಗದ್ಯ ನಾಟಕಗಳು, ಸಂಗೀತ ನಾಟಕಗಳು, ಮೊದಲಾದ ನೂರಾರು ಸಾಹಿತ್ಯ ರೂಪಗಳು ಮೊದಲಾಗಿವೆ. ವಿಮರ್ಶೆಯೂ ಸಾಹಿತ್ಯದ ಒಂದು ಅಂಗವಾಗಿ ಗಣಿಸಲ್ಪಟ್ಟಿದೆ. ನಾಟಕಗಳಲ್ಲಿ ಗ್ರಾಂಥಿಕ ಭಾಷೆಗಿಂತಲೂ ವ್ಯಾವಹಾರಿಕ ಭಾಷೆಯೇ ಉಚಿತವೆಂಬ ದಾಗಿ ಹಲವರೆಣ್ಣಿರುವರು. ಕವಿ ಚರಿತ್ರೆಗಳನ್ನೂ, ವಾಙ್ಮಯೇತಿಹಾಸಗಳನ್ನೂ ಬರೆಯಲುದ್ಯಮಿಸಿರುವರು. ಆದರೇನು ನಮ್ಮ ಹೃದಯ ಬೀಜವು ಸಕ್ಷೇತ್ರದಲ್ಲಿ ಇನ್ನೂ ಊರಿಲ್ಲವಾಗಿ ಸತ್ಫಲಗಳನ್ನೀಗಲೇ ಬಯಸುವುದು ಬಣ್ಣಗೇಡಿತನ. ಪ್ರತಿಭಾಶಾಲಿಗಳನ್ನು ಸೃಷ್ಟಿಸಬೇಕೆಂದು ಕನ್ನಡಿಗರಿಗೆ ಆಶೆಯು ಹುಟ್ಟುವವರೆಗೂ ಕರ್ಣಾಟಕ ಸಾಹಿತ್ಯಕ್ಕೆ ಮುಕ್ತಿಯಿಲ್ಲ. "ಆಶೆಯು ಪ್ರಯತ್ನಕ್ಕೆ ಮೂಲ; ಪ್ರಯತ್ನವು ಫಲಕ್ಕೆ ಮೂಲ."

## ತುದಿಗೆ ಮೊದಲು

ಹಿರಿಯರೂ ಕಿರಿಯರೂ ಕನ್ನಡ ಸಾಹಿತ್ಯ ಸೇವೆಯನ್ನು ಮಾಡಬೇಕೆಂದು ಬಹು ಉತ್ಸಾಹವನ್ನು ತೋರಿಸುತ್ತಿರುವರು. ಇದುವರೆಗೆ ಕನ್ನಡಿಗರು ಬರೆದು ಪ್ರಕಟಿಸಿರುವ ಗ್ರಂಥಗಳನ್ನು ಕಂಡರೆ ನಿಜವಾದ ದೇಶಭಾಷಾಜ್ಞಾನವೂ, ಉತ್ಪತ್ತಿಯೂ, ಪ್ರತಿಭೆಯೂ ಇಲ್ಲವೆಂದು ಕಂಡು ಬಂದರೂ ಇದು ಶುಷ್ಕಯುಗವಲ್ಲ. ಮುಂದಿನ ಅಂದವಾದ ಕನ್ನಡ ಸಾಹಿತ್ಯದ ಹೊಂಬಿಸಿಲ ಚಿಹ್ನೆಗಳು ಕಾಣುತ್ತಲಿವೆ. ವಿದ್ಯಾವರ್ಧಕ ಸಂಘಗಳೂ, ಸಾಹಿತ್ಯ ಪರಿಷತ್ತುಗಳೂ, ಕರ್ಣಾಟಕ ಸಂಘಗಳೂ, ಗೆಳೆಯರ ಗುಂಪುಗಳೂ ಸರ್ವಾಲಂಕಾರ ಶೋಭಿತಳಾದ ಕರ್ಣಾಟಕಕವಿತಾಕನ್ಯೆಯ ಆಗಮನಕ್ಕೆ ದಾರಿಮಾಡುತ್ತಲಿವೆ. ಬಹುಬೇಗ ಅಖಿಲ ಕರ್ಣಾಟಕವು ತನ್ನ ಸೋದರಿಯರಾದ ಆಂಧ್ರ, ಬಂಗಾಳ, ಮಹಾರಾಷ್ಟ್ರ, ಗೂರ್ಜರ ದೇಶಗಳಿಗೆ ಸರಿಸಮಾನವಾಗಿ ನಿಂತು ತನ್ನ ಪ್ರಾಚೀನ ಸಾಹಿತ್ಯೇತಿಹಾಸ ಶ್ರೇಷ್ಠತೆಯನ್ನು ಸಾರ್ಥಕಪಡಿಸಿಕೊಳ್ಳುವುದರಲ್ಲಿ ಯಾವ ಸಂದೇಹವೂ ಇಲ್ಲ.

**ಕನ್ನಡವಕ್ಕಿ.**

## ಟಿಪ್ಪಣಿ ೧—ಹೆಚ್ಚೋಲೆ—ಜನನ ಮರಣದ ಪಟ್ಟಿ ೧೯೨೨ ಕ್ಕೆ

| ಸ್ಥಳ | ಜನನ | ಸಹಸ್ರಕ್ಕೆ | ಮರಣ | ಸಹಸ್ರಕ್ಕೆ | ಶಿಶು ಮರಣ (ಐದು ವರ್ಷಗಳ ಕೆಳಗೆ) | ಸತ್ತು ಹುಟ್ಟಿದ್ದು | ಪ್ರಸವದಿಂದ ಬಾಣಂತಿಯರ ಮರಣ |
|---|---|---|---|---|---|---|---|
| ಬೆಳಗಾಂವಿ | ೩೬,೪೮೬ | ೩೮·೪೨ | ೨೪,೪೭೮ | ೨೫·೭೭ | ೯.೬೬೦ | ೮೧೧ | ೧೭೮ |
| ಧಾರವಾಡ | ೩೮,೯೯೧ | ೩೭ ೬೩ | ೨೬,೭೦೦ | ೨೫·೭೭ | ೧೦,೪೪೦ | ೧,೨೬೨ | ೧೭೯ |
| ಬಿಜಾಪುರ | ೨೮,೬೫೪ | ೩೫·೯೮ | ೨೦,೦೪೪ | ೨೫·೧೭ | ೮,೧೮೩ | ೮೨೫ | ೧೦೩ |
| ಉತ್ತರಕನಡ | ೧೪,೪೫೧ | ೩೫ ೯೯ | ೧೧,೪೩೫ | ೨೮·೪೮ | ೩ ೮೩೧ | ೭೧೭ | ೨೭೮ |
| ಮೈಸೂರು ಸಂಸ್ಥಾನ | | ೪೩·೫ (೧೯೨೧) | | ೩೭·೫ (೧೯೨೧) | | | |

## ಜನನ ಮರಣದ ಪಟ್ಟಿ ೧೯೨೩ ಕ್ಕೆ

| ಸ್ಥಳ | ಜನನ | ಸಹಸ್ರಕ್ಕೆ | ಮರಣ | ಸಹಸ್ರಕ್ಕೆ | ಶಿಶು ಮರಣ (ಐದು ವರ್ಷಗಳ ಕೆಳಗೆ) | ಸತ್ತು ಹುಟ್ಟಿದ್ದು | ಪ್ರಸವದಿಂದ ಬಾಣಂತಿಯರ ಮರಣ |
|---|---|---|---|---|---|---|---|
| ಬೆಳಗಾಂವಿ | ೩೮,೮೦೩ | ೪೦·೮೬ | ೨೭,೪೪೨ | ೨೮·೯೦ | ೯,೯೨೩ | ೮೯೭ | ೧೫೭ |
| ಧಾರವಾಡ | ೩೬,೩೮೫ | ೩೫·೧೧ | ೩೭,೨೫೬ | ೩೫·೯೫ | ೧೨,೩೪೨ | ೧,೨೬೬ | ೨೩೯ |
| ಬಿಜಾಪುರ | ೩೨,೬೫೨ | ೪೧·೦೦ | ೨೦,೨೫೦ | ೨೫·೪೪ | ೮,೨೩೭ | ೮೪೮ | ೧೨೧ |
| ಕಾರವಾರ್ | ೧೪,೪೮೭ | ೩೬ ೦೮ | ೧೧,೩೫೭ | ೨೮·೨೯ | ೩,೬೬೧ | ೭೪೦ | ೨೫೩ |

## ಟಿಪ್ಪಣಿ ೨—೧೯೨೪ ನೆಯ ಸೆನ್ಸಸ್ ಪ್ರಕಾರ ಡಿಸ್ಟ್ರಿಕ್ಟ್‌ವಾರ್ ಪ್ರಜಾಸಂಖ್ಯೆ

| ಸ್ಥಳ | ಜನಸಂಖ್ಯೆ | ಗಂಡಸರು | ಹೆಂಗಸರು | ಅಕ್ಷರಜ್ಞರು | ಅನಕ್ಷರಜ್ಞರು |
|---|---|---|---|---|---|
| ಬೆಳಗಾಂವಿ | ೯೫೨,೯೯೬ | ೪೮೭,೦೩೬ | ೪೬೫,೯೬೦ | ೫೬,೨೧೫ | ೮೯೬,೭೮೧ |
| ಬಿಜಾಪುರ | ೭೯೬,೮೭೬ | ೪೦೫,೬೩೭ | ೩೯೧,೨೩೯ | ೫೧,೫೨೬ | ೭೪೫,೩೫೦ |
| ಧಾರವಾಡ | ೧,೦೩೬,೯೨೪ | ೫೨೮,೮೨೯ | ೫೦೮,೦೩೫ | ೧೦೧,೨೧೧ | ೯೩೫,೭೧೩ |
| ಉತ್ತರ ಕನ್ನಡ ಜಿಲ್ಲೆ | ೪೦೧,೭೨೭ | ೨೦೪,೧೬೫ | ೧೯೫,೫೬೨ | ೩೮,೭೦೬ | ೩೬೩,೦೨೧ |
| ಮೈಸೂರು ಸಂಸ್ಥಾನ | ೫,೮೫೯,೯೫೨ | ೨,೯೮೫,೫೪೧ | ೨,೮೭೪,೪೧೧ | ೪೧೨,೬೯೬ | ೫,೪೪೭,೨೫೬ |
| ಮೈಸೂರು ಜಿಲ್ಲೆ | ೧,೩೧೯,೩೬೮ | ೬೫೯,೧೪೮ | ೬೬೦,೨೨೦ | ೫೪,೦೧೫ | ೧,೨೬೫,೩೫೩ |
| ಹಾಸನ ,, | ೫೮೩,೯೬೦ | ೨೯೨,೨೪೯ | ೨೯೨,೭೧೧ | ೩೯,೩೨೦ | ೫೪೪,೬೪೦ |
| ಕಡೂರು ,, | ೩೩೩,೫೩೮ | ೧೭೪,೬೧೫ | ೧೫೮,೯೨೩ | ೨೭,೮೭೩ | ೩೦೫,೬೬೫ |
| ಶಿವಮೊಗ್ಗ ,, | ೪೯೨,೫೬೦ | ೨೫೭,೧೫೦ | ೨೩೫,೪೧೦ | ೪೦,೪೩೬ | ೪೫೨,೧೨೪ |
| ಚಿತ್ರದುರ್ಗ ,, | ೫೭೪,೧೭೯ | ೨೯೪,೯೫೫ | ೨೭೯,೨೨೪ | ೩೭,೨೦೭ | ೫೩೬,೯೭೨ |
| ತುಮಕೂರು | ೭೭೩,೧೨೨ | ೩೯೪,೮೯೭ | ೩೭೮,೨೨೫ | ೫೨,೩೬೭ | ೭೨೦,೭೫೫ |
| ಕೋಲಾರ ,, | ೭೦೪,೬೫೭ | ೩೫೭,೪೭೪ | ೩೪೭,೧೮೩ | ೪೩,೮೨೧ | ೬೬೦,೮೩೬ |
| ಬೆಂಗಳೂರು | ೭೮೮,೩೭೯ | ೩೯೯,೮೭೨ | ೩೮೮,೫೦೭ | ೪೩,೧೪೧ | ೭೪೫,೨೩೮ |
| ಕಂಟೋನ್ಮೆಂಟ್ ,, | ೧೧೮,೯೪೦ | ೬೧,೫೭೨ | ೫೭,೩೬೪ | ೩೦,೪೭೭ | ೮೮,೪೬೩ |
| ದಕ್ಷಿಣಕನ್ನಡ | ೧,೨೫೦,೦೦೦ | | | | |

## ಟಿಪ್ಪಣಿ ೩—ಕನ್ನಡವನ್ನಾಡುವವರ ಸಂಖ್ಯೆ ೧೦,೩೭೪,೨೦೪.

|  | ಸ್ಥಳ | ಒಟ್ಟು ಸಂಖ್ಯೆ | ಗಂಡಸರು | ಹೆಂಗಸರು |
|---|---|---|---|---|
| ೧. | ದಕ್ಷಿಣಮಹಾರಾಷ್ಟ್ರಸಂಸ್ಥಾನಗಳೂ ಮತ್ತು ಇತರ ಬೊಂಬಾಯಾಧಿಪತ್ಯದ ಕನ್ನಡಜಿಲ್ಲೆಗಳು | ೨,೯೪೨,೫೬೦ | ೧,೫೦೫,೬೬೭ | ೧,೪೩೬,೮೯೩ |
| ೨. | ಬೊಂಬಾಯಾಧಿಪತ್ಯದ ಬ್ರಿಟಿಷರ ಸ್ವಾಧೀನದಲ್ಲಿರುವ ಜಿಲ್ಲೆಗಳು | ೨,೪೦೩,೪೪೮ | ೧,೨೨೯,೪೪೫ | ೧,೧೭೪,೦೦೩ |
| ೩. | ಬೆಳಗಾಂವಿ | ೬೨೧,೭೭೮ | ೩೧೯,೦೬೪ | ೩೦೨,೭೧೪ |
| ೪. | ಬಿಜಾಪುರ | ೬೪೮,೨೨೯ | ೩೨೯,೮೮೬ | ೩೧೮,೩೪೩ |
| ೫. | ಧಾರವಾಡ | ೮೩೨,೭೧೫ | ೪೨೩,೨೧೫ | ೪೦೯,೫೦೦ |
| ೬. | ಉತ್ತರ ಕನ್ನಡ | ೨೨೬,೬೩೦ | ೧೧೫,೭೮೪ | ೧೧೦,೮೪೬ |
| ೭. | ಕೊಲ್ಹಾಪುರ | ೧೨೬,೯೨೨ | ೬೫,೬೪೫ | ೬೧,೨೭೭ |
| ೮. | ದಕ್ಷಿಣಮಹಾರಾಷ್ಟ್ರ ಸಂಸ್ಥಾನಗಳು | ೩೨೧,೧೬೪ | ೧೬೩,೨೧೯ | ೧೫೭,೯೪೫ |
| ೯. | ಇತರ ಸಂಸ್ಥಾನಗಳು | ೯೦,೬೪೩ | ೪೭,೧೩೬ | ೪೩,೫೦೭ |
| ೧೦. | ಮದ್ರಾಸಾಧಿಪತ್ಯ | ೧,೫೩೩,೩೪೪ |  |  |
| ೧೧. | ದಕ್ಷಿಣಸಂಸ್ಥಾನಗಳು | ೧೮,೨೨೮ |  |  |
| ೧೨. | ಹೈದರಾಬಾದ್ ಪ್ರಾಂತ್ಯ | ೧,೫೩೬,೯೨೮ |  |  |
| ೧೩. | ಮೈಸೂರುಸಂಸ್ಥಾನ | ೪,೨೫೭,೦೯೮ |  |  |

## ಟಿಪ್ಪಣಿ ೪—ಕನ್ನಡಮಾತನಾಡುವರ ಸಂಖ್ಯೆಯಲ್ಲಿ ೨೧ ವರ್ಷಗಳಲ್ಲುಂಟಾದ ವ್ಯತ್ಯಾಸ.

| | ಸ್ಥಳ | ೧,೯೦೧ ರಲ್ಲಿ | ೧,೯೧೧ ರಲ್ಲಿ | ೧,೯೨೧ ರಲ್ಲಿ |
|---|---|---|---|---|
| ೧. | ಒಟ್ಟು | ೧೦,೩೬೫,೦೪೧ | | ೧೦,೩೭೪,೨೦೪ |
| ೨ | ಮೈಸೂರುಸಂಸ್ಥಾನ | ೪,೦೪೪.೦೭೬ | ೪,೧೪೭,೭೬೫ | ೪,೨೫೭,೦೯೮ |
| ೩. | ಬೊಂಬಾಯಾಧಿಪತ್ಯ | ೨,೫೦೭,೮೮೯ | ೨,೪೬೨,೧೯೫ | ೨,೪೦೩,೪೪೮ |
| ೪. | ಬೊಂಬಾಯಾಧಿಪತ್ಯದ ಸಂಸ್ಥಾನಗಳು | ೫೮೯,೪೩೬ | ೫೪೯,೬೪೧ | ೫೩೯,೧೧೨ |
| ೫. | ಮದ್ರಾಸಾಧಿಪತ್ಯ | ೧,೫೫೭,೬೪೪ | ೧,೫೮೯,೪೮೭ | ೧,೫೩೩,೩೪೪ |
| ೬. | ,, ದ ಸಂಸ್ಥಾನಗಳು | ೧೭,೯೫೧ | ೧೯,೮೪ | ೧೮,೨೨೮ |
| ೭. | ಹೈದರಾಬಾದ್ ಸಂಸ್ಥಾನ | | ೧,೬೮೦,೦೦೫ | ೧.೫೩೩,೩೪೪ |

**ಸೂಚನೆ** :—ಕಳೆದ ಇಪ್ಪತ್ತುವರ್ಷಗಳಲ್ಲಿ ಕನ್ನಡಮಾತನಾಡುವರ ಸಂಖ್ಯೆ ಶೇಕಡ .೦೯ ರಷ್ಟುಮಾತ್ರ ಹೆಚ್ಚಿದೆ ; ಮತ್ತು ಬೊಂಬಾಯಾಧಿಪತ್ಯದ ಕನ್ನಡ ಜಿಲ್ಲೆಗಳಲ್ಲೂ, ಸಂಸ್ಥಾನಗಳಲ್ಲೂ, ಹೈದರಾಬಾದ್ ಸಂಸ್ಥಾನದಲ್ಲೂ ಕನ್ನಡ ಮಾತನಾಡುವರ ಸಂಖ್ಯೆ ಕಡಮೆಯಾಗುತ್ತಿದೆ.

ಟಿಪ್ಪಣಿ ೫

# ಕರ್ಣಾಟಕದ ವೃತ್ತಪತ್ರಿಕೆಗಳು ಮತ್ತು ಮಾಸ ಪತ್ರಿಕೆಗಳು

## ದಿನಪತ್ರಿಕೆಗಳು.

| | ಹೆಸರು | | ವಿಳಾಸ |
|---|---|---|---|
| ೧ | ವಿಜಯ | (ಕನ್ನಡ) | ಧಾರವಾಡ |
| ೨ | ರಾಜಹಂಸ | ,, | ,, |
| ೩ | ಸಂಪದಭ್ಯುದಯ | ,, | ಮೈಸೂರು |
| ೪ | ಡೈಲಿಪೋಸ್ಟ್ | (ಇಂಗ್ಲೀಷು) | ಬೆಂಗಳೂರು |

## ವಾರ ಪತ್ರಿಕೆಗಳು

| | | | |
|---|---|---|---|
| ೫ | ಕರ್ಣಾಟಕವೃತ್ತ ಮತ್ತು ಧನಂಜಯ | (ಕನ್ನಡ) | ಧಾರವಾಡ |
| ೬ | ಕರ್ಮವೀರ | ,, | ,, |
| ೭ | ಲೋಕಬಂಧು | ,, | ,, |
| ೮ | ವಿಜಯ | ,, | ,, |
| ೯ | ಕರ್ಣಾಟಕ ಟೈಮ್ಸ್ | ,, | ,, |
| ೧೦ | ನವಶಕ್ತಿ | ಇಂಗ್ಲೀಷು | ,, |
| ೧೧ | ಲೋಕಮತ | ಕನ್ನಡ | ಹುಬ್ಬಳ್ಳಿ |
| ೧೨ | ಕರ್ಣಾಟಕ ವೈಭವ | ,, | ಬಿಜಾಪುರ |
| ೧೩ | ನವೀನ ಭಾರತ | ,, | ಬಾಗಲ್ಕೋಟೆ |
| ೧೪ | ಸತ್ಯಾಗ್ರಹೀ | ,, | ಉಡಪಿ |
| ೧೫ | ಸ್ವದೇಶಾಭಿಮಾನಿ | ,, | ಮಂಗಳೂರು |
| ೧೬ | ಕಂಠೀರವ | ,, | ,, |
| ೧೭ | ನವಯುಗ | ,, | ,, |

| | | | |
|---|---|---|---|
| ೧೮ | ಮಂಗಳೂರು ಮೈಲ್ | ಇಂಗ್ಲೀಷು | ಮಂಗಳೂರು |
| ೧೯ | ಕನ್ನಡಧುರೀಣ | ಕನ್ನಡ (ಕುಮ್ಟ ಉ. ಕನ್ನಡ) | |
| ೨೦ | ಕನ್ನಡ ವೃತ್ತ | ,, | ,, |
| ೨೧ | ಸಾಧ್ವಿ | ,, | ಮೈಸೂರು |
| ೨೨ | ವೃತ್ತಾಂತ ಪತ್ರಿಕೆ | ,, | ,, |
| ೨೩ | ಮೈಸೂರು ಸ್ಟಾರ್ | ,, | ,, |
| ೨೪ | ಸತ್ಯವಾದಿ | ,, | ,, |
| ೨೫ | ಮೈಸೂರು ಪೇಟ್ರಿಯಟ್ | ಇಂಗ್ಲೀಷು | ,, |
| ೨೬ | ಮೈಸೂರು ಕ್ರಾನಿಕಲ್ | ,, | ಬೆಂಗಳೂರು |
| ೨೭ | ,, | ಕನ್ನಡ | ,, |
| ೨೮ | ಒಕ್ಕಲಿಗರ ಪತ್ರಿಕೆ | ,, | ,, |
| ೨೯ | ನ್ಯೂ ಮೈಸೂರು | ಇಂಗ್ಲೀಷು | ,, |
| ೩೦ | ಕೊಡಗು | ಕನ್ನಡ | ಮಡಿಕೇರಿ ಕೊಡಗು |
| ೩೧ | ವಿಭಾಕರ | ,, | ಬೆಳಗಾಂವಿ |
| ೩೨ | ಬೆಳಗಾಂ ಸಮಾಚಾರ | ಮರಾಠಿ | ,, |
| ೩೩ | ಚಿಕಿತ್ಸಕ | ,, | ,, |
| ೩೪ | ಲೋಕಪಕ್ಷ | ,, | ,, |
| ೩೫ | ರಾಷ್ಟ್ರವೀರ | ,, | ,, |
| ೩೬ | ಪರಿಕಕ್ಷ | ,, | ,, |
| ೩೭ | ಗೋ ಸೇವಕ (ಪಕ್ಷಿಕಪತ್ರಿಕೆ) | ,, | ,, |

## ಮಾಸ ಪತ್ರಿಕೆಗಳು

| | | | |
|---|---|---|---|
| ೧ | ವಾಗ್ಭೂಷಣ | ಕನ್ನಡ | ಧಾರವಾಡ |
| ೨ | ಜಯ ಕರ್ಣಾಟಕ | ,, | ,, |
| ೩ | ಸ್ವಧರ್ಮ | ,, | ,, |
| ೪ | ಜೈನವಿಜಯ | ,, | ಬೆಳಗಾಂವಿ |
| ೫ | ಪ್ರಬೋಧ | ,, | ,, |
| ೬ | ಧರ್ಮತರಂಗಿಣಿ | ,, | ,, |

| | | | |
|---|---|---|---|
| ೭ | ಒಕ್ಕಲಿಗರೂ ಒಕ್ಕಲುತನವೂ | ಕನ್ನಡ | ಬೆಳಗಾಂವಿ |
| ೮ | ಆರೋಗ್ಯ ಚಂದ್ರಿಕೆ | ,, | ಮದ್ರಾಸು |
| ೯ | ಸದ್ಬೋಧ ಚಂದ್ರಿಕೆ | ,, | ಆನಂದವನ. ಅಗಡಿ ಧಾರವಾಡ |
| ೧೦ | ಸದ್ಗುರು | ,, | ಹಾವೇರಿ, (ಧಾರವಾಡ) |
| ೧೧ | ಕರ್ಣಾಟಕ ಜನಜೀವನ ಮತ್ತು ಅರ್ಥಸಾಧಕ ಪತ್ರಿಕೆ | ,, | ಬೆಂಗಳೂರು |
| ೧೨ | ಸರಸ್ವತಿ | ,, | ,, |
| ೧೩ | ಅಧ್ಯಾತ್ಮಪ್ರಕಾಶ | ,, | ,, |
| ೧೪ | ಸುಬೋಧಕುಸುಮಾಂಜಲಿ | ,, | ,, |
| ೧೫ | ಕರ್ಣಾಟಕ ನಂದಿನಿ | ,, | ನಂಜನಗೂಡು (ಮೈಸೂರು) |
| ೧೬ | ಸನ್ಮಾರ್ಗ ದರ್ಶಿ | ,, | ,, |
| ೧೭ | ಕರ್ಣಾಟಕ ಗ್ರಂಥಮಾಲ | ,, | ಮೈಸೂರು |
| ೧೮ | ಕರ್ಣಾಟಕ ಚಂದ್ರಿಕೆ | ,, | ,, |
| ೧೯ | ಕರ್ಣಾಟಕ ಕಾವ್ಯಕಲಾನಿಧಿ | ,, | ,, |
| ೨೦ | ಆತ್ಮಾಹ್ಲಾದಿನಿ | ,, | ಶ್ರೀಗುರುನಾಥ ಚಿಕ್ಕಮಗಳೂರು |
| ೨೧ | ತರುಣಭಾರತ | ಮರಾಠಿ | ಬೆಳಗಾಂವಿ |
| ೨೨ | ಕಾದಂಬರಿ ಸಂಗ್ರಹ | ಕನ್ನಡ | ಚಾಮರಾಜನಗರ ಮೈಸೂರು |
| ೨೩ | ಸಾರಸ್ವತ | ,, | ಉಡುಪಿ |

## ತ್ರೈಮಾಸಿಕ ಪತ್ರಿಕೆಗಳು

| | | | |
|---|---|---|---|
| ೧ | ದೇಶೀಯ ವಿದ್ಯಾಶಾಲಾ ಪತ್ರಿಕಾ | ,, | ಬೆಂಗಳೂರು ನಗರ |
| ೨ | ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ | ,, | ,, |
| ೩ | ಸುಧಾರಕ | ,, | ಥೋರ್ಕೆ, ಉ. ಕನ್ನಡ |
| ೪ | ಸಾಧನ | ,, | ಕಾರ್ಕಿ ,, |

೫ ಮೈಸೂರು ವ್ಯವಸಾಯಕ ಮತ್ತು
ಪರಿಷ್ಕಾರ ಪತ್ರಿಕೆ ಕನ್ನಡ ಮೈಸೂರು
೬ ಪ್ರೇಮ ,, ಪ್ರೇಮಾಯತನ, ತುಂಗಭದ್ರಾ
೭ ಪ್ರಬುದ್ಧ ಕರ್ಣಾಟಕ ,, ಸೆಂಟ್ರಲ್‌ಕಾಲೇಜ್, ಬೆಂಗಳೂರು

## ಇತರ ಪತ್ರಿಕೆಗಳು

೧ ಸಂದೇಶ ಗ್ರಂಥಮಾಲಾ ಮಂಗಳೂರು
೨ ಆತ್ಮೋದ್ಧಾರ ,, ಸಿರ್ಸಿ, ಉ. ಕನ್ನಡ
೩ ಸತೀಹಿತೈಷಿಣಿ ,, ನಂಜನಗೂಡು
೪ ಸರಸ್ವತೀ ,, ಬೆಂಗಳೂರು
೫ ಪರಮಾರ್ಥ ,, ಮೈಸೂರು
೬ ಸ್ವರಾಜ್ಯ ,, ಪೈ ಬ್ರದರ್ಸ್. ಉಡುಪಿ
೭ ಸತ್ಯಾಗ್ರಹೀ ,, ಉಡುಪಿ
೮ ವಿದ್ಯಾರಣ್ಯ ಪುಸ್ತಕಮಾಲಾ ಅಗಡಿ, ಧಾರವಾಡ
೯ ವಿದ್ಯಾರಣ್ಯ ಗ್ರಂಥಮಾಲಾ ದೇಶಪಾಂಡೆ, ,,
೧೦ ಕರ್ಣಾಟಕಗೌರವ ಗ್ರಂಥಮಾಲ ಎಲ್ಲಾಪುರ ಉ. ಕನ್ನಡ
೧೧ ಕರ್ಣಾಟಕ ಹಿತೈಷಿಣಿ ,, ಸರಸ್ವತೀ 'ಮಂದಿರಂ' ಧಾರವಾಡ
೧೨ ಕಾವ್ಯಕಲ್ಪಲತಾ ,, ಬಿಜಾಪುರ
೧೩ ಸರಸ್ವತಿ ಭಾರತ ಭಕ್ತಿ ,, ಶುಕ್ರವಾರಪೇಟೆ ಧಾರವಾಡ
೧೪ ರಾಷ್ಟ್ರೀಯಶಿಕ್ಷಣಸಮಿತಿ ,, ಧಾರವಾಡ

## ಟಿಪ್ಪಣಿ ೬

# ವಿದ್ಯಾಪೀಠಗಳು; ಸಂಘಗಳು; ಇತ್ಯಾದಿ

## ಕರ್ನಾಟಕ ರಾಷ್ಟ್ರೀಯ ಶಿಕ್ಷಣ ಸಮಿತಿ, ಧಾರವಾಡ

**ಉದ್ದೇಶಗಳು** :— ೧. ರಾಷ್ಟ್ರೀಯ ಕ್ರಮವನ್ನನುಸರಿಸುವ ವಿದ್ಯಾಸಂಸ್ಥೆಗಳು. ೨. ಕರ್ನಾಟಕದಲ್ಲಿ ರಾಷ್ಟ್ರೀಯ ಕ್ರಮವನ್ನನುಸರಿಸುವ ವಿದ್ಯಾ ಸಂಸ್ಥೆಗಳನ್ನು ಸಮಿತಿಗೆ ಜಂಟಿಮಾಡಿಕೊಳ್ಳುವುದೂ, ಅಥವಾ ಸಾಧ್ಯವಾದರೆ ಸಹಾಯಮಾಡುವುದೂ, ಉತ್ತೇಜಕೊಡುವುದೂ ೩. ಸಮಿತಿಯು ಒಪ್ಪಿರುವ ಶಾಲೆಗಳಲ್ಲಿ ಶಿಕ್ಷಣದ ಕ್ರಮವನ್ನೂ, ವಿಷಯವನ್ನೂ, ಕಾಲವನ್ನೂ ನಿರ್ಣಯಿಸುವುದು. ೪. ದ್ರವ್ಯಾನುಕೂಲವಾದಾಗ ಯೋಗ್ಯವಾದ ಪಠ್ಯ ಪುಸ್ತಕಗಳನ್ನು ತಯಾರಿಸಿ ಪ್ರಕಟಿಸುವುದು.

## ಕರ್ನಾಟಕ ವಿದ್ಯಾವರ್ಧಕ ಸಂಘ ಧಾರವಾಡ :—

ಕನ್ನಡಸಾಹಿತ್ಯವನ್ನು ಅಭಿವೃದ್ಧಿಪಡಿಸುವದೂ ಮತ್ತು ಕನ್ನಡ ಗ್ರಂಥಕರ್ತರಿಗೆ ಪಾರಿತೋಷಿಕ ಮೊದಲಾದವುಗಳ ಮುಖಾಂತರ ಪ್ರೋತ್ಸಾಹನಮಾಡುವದೂ, ಈ ಸಂಘದ ಉದ್ದೇಶಗಳಾಗಿರುವುವು. ಶ್ರೀ. ಎಸ್. ಎಸ್. ಬಸವನಾಳ್ ಎಮ್. ಎ. ಇವರ ಸಂಪಾದಕತ್ವದಲ್ಲಿ 'ವಾಗ್ಭೂಷಣ' ವೆಂಬ ಮಾಸಪತ್ರಿಕೆಯನ್ನು ಹೊರಡಿಸುವದು.

## ಕರ್ನಾಟಕ ಮಹಿಳಾ ವಿದ್ಯಾಲಯ, ಧಾರವಾಡ

ನಮ್ಮ ಭಾರತೀಯ ಆದರ್ಶಗಳಿಗೂ ಮತ್ತು ಅನೂಚಾನವಾಗಿ ಬಂದ ಆಚಾರಗಳಿಗೂ ಅನುಗುಣವಾಗಿ ಸ್ತ್ರೀಯರಿಗೆ ಶಿಕ್ಷಣವನ್ನು ಕೊಡುವದೇ ಈ ವಿದ್ಯಾಲಯದ ಧ್ಯೇಯವು. ಮುಖ್ಯೋಪಾಧ್ಯಾಯರು- ಎಸ್. ಎಸ್. ಕುಂಭಕೋಣಮ್, ಬಿ. ಎಸ್. ಸಿ.; ಕಾರ್ಯದರ್ಶಿನಿ- ಶ್ರೀಮತಿ ಲಕ್ಷ್ಮೀಬಾಯಿ ಕುಂಭಕೋಣಮ್. ಒಟ್ಟು ವಿದ್ಯಾರ್ಥಿನಿಯರ ಸಂಖ್ಯೆ, ೧೦೨.

**ಕರ್ಣಾಟಕ ಸಾಹಿತ್ಯ ಪರಿಷತ್, ಶಂಕರಪುರ, ಬೆಂಗಳೂರು**:—ಕನ್ನಡ ಭಾಷೆಯನ್ನೂ, ಸಾಹಿತ್ಯವನ್ನೂ ಪೋಷಿಸಿ, ಅಭಿವೃದ್ಧಿ ಮಾಡುವದೇ, ಪರಿಷತ್ತಿನ ಮುಖ್ಯ ಉದ್ದೇಶವು. ಗೌರವ ಕಾರ್ಯದರ್ಶಿಗಳು :—ಬಿ. ವೆಂಕಟನಾರಣಪ್ಪ, ಎಮ್. ಎ. ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ ಯೆಂಬ ತ್ರೈಮಾಸಿಕ ಪತ್ರವು ಹೊರಡಿಸಲ್ಪಡುತ್ತಿರುವದು. ಮೈಸೂರು ಸರಕಾರದವರು ಪರಿಷತ್ತಿಗೆ ಧಾರಾಳವಾದ ಸಹಾಯವನ್ನು ಮಾಡುತ್ತಿರುವರು.

## ಭಾರತ ವೈಭವ ಸಮಾಜ, ಬೆಳಗಾವ್

ಶ್ರೀ ಧೋಂಡೋ ರಾಜಾರಾಮ್ ಠಾಕೂರ್ ಇವರು ೧೯೧೮ ರಲ್ಲಿ ಸ್ಥಾಪಿಸಿದರು. ಉದ್ದೇಶ- ಸಾಮಾನ್ಯ ಜನತೆಯ ಶಿಕ್ಷಣ, ನಿಮ್ನ ಜಾತಿಯವರ ಉದ್ಧಾರ, ಮತ್ತು ತರುಣರು ದೇಶಕ್ಕೆ ಉಪಕಾರವಾದ ಆದರ್ಶ ಜೀವನವನ್ನು ನಡೆಸುವಂತೆ ಶಿಕ್ಷಣ. ಈ ಸಮಾಜದ ವತಿಯಿಂದ ಒಂದು ಮುಫತ್ ವಾಚನಾಲಯವೂ, ನಿಮ್ನ ಜಾತಿಯವರ ಶಾಲೆಗಳೂ, 'ತರುಣಭಾರತ' ವೆಂಬ ಮಾಸಪತ್ರಿಕೆಯೂ ಒಂದು ವಾಗ್ವರ್ಧಿನೀಸಭೆಯೂ, ಮತ್ತು ಒಂದು ಸ್ವಯಂ ಸೇವಕರ ಸಮಿತಿಯೂ, ನಡೆಸಲ್ಪಡುತ್ತಿರುವವು. ಅಧ್ಯಕ್ಷ- ಯಶವಂತ ನಾರಾಯಣ ಕಾಮತ್.

## ಸಾಧಕಾಶ್ರಮ - ಕತ್ರಿಬೆಟ್ಟ - ಮಂಗಳೂರು

ಶ್ರೀ ಕಾರ್ನಾಡ ಸದಾಶಿವರಾಯರು, ಸಬರ್ಮತಿಯ ಸತ್ಯಾಗ್ರಹ ಆಶ್ರಮದ ಮೇಲ್ಪಂಕ್ತಿಯನ್ನನುಸರಿಸಿ, ಈ ಸಂಸ್ಥೆಯನ್ನು ಸ್ಥಾಪಿಸಿರುವರು. ಪೋಷಕರೂ ಇವರೇ. ಒಂದು ಮಾಧ್ಯಮಿಕ ಶಾಲೆಯು ನಡೆಸಲ್ಪಡುತ್ತಿರುವದು. ಕನ್ನಡ ಭಾಷೆಯಲ್ಲಿಯೇ ಶಿಕ್ಷಣ. ವಿದ್ಯಾರ್ಥಿಗಳೆಲ್ಲರೂ ಆಶ್ರಮದಲ್ಲಿಯೇ ವಾಸಿಸಬೇಕು. ಔದ್ಯೋಗಿಕ ಶಿಕ್ಷಣವೂ ಕೊಡಲ್ಪಡುತ್ತಿರುವದು.

## ಭಾರತ ಸೇವಾ ಸಮಿತಿ - ಮಂಗಳೂರು

ಧಾರ್ಮಿಕ, ಆರ್ಥಿಕ, ನೈತಿಕ, ಸಾಮಾಜಿಕ ಉನ್ನತಿಯೇ ಈ ಸಮಿತಿಯ ಮುಖ್ಯೋದ್ದೇಶ. ಇದರಲ್ಲಿ ಮೆಂಬರಾಗತಕ್ಕವರು ಹಿಂದೂಗಳೇ ಆಗಿರಬೇಕು. ವರ್ಗಣಿಯನ್ನನುಸರಿಸಿ ಮೂರು ಪ್ರಕಾರದ ಮೆಂಬರುಗಳಿರುವರು- ಕಾರ್ಯದರ್ಶಿ- ಉಲ್ಲಾಳ ಸಂಜೀವರಾವ್.

## ಪ್ರಾಣಿದಯಾ ಜ್ಞಾನ ಪ್ರಸಾರಕ ಸಂಘ, ದಾವಣಗೆರೆ

ಗೋವು ಮತ್ತು ಇತರ ಪ್ರಾಣಿಗಳ ಕೊಲೆಗಳನ್ನು ನಿಲ್ಲಿಸುವದೇ ಇದರ ಧ್ಯೇಯ. ಗೋವುಗಳನ್ನು ಸಾಕುವದೂ ಒಂದು ಉದ್ದೇಶವಾಗಿರುವದು. ಪ್ರಶಂಸನೀಯ ಸಂಗತಿಯೆಂದರೆ ಈ ಸಂಘದ ಉದ್ಯಮದಿಂದ ಅನೇಕ ಗ್ರಾಮುಗಳಲ್ಲ ಪ್ರಾಣವಧೆಯು ನಿಶ್ಶೇಷವಾಗಿ ನಿಲ್ಲಿಸಲ್ಪಟ್ಟಿರುವದು. ಅಧ್ಯಕ್ಷರ:- ಶ್ರೀ ತವನಪ್ಪ ದೇವೇಂದ್ರಪ್ಪ.

## ಕರ್ಣಾಟಕ ಲಿಂಗಾಯತ್ ಎಡ್ಯುಕೇಷನ್ ಸೊಸೈಟಿ, ಬೆಳಗಾವ್ ಮತ್ತು ಧಾರವಾಡ

ಹೆಸರಿನಲ್ಲಿಯೇ ಸ್ಪಷ್ಟವಾಗಿರುವಂತೆ ಲಿಂಗಾಯಿತ ಸಹೋದರರಲ್ಲಿ ಶಿಕ್ಷಣವನ್ನು ಅಭಿವೃದ್ಧಿಪಡಿಸುವದೇ ಸಂಘದ ಉದ್ದೇಶವು. ಬೆಳಗಾವ್ ಮತ್ತು ಧಾರವಾಡದಲ್ಲಿ ಒಂದೊಂದು ಹೈಸ್ಕೂಲನ್ನೂ, ನಂತಮುರಿಯಲ್ಲಿ ಒಂದು ಮಾಧ್ಯಮಿಕ ಶಾಲೆಯನ್ನೂ ನಡೆಸುತ್ತಿರುವರು. ಅನೇಕ ಲಿಂಗಾಯತ ಪದವೀಧರರು ಸಂಘದ ಆಜೀವ ಸದಸ್ಯರಾಗಿರುವರು. ಅಧ್ಯಕ್ಷ:- ರಾವ್‌ಬಹದೂರ್ ಆರ್. ಎಸ್. ಅರತಳ ಐ. ಎಸ್. ಓ. ಕಾರ್ಯದರ್ಶಿ:- ವಿ. ವಿ. ಪಾಟೀಲ, ಬಿ. ಎ., ಬಿ. ಎಸ್. ಸಿ.

## ಪಂಚಮ ಎಡ್ಯುಕೇಷನ್ ಲೀಗ್, ಮೇಲುಕೋಟೆ ಮೈಸೂರು

ಶ್ರೀ. ಎಮ್. ಜಿ. ಶಾಮಯ್ಯಂಗಾರ್ ಇವರು ಪಂಚಮರ ಉದ್ಧಾರಕ್ಕಾಗಿ ಈ ಸಂಸ್ಥೆಯನ್ನು ಸ್ಥಾಪಿಸಿ, ನಡೆಸುತ್ತಿರುವರು.

## ಶ್ರೀಯದುಗಿರಿ ಸದಾನಂದಸಭಾ

ಮೇಲುಕೋಟೆಯ ಎಮ್. ಜಿ. ಶಾಮಯ್ಯಂಗಾರ್ಯರೇ ಇದಕ್ಕೆ ಕಾರ್ಯದರ್ಶಿಗಳು.

## ಕರ್ಣಾಟಕಸಭಾ, ವೆಪರಿ, ಮದ್ರಾಸ್

ಮದ್ರಾಸಿನ ಕನ್ನಡಿಗರಲ್ಲಿ ಅನ್ಯೋನ್ಯವನ್ನೂ, ಸೌಹಾರ್ದವನ್ನೂ ಬೆಳಸುವ ಉದ್ದೇಶದಿಂದ ಈ ಸಭೆಯು ಸ್ಥಾಪಿತವಾಗಿರುವದು. ಅಧ್ಯಕ್ಷರು ರಾವ್‌ಸಾಹೇಬ್ ಡಾಕ್ಟರ್ ಯು ರಾಮರಾವ್, ಎಮ್. ಎಲ್. ಸಿ., ಎಫ್. ಎಮ್ ಯು. ಕಾರ್ಯದರ್ಶಿಗಳು:- ಬಿ. ರಾಮರಾವ್, ಎಮ್. ಎ., ಎಲ್. ಎಲ್. ಬಿ.

## ಮಂಡ್ಯಮ್ ಅಸೋಸಿಯೇಷನ್, ಮೈಸೂರು

ಅಯ್ಯಂಗಾರ್ಯರಲ್ಲಿ ಮಂಡ್ಯಮ್ ಪಂಗಡದವರ ಅಭಿವೃದ್ಧಿಗೋಸ್ಕರವಾಗಿ ೧೮೯೪ ರಲ್ಲಿ ಸ್ಥಾಪಿಸಲ್ಪಟ್ಟಿತು. ವಾಚನಾಲಯ ಉಪನ್ಯಾಸಗಳು, ಆಟಪಾಟುಗಳು, ಇವೆಲ್ಲಾ ನಡೆಸಲ್ಪಡುತ್ತಿರುವವು. ಅಧ್ಯಕ್ಷ:- ಡಾ॥ ಎಮ್. ಎ. ಸಂಪತ್ಕುಮಾರನ್ ಎಮ್. ಎ., ಪಿ. ಎಚ್. ಡಿ. ಕಾರ್ಯದರ್ಶಿ:- ಎಮ್. ಬಿ. ಶಾಮಯ್ಯಂಗಾರ್.

## ಕರ್ಣಾಟಕಸಂಘ, ಸೆಂಟ್ರಲ್ ಕಾಲೇಜು, ಬೆಂಗಳೂರು

ಕರ್ಣಾಟಕ ಭಾಷೆ ಮತ್ತು ಇತಿಹಾಸ ಇವುಗಳ ಅಭಿವೃದ್ಧಿಯ ಉದ್ದೇಶದಿಂದಲೇ, ೧೯೧೮ ರಲ್ಲಿ ಸ್ಥಾಪಿಸಲ್ಪಟ್ಟಿತು. ಆಗಿಂದಾಗ್ಗೆ ಗ್ರಂಥಗಳನ್ನು ಪ್ರಕಾಶಿಸುವದಲ್ಲದೆ, "ಪ್ರಬುದ್ಧ ಕರ್ಣಾಟಕ"ವೆಂಬ ತ್ರೈಮಾಸಿಕ ಪತ್ರವನ್ನು ಪ್ರಕಟಿಸುವದು.

## ಮಿಥಿಕ್ ಸೊಸೈಟಿ, ಬೆಂಗಳೂರು

(ಸ್ಥಾ:-೧೯೦೯) ಪ್ರಾಕ್ತನ ವಿಮರ್ಶೆ, ಇತಿಹಾಸ, ಧರ್ಮಮನಶ್ಶಾಸ್ತ್ರ, ಇವುಗಳಲ್ಲೆಲ್ಲಾ ಶೋಧಗಳನ್ನು ಮಾಡಿ, ಪ್ರಜಾಶಿಕ್ಷಣ

ವನ್ನು ಕೊಡುವದು ಸಂಘದ ಧ್ಯೇಯ. ಆಗಿಂದಾಗ್ಗೆ, ವ್ಯಾಖ್ಯಾನಾದಿಗಳ ವ್ಯವಸ್ಥೆಯನ್ನು ಮಾಡುವದಲ್ಲದೆ ಉತ್ತಮ ದರ್ಜೆಯ ಒಂದು ತ್ರೈಮಾಸಿಕ ಪತ್ರಿಕೆಯನ್ನೂ ಪ್ರಕಾಶಿಸುವರು. ವಿದ್ವತ್ತಿನಿಂದ ಕೂಡಿದ ಲೇಖಗಳು ಬರುವವು ಅಧ್ಯಕ್ಷ:-ರಾಜಸಭಾ ಭೂಷಣ, ರೆವರೆಂಡ್, ಎ. ಎಮ್. ಟೇಬಾರ್ಡ್, ಎಮ್. ಎ. ಕಾರ್ಯದರ್ಶಿ:- ಎಸ್. ಶ್ರೀಕಂಠಯ್ಯ, ಬಿ ಎ. ಬಿ. ಎಲ್. ೬೧೮ ಮೆಂಬರುಗಳಿರುವರು.

## ಶ್ರೀಮದ್ವೀರ ಪ್ರಗತಿಕ ಸಂಘ, ಧಾರವಾಡ ಸ್ಥಾ ೧೯೨೪.

ಎಲ್ಲಾ ಪ್ರಕಾರದಿಂದಲೂ, ಎಲ್ಲಾ ಬಾಬುಗಳಲ್ಲಿಯೂ ವೀರಶೈವರ ಅಭಿವೃದ್ಧಿಯ ಉದ್ಯಮವೇ ಈ ಸಂಘದ ಧ್ಯೇಯವು. ಕಾರ್ಯದರ್ಶಿ:- ಶಿವಮೂರ್ತಿ ಸ್ವಾಮಿ ಹಿರೇಮಠ ಮತ್ತು ಹುಚ್ಚಯ್ಯಸ್ವಾಮಿಕಟ್ಟೀಮನಿ.

## ಕರ್ಣಾಟಕ ತಿಲಕ ಸಂಘ, ಚಿತ್ರದುರ್ಗ

ಪ್ರಜೆಗಳಲ್ಲ ರಾಷ್ಟ್ರೀಯ ಭಾವಗಳನ್ನು ಹರಡಿ, ರಾಷ್ಟ್ರೋದ್ಯಮಕ್ಕೆ ತಯಾರುಮಾಡುವದೇ ಸಂಘದ ಉದ್ದೇಶ. ಸ್ಥಾಪಕರು:- ಗುಂಡೋ ರಾಮಚಂದ್ರ ಹರಿಹರ. ಕಾರ್ಯದರ್ಶಿ:- ಎನ್. ಭೀಮರಾವ್, ಬಿ. ಎ.

## ಮೈಸೂರು ಲಿಟರರಿ ಯೂನಿಯನ್

(ಸ್ಥಾ. ೧೮೭೬) - ಜಾಹೀರ್ ವ್ಯಾಖ್ಯಾನಗಳನ್ನು ಮಾಡಿಸುವದು ಒಂದು ಮುಖ್ಯ ಉದ್ದೇಶ. ಒಂದು ವಾಚನಾಲಯವು ನಡೆಸಲ್ಪಡುತ್ತಿರುವದು. ಅಧ್ಯಕ್ಷ: ಡಾ॥ ಬ್ರಜೇಂದ್ರನಾಥಶೀಲ್, ಮೈಸೂರು ವಿದ್ಯಾಪೀಠದ ಕುಲಪತಿಗಳು. ಕಾರ್ಯದರ್ಶಿ.- ಎಮ್. ವೆಂಕಟಕೃಷ್ಣಯ್ಯನವರು.

## ಮಹಿಳಾ ಸೇವಾ ಸಮಾಜ

ಸ್ತ್ರೀಯರ ಶಿಕ್ಷಣವೇ ಇದರ ಮುಖ್ಯೋದ್ದೇಶ. ಅಧ್ಯಕ್ಷಿಣಿ:- ಶ್ರೀಮತಿ ಪಾರ್ವತಮ್ಮ ಚಂದ್ರಶೇಖರಯ್ಯರ್.

## ಶಾರದಾ ಸ್ತ್ರೀ ಸಮಾಜ, ಬೆಂಗಳೂರು

(ಸ್ಥಾ. ೧೯೧೩) ನಮ್ಮ ದೇಶದ ಸ್ತ್ರೀಯರಿಗೆ ಕಲಾ ಮತ್ತು ಉದ್ಯೋಗ ಇವುಗಳಲ್ಲಿ ಶಿಕ್ಷಣವನ್ನು ಕೊಡುವದು ಇದರ ಉದ್ದೇಶ. ಕಾರ್ಯದರ್ಶಿ:- ಶ್ರೀಮತಿ ಆರ್. ಕಲ್ಯಾಣಮ್ಮ.

## ಬಾಲ ಮಾರುತೀ ಸಂಸ್ಥೆ, ಧಾರವಾಡ

ನಮ್ಮ ಬಾಲಕರು ಮತ್ತು ತರುಣರು ಇವರಲ್ಲಿ ಶರೀರ ಬಲವು ಬೆಳೆಯುವಂತೆ, ವ್ಯಾಯಾಮಾದಿಗಳನ್ನು ಕಲಿಸುವದು ಈ ಸಂಸ್ಥೆಯ ಮುಖ್ಯೋದ್ದೇಶ.

## ರಾಷ್ಟ್ರಸೇವಾಸಮಿತಿ, ಬೆಂಗಳೂರು

ಮೈಸೂರಿನ ಪ್ರಜೆಗಳಲ್ಲಿ ಸ್ವದೇಶ ಪ್ರೇಮವು ಎಚ್ಚತ್ತು, ರಾಷ್ಟ್ರ ಭಾವಗಳು ಹರಡುವಂತೆ ಮಾಡುವದೇ ಸಮಿತಿಯ ಉದ್ದೇಶ. ರಾಷ್ಟ್ರ ಭಜನೆ, ಮತ್ತು ವ್ಯಾಖ್ಯಾನಾದಿಗಳು ನಡೆಸಲ್ಪಡುವವು. (ಸ್ಥಾ ೧೯೨೪) ಅಧ್ಯಕ್ಷ:- ಶಾ ಜವೇರ್‌ಚಂದ್ ಸೇಟ್. ಕಾರ್ಯದರ್ಶಿ:- ಪಿ. ಆರ್. ರಾಮಯ್ಯ.

### ಟಿಪ್ಪಣಿ ೭

## ಆಧುನಿಕ ಗ್ರಂಥಕರ್ತೃಗಳು

೧೯ ಮತ್ತು ೨೦ ನೆಯ ಶತಮಾನದ ಗ್ರಂಥಕರ್ತೃಗಳಲ್ಲಿ ನಂದ ಳಿಕೆ ಲಕ್ಷ್ಮೀನಾರಾಯಣಪ್ಪನವರು, ಬಿ. ವೆಂಕಟಾಚಾರ್ಯರು ಮತ್ತು ಬಸಪ್ಪಶಾಸ್ತ್ರಿಗಳು ಇವರಿಗೆ ಅಗ್ರಸ್ಥಾನವನ್ನು ಕೊಡಬೇಕು. ಇವ ರಲ್ಲೊಬ್ಬಬ್ಬರೂ ಬೇರೆ ಬೇರೆ ವಿಧವಾಗಿ ಕನ್ನಡ ಸಾಹಿತ್ಯದ ಬೆಳವಣಿ ಗೆಗೆ ಹೊಸಮಾರ್ಗಗಳನ್ನು ಕಂಡು ಹಿಡಿದು ಕನ್ನಡಿಗರಲ್ಲಿ ಸ್ವಭಾಷಾ ವಾತ್ಸಲ್ಯವನ್ನುಂಟು ಮಾಡಿದರು. ಲಕ್ಷ್ಮೀನಾರಾಯಣಪ್ಪನವರು ಹಳಗನ್ನಡಕ್ಕೆ ಹೊಸ ಹುರಪುಂಟುಮಾಡಿದರು. ವೆಂಕಟಾಚಾರ್ಯರೇ ವಂಗ ಭಾಷೆಯಿಂದ ಗ್ರಂಥಗಳನ್ನು ಕನ್ನಡಕ್ಕೆ ತರ್ಜುಮೆ ಮಾಡಿದವ

ರಲ್ಲಿ ಮೊದಲನೆಯವರು. ಬಸಪ್ಪಶಾಸ್ತ್ರಿಗಳು ಕನ್ನಡದಲ್ಲಿ ನಾಟಕಗಳನ್ನು ಬರೆದಿರುವವರಲ್ಲಿ ಶ್ರೇಷ್ಠರು.

ಲಕ್ಷ್ಮೀನಾರಾಯಣಪ್ಪನವರು ೧೮೭೦ ನೆಯ ಜನವರಿ ೨೪ ರಲ್ಲಿ ಉಡುಪಿಯ ಬಳಿ ಇರುವ ನಂದಳಿಕೆ ಗ್ರಾಮದಲ್ಲಿ ಜನಿಸಿದರು. ತಂದೆ ತಾಯಿಗಳು ತೀರ ಬಡವರಾಗಿದ್ದರಿಂದ ಹೆಚ್ಚು ಕಾಲ ವಿದ್ಯಾರ್ಜನೆ ಮಾಡಲಾಗದೆ, ಉಡುಪಿಯಲ್ಲಿದ್ದ ಪ್ರಾಥಮಿಕ ಶಾಲೆಯಲ್ಲಿ ಗರಡಿಸಾಧನೆ ಕಲಿಸುವ ಜಟ್ಟಿಯಾಗಿ ಸೇರಿದರು. ಕೆಲವು ದಿನಗಳಲ್ಲಿ ಅಲ್ಲಿಂದ ಕುಂದಾಪುರಕ್ಕೆ ಹೋದರು. ಅಂತರ್ಗತವಾಗಿದ್ದ ಸ್ವಾಭಾವಿಕ ಕವಿತಾ ಶಕ್ತಿಯು ವಿಕಸಿತವಾಗಲು ಅಲ್ಲಿಯ ಪ್ರಕೃತಿ ಸೌಂದರ್ಯದ ನೆರವುಂಟಾಯಿತು. ಸಮಯ ದೊರೆತಾಗೆಲ್ಲಾ ಕನ್ನಡ ಗ್ರಂಥಗಳನ್ನು ಓದುತ್ತಾ ಶೀಘ್ರದಲ್ಲಿ ಕನ್ನಡ ಸಾಹಿತ್ಯದಲ್ಲಿ ಹೆಚ್ಚಾದ ಪರಿಶ್ರಮವನ್ನು ಹೊಂದಿ, ಉಡುಪಿಯಲ್ಲಿದ್ದ ಮಿಷನ್ ಹೈ ಸ್ಕೂಲಿನಲ್ಲಿ ಕನ್ನಡ ಪಂಡಿತರಾದರು. ಇಲ್ಲಿಯೇ ಅವರು ಕನ್ನಡ ವಚನ ಗ್ರಂಥಗಳಲ್ಲಿ ಶ್ರೇಷ್ಠವಾದ ಮತ್ತು ಸುಪ್ರಸಿದ್ಧವಾದ 'ರಾಮಾಶ್ವಮೇಧವನ್ನು' ಹಳಗನ್ನಡದಲ್ಲಿ ಬರೆದುದು. ಅವರ ಭಾಷೆಯು ಬಿಕ್ಕಟ್ಟೂ, ರಸಿಕತೆಯೂ, ಎಲ್ಲರನ್ನೂ ಮನದಣಿಸುವುವು. 'ರಾಮ ಪಟ್ಟಾಭಿಷೇಕ', 'ರತ್ನಾವಳಿ ಕಲ್ಯಾಣ' ಮತ್ತು 'ಅದ್ಭುತ ರಾಮಾಯಣ' ಎಂಬ ಬೇರೆ ಗ್ರಂಥಗಳನ್ನೂ ರಚಿಸಿರುವರು. ಹಳಗನ್ನಡದಲ್ಲಿ ಇವರದೇ ಒಂದು ಶೈಲಿ.

ವೆಂಕಟಾಚಾರ್ಯರು ಮೈಸೂರು ದೇಶದಲ್ಲಿ ಮುನಸೀಫರಾಗಿದ್ದರು. ಇವರು ಬಂಗಾಳದಲ್ಲ ಸುಪ್ರಸಿದ್ಧ ಪುರುಷರಾದ ಬಂಕಿಂಚಂದ್ರ ಬಾಬುಗಳ ಅನೇಕ ಗ್ರಂಥಗಳನ್ನು ಕನ್ನಡಕ್ಕೆ ತರ್ಜುಮೆ ಮಾಡಿದರು. ಸ್ವತಃ ಹೆಚ್ಚಾಗಿ ಗ್ರಂಥಗಳನ್ನು ಬರೆಯದಿದ್ದರೂ ತರ್ಜುಮೆಯಲ್ಲಿ ತಮ್ಮ ಶಕ್ತಿಯನ್ನು ತೋರ್ಪಡಿಸಿರುವರು. ಬಂಕಿಂಚಂದ್ರರ ದುರ್ಗೇಶನಂದಿನಿ, ವಿಷವೃಕ್ಷ ಮುಂತಾದ ಗ್ರಂಥಗಳನ್ನು ಇಂಡಿಯಾದೇಶದ ಎಲ್ಲಾ ಭಾಷೆಗಳಲ್ಲೂ ಮತ್ತು ಪಶ್ಚಿಮದೇಶದ ಕೆಲವು ಭಾಷೆಗಳಲ್ಲೂ ಓದಬಹುದು. ಹೀಗಿರುವಲ್ಲ ಈ ಗ್ರಂಥಗಳನ್ನು

ಕನ್ನಡಕ್ಕೆ ಪರಿವರ್ತಿಸಿದ ಮ| ರಾ| ವೆಂಕಟಾಚಾರ್ಯರಿಗೆ ನಾವು ಋಣಿಗಳಾಗಿರಬೇಕಲ್ಲವೇ ?

೧೯ ನೆಯ ಶತಮಾನಕ್ಕೆ ಮುಂಚೆ ಕನ್ನಡದಲ್ಲಿ ನಾಟಕಗಳನ್ನು ಬರೆದಿರುವವರ ಸಂಖ್ಯೆಯು ತೀರ ವಿರಳವಾಗಿದೆ. ಈ ಶತಮಾನದಲ್ಲಿಯೇ ಕರ್ಣಾಟಕ ನಾಟಕ ಗ್ರಂಥಗಳು ಹೊಸಹೊಸ ರೀತಿಯಲ್ಲಿ ಹೊರಬಿದ್ದವು. ಇವುಗಳಲ್ಲಿ ಬಸಪ್ಪಶಾಸ್ತ್ರಿಗಳು ರಚಿಸಿದ ಶಾಕುಂತಲ ನಾಟಕವೇ ಶ್ರೇಷ್ಠವಾದುದು. ಇವರ ನಾಟಕವು ಕವಿಕಾಳಿದಾಸನ ಮೂಲನಾಟಕವನ್ನು ರಸ ಮತ್ತು ಶೈಲಿಗಳಲ್ಲಿ ಹೋಲುತ್ತದೆ. ಇವರು ಚಾಮರಾಜೇಂದ್ರ ಒಡೆಯರ ಕಾಲದಲ್ಲಿ ಆಸ್ಥಾನ ಪಂಡಿತರಾಗಿದ್ದರು.

ಎಂ. ಡಿ. ಅಳಸಿಂಗರಾಚಾರ್ಯರು — ಕನ್ನಡ ಪಂಡಿತ, ಪ್ರೆಸಿಡೆನ್ಸಿ ಕಾಲೇಜ್ ಮದ್ರಾಸು. ಇವರು ೧೮೭೭ ರಲ್ಲಿ ಜನಿಸಿದರು. ಸುಮಾರು ೧೫ ವರ್ಷಗಳ ಹಿಂದೆ ವಾಲ್ಮೀಕಿ ರಾಮಾಯಣವನ್ನು ಕನ್ನಡಿಸಿ ಎಂಟು ವಚನಗ್ರಂಥಗಳಾಗಿ ಪ್ರಕಟಿಸಿದರು. ಇವರು ಬರೆದಿರುವ ಅಥವಾ ಪರಿವರ್ತಿಸಿರುವ ಇತರ ಗ್ರಂಥಗಳು :—೧. ಭಾಗವತ ಎಂಟು ಸ್ಕಂದಗಳು. ೨. ಶ್ರೀಮತಿಪರಿಣಯ (ನಾಟಕ). ೩. ಚಂಡಕೌಶಿಕ ನಾಟಕ. ೪. ಸ್ವಪ್ನವಾಸವದತ್ತ. ೫. ಡಾಕ್ಟರ್ ಯು. ರಾಮರಾಯರ ಪ್ರಥಮ ಚಿಕಿತ್ಸೆ. ೬. ಪೌರನೀತಿ. ೭. ಐರೋಪ್ಯ ಯುದ್ಧದ ಚರಿತ್ರೆ ೮. ಆರ್ಯಮತೋಪಾಖ್ಯಾನಂ. ೯. ಯುದ್ಧದ ಅನುಭವಗಳು. ೧೦. ಪ್ರಾಣಿಶಾಸ್ತ್ರ. ೧೧. ಸಸ್ಯಶಾಸ್ತ್ರ. ೧೨. ಸನ್ಯಾಸಿಗೀತ (ಸಂ) ಇತ್ಯಾದಿ.

ಆಸ್ಥಾನ ಮಹಾ ವಿದ್ವಾನ್ ಕವಿತಿಲಕ ಸೋಸಲೆ ಅಯ್ಯಾಶಾಸ್ತ್ರಿಗಳು :—ಇವರಿಗೆ ಈಗ ೬೮ ವರ್ಷ ವಯಸ್ಸು. ಈಗಲೂ ಪ್ರತಿನಿತ್ಯ ಎರಡು ತಾಸು ಹೊತ್ತು ಸಂಸ್ಕೃತದಲ್ಲಿ ಕವನ ಮಾಡುತ್ತಾರೆ. ಇವರು ಮೈಸೂರು ಮಹಾರಾಜರ ಆಸ್ಥಾನ ಕವಿಗಳು. ಶೇಷರಾಮಾಯಣವೆಂಬ ಪದ್ಯಗ್ರಂಥ, ಮೈಸೂರು ಮಹಾರಾಜ ಚರಿತ್ರೆ

ಯೆಂಬ ಚಂಪೂ ಗ್ರಂಥ, ರಾಮಾಯಣ ನಾಟಕ, ಕರ್ಣಾಟಕ ವಿಕ್ರಮೋರ್ವಶೀಯ ಮುಂತಾದ ಕನ್ನಡಗ್ರಂಥಗಳನ್ನೂ, ಕೆಲವು ಸಂಸ್ಕೃತ ಗ್ರಂಥಗಳನ್ನೂ ರಚಿಸಿರುವರು.

ಭಾರತಿ ಸಂಪಂಗಿರಾಮಯ್ಯ ಬೆಂಗಳೂರು:—ಇವರು ಮಾಧವಿಕಂಕಣ, ಶಕ್ತಿ, ಪಂಚತಂತ್ರ, ಹಿಂದೀಭಾಷಾಪ್ರವೇಶ, ನೆಲದ ಅಳತೆ, ಪ್ರಶ್ನೋತ್ತರ ಲೇಖ್ಯಬೋಧಿನಿ, ಮುಂತಾದ ಗ್ರಂಥಗಳನ್ನು ಬರೆದಿರುವರು.

ಬೆನಗಲ್ಲು ರಾಮರಾಯರು ಎಂ. ಎ. ಎಲ್. ಎಲ್. ಬಿ:—ಇವರು ಸನ್ ೧೮೭೬ ರಲ್ಲಿ ಮಂಗಳೂರಿನಲ್ಲಿ ಜನಿಸಿದರು. ಕೆಲವು ಕಾಲ ಮೈಸೂರು ಟ್ರೈನಿಂಗ್ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದು ಅನಂತರ ಮುಂಬಯಿ ರಾಜಕೀಯ ಪರಿವರ್ತಕ ಕಚೇರಿಯಲ್ಲಿ ೧೯೧೦ ರವರೆಗೆ ಕೆಲಸಮಾಡಿದರು. ಅದೇ ಸಂವತ್ಸರ ಏಪ್ರಿಲ್ ತಿಂಗಳಲ್ಲಿ ಮದ್ರಾಸ್ ಸರ್ಕಾರದ ಕನ್ನಡ ಟ್ರಾನ್ಸ್ಲೇಟರ್‌ರಾಗಿ ನಿರ್ಗಾಯಿಸಲ್ಪಟ್ಟರು. 'ಸುವಾಸಿನೀ' ಮತ್ತು 'ವಾಗ್ಭೂಷಣ'ಗಳೆಂಬ ಪತ್ರಿಕೆಗಳಿಗೆ ಕೆಲವು ಕಾಲ ಸಂಪಾದಕರಾಗಿದ್ದರು. ಇವರ ಗ್ರಂಥಗಳು :—೧. ಕಲಹಪ್ರಿಯ ೨. ಸತ್ಯರಾಜನ ಪೂರ್ವದೇಶ ಯಾತ್ರೆಗಳು ೩. ರಮಾಮಾಧವ ೪. ಸುಭದ್ರಾವಿಜಯ ೫. ಕರ್ಣಾಟಕ ಘೋಷಯಾತ್ರೆ ೬. ಕರ್ಣಾಟಕ ಕುಂದಮಾಲೆ ೭. ಸದಾಹಾರವಿವೇಚನೆ (ವಿವೇಕಾನಂದರವರ ಉಪನ್ಯಾಸದ ಭಾಷಾಂತರ) ೮ ತರುಬಲಾ ೯. ಇರವಾತಿ ೧೦. ಚಿಕ್ಕ ಕಥೆಗಳು ೧೧. ಮಹಸೀಯರ ಚರಿತ್ರೆಮಾಲೆ ೧೨. ತಂಜಾವೂರಿನ ನಾಯಕ ಅರಸುಗಳ ಚರಿತ್ರೆ ೧೩. ಹಳೇಬೀಡು ಕೈಫಿಯತ್ತು ೧೪. ಹೊಳೆಹೊನ್ನೂರು ಕೈಫಿಯತ್ತು ೧೫. ದೂತಾಂಗದ ಇತ್ಯಾದಿ

ಹೊಸಕೆರೆ ಚಿದಂಬರಯ್ಯನವರು, ಅಧ್ಯಾಪಕ, ಕರ್ಣಾಟಕ ಮಹಾವಿದ್ಯಾಲಯ ಧಾರವಾಡ:—ಜನನ ೧೮೭೦. ಗ್ರಂಥಗಳು ೧. ನೀತಿಸಾರ ೨. ಸ್ತ್ರೀಧರ್ಮಸಂಗ್ರಹ ೩. ಶಂಕರಸ್ತೋತ್ರಮಾಲ ೪. ಭಕ್ತಿಗೀತಾವಳಿ ೫. ಗಣಿತಾಬ್ಜಭಾಸ್ಕರ ೬. ಚರಿತ್ರಚಿಂತಾಮಣಿ

೭. ಉಪಾಧ್ಯಾಯರಯೋಗ್ಯತೆಗಳು ೮. ಗುಣನಿರೂಪಣೆ ೯. ಶಂಕರಕಥಾಮೃತ ೧೦. ಮಾಧವರಾವ್‌ಸಿಂಧ್ಯ ೧೧. ಜೋಧನಕ್ರಮ ೧೨ ಭಗವದ್ಗೀತಾಸಾರವಿಚಾರ ೨೨. ರಾಮನಾಮದಮಹಿಮೆ ಇತ್ಯಾದಿ.

ದತ್ತಾತ್ರೇಯ ಕೃಷ್ಣ ಭರದ್ವಾಜ, ವಿದ್ಯಾಭೂಷಣ, ಎಂ. ಎಲ್. ಎಸ್:-ಸಂಪಾದಕ ಭಕ್ತಿಸಂದೇಹ ಮಂಗಳೂರು:—ಜನನ ೧೮೯೧. ಗ್ರಂಥಗಳು. ೧. ಅಡವಿಯರಾಜ ೨. ಅನಂತನ ಅದೃಷ್ಟ ೩. ತಿಲಕ ಸಂದೇಶ ೪. ತಿಲಕಮಹಾರಾಜ ೫. ಅಸಹಕಾರಪತ್ರಗಳು ೬. ಹಿಂದಿ ಸ್ವರಾಜ್ಯ ೭. ಸ್ವರಾಜ್ಯ ವಿಶ್ವಕೋಶ ೩-೪ ಭಾಗಗಳು ೮. ಸ್ವರಾಜ್ಯಸೈಕ್ಲೋಪೀಡಿಯ ೧-೩ ಭಾಗಗಳು ೯. ಹಿಂದೀಭಾಷಾಸಾರಾ ಇತ್ಯಾದಿ.

ದೊರಸಾಮ್ಯೈಂಗಾರ್ಯ ಎಂ. ಎ, ಬಿ. ಎಲ್. ಹೈಕೋರ್ಟ್ ವಕೀಲ ಮೈಸೂರು :—೧. ವಿದ್ಯಾರಣ್ಯ ೨. ಇಂಗ್ಲೆಂಡಿನ ಸರ್ಕಾರಿ ಕ್ರಮ.

ದ್ವಾರಪಾಲ ಜಿನಪ್ಪಜಾದಿ, ಬೆಂಗಳೂರು :— ಲಾವಣಿಪದ ಮಾಲಿಕೆ.

ಗಳಗನಾಥ ಧಾರವಾಡ :—೧. ಈಶ್ವರೀಸೂತ್ರ ೨. ಕಮಲ ಕುಮಾರಿ ೩. ಕನ್ನಡಿಗರ ಕರ್ಮಕಥೆ ೪. ಕುಮುದಿನಿ ೫. ಪ್ರಬುದ್ಧ ಪದ್ಮನಯನೆ ಇತ್ಯಾದಿ.

ಗೋವಿಂದರಾಜಯ್ಯಂಗಾರ್, ರೆಸಿಡೆಂಟ್‌ಆಫೀಸು, ಬೆಂಗಳೂರು ೧. ತಾಮಸಪ್ರಭು ಚರಿತೆ ೨. ಪ್ರಿಂರೋಜವಿಜಯ ಇತ್ಯಾದಿ.

ಎಸ್. ವಿ. ಗುಂಜಲಿ ಬಿ. ಎ., ಎಲ್. ಎಲ್. ಬಿ. ಪ್ಲೀಡರ್ ಬೆಳಗಾಂವಿ :-೧. ಆತ್ಮೋದ್ಧಾರ ೨. ಶ್ರೀರಾಮಕೃಷ್ಣಸದ್ಬೋಧ ಸಂಗ್ರಹ ಇತ್ಯಾದಿ.

ಉಡಪಿಗೋವಿಂದರಾವ್, ತಿಲಕವಿದ್ಯಾಲಯ ಮಂಗಳೂರು:- ೧ ಸ್ವದೇಶಿ ೨. ಸಮಾಜ.

ಡಿ. ವಿ. ಗುಂಡಪ್ಪನವರು ಶಂಕರಪುರ ಬೆಂಗಳೂರು :— ಇವರು ಬರೆದಿರುವ ಗ್ರಂಥಗಳು ೧. ಶ್ರೀವಿದ್ಯಾರಣ್ಯ ೨. ತಿಲೋತ್ತ ಮೇನಾಟಕ ೩. ದಿವಾನ್ ರಂಗಚಾರ್ಲು ೪. ಗೋಖಲೆಯವರ ಚರಿತೆ ೫. ಸಾಹಿತ್ಯ ಮತ್ತು ಜನಜೀವನ ೬. ಕನಕಾಲುಕ ೭. ಜೆಕೊಸ್ಲೋ ಜಿ ೮. ನಿವೇದನ ೯ ವಸಂತಕುಸುಮಾಂಜಲಿ ಇತ್ಯಾದಿ.

ಹರ್ಡೇಕರ್ ಮಂಜಪ್ಪ, ಸತ್ಯಾಗ್ರಹ ಆಶ್ರಮ, ಸ್ಥಾಪಕರು ಮತ್ತು ಅಧ್ಯಕ್ಷರು ಹರಿಹರ :—೧. ಶ್ರೀ ಬಸವಚರಿತ್ರೆ ೨. ಭಾರತೀ ಯರ ದೇಶಭಕ್ತಿ. ೩. ಶ್ರೀರಾಮತೀರ್ಥರ ಉಪನ್ಯಾಸ ೪ ಭಾಗಗಳು ೪. ಮಹಾತ್ಮಗಾಂಧಿಯವರ ಚರಿತ್ರೆ ೫ ಸ್ವಕರ್ತವ್ಯಸಿದ್ಧಾಂತ ೬. ಆ ರೋಗ್ಯ ಜೀವನ ೭. ಭಗವಾನ್‌ಬುದ್ಧ ಚರಿತ್ರೆ ೮. ವೀರಶೈವಸಮಾಜ ೯. ಸ್ತ್ರೀನೀತಿಸಂಗ್ರಹ ೧೦. ಬ್ರಹ್ಮಚರ್ಯ ಇತ್ಯಾದಿ:

ಜಿ. ಜಿ. ಜಾದವ್‌ಹಾವೇರಿ :—ಶ್ರೀ ಫಕೀರೇಶ್ವರ ಪುರಾಣ

ಕಲ್ಲೋಳಗಣೇಶ, ಬಿಜಾಪುರ :— ೧. ಎರಡನೆ ಬಾಜೀರಾಯನ ಕೆಲವು ಅಖ್ಯಾಯಿಕೆಗಳು ೨. ವಿವಿಧಕಲಾಶತಕವು

ಕೃಷ್ಣಾಚಾರ್ಯ, ರಾಯಚೂರು :—೧. ಬಿಜಾಪುರಸಿದ್ಧಾಂತ ಸಂಗ್ರಹ.

ಕೃಷ್ಣಾಜಿ ವೆಂಕಟೇಶಕುಲಕರ್ಣಿ :—ಒಬ್ಬ ತರುಣರಾಜಪುತ್ರ ಸರದಾರನು.

ಕಲ್ಯಾಣಮ್ಮ, ಸಂಪಾದಕಿ, ಸರಸ್ವತಿ, ಬೆಂಗಳೂರು :—ಜನನ ೧೮೮೨, ಗ್ರಂಥಗಳು ೧. ನಿರ್ಮಲೆ ೨. ನಿರ್ಭಾಗ್ಯವನಿತೆ ೩. ಸ್ನೇಹಲತೆ ೪. ಪ್ರಿಯಂವದ ೫. ಹಿಂದೂಭಾಗ್ಯೋದಯ ೬. ಲಲಿತೆ ೭. ಕಲ್ಯಾಣಿ ೮. ಸತಿಪದ್ಮ.

ಕೃಷ್ಣ ಶ್ರೀನಿವಾಸ ಬೇಟಗಿರಿ, ಕವಿಭೂಷಣ. ಅಧ್ಯಾಪಕ. ತಿಲಕ ವಿದ್ಯಾಲಯ ಬೆಳಗಾಂವಿ :—೧. ಮಧ್ಯಮವ್ಯಾಯೊಗ ೨. ರಮೆ ಉಮೆಯರ ಸಂವಾದ ೩. ರಾಷ್ಟ್ರೀಯ ಪದ್ಯಮಾಲ ಇತ್ಯಾದಿ.

ಆರ್. ಬಿ. ಕುಲಕರ್ಣಿ, ಕಾವ್ಯರತ್ನ, ಸಂಪಾದಕಕರ್ಣಾಟಕನರ ಜೀವನ ಗ್ರಂಥಮಾಲ. ಬೆಳಗಾಂವಿ:—೧. ಕನ್ನಡಿಗರ ಸರ್ವಸ್ವ ಅಥವಾ ಸಂಯುಕ್ತಕರ್ನಾಟಕ.

ಎಂ. ಎಸ್. ಕಾಮತ್ ಕನಕ ಹೈಸ್ಕೂಲ್ ಮಂಗಳೂರು:— ೧. ಗದಾಯುದ್ಧದ ಕಥೆ ೨. ಕ್ಷಾತ್ರತೇಜಸ್ಸು ೩. ಅಂಜೆಯ ಮನೆ ಇತ್ಯಾದಿ

ಕಮಲಾಂಬಾ ಚಂಗಯ್ಯಶೆಟ್ಟರ ಪುತ್ರಿ ಬೆಂಗಳೂರು:— ೧. ಅಬಲಾಸಚ್ಚರಿತ್ರಮಾಲಾ (ಪರಿವರ್ತನ)

ಟಿ. ಪಿ. ಕೈಲಾಸಂ ಬಿ. ಎ. ಎಫ್. ಆರ್. ಸಿ. ಎಸ್:— ಆಧುನಿಕ ನಾಟಕಗಳಲ್ಲಿ ನೂತನ ನಮೂನೆಯನ್ನು ಹೂಡಿರುವರು. ಪಶ್ಚಿಮದೇಶದಲ್ಲ ಪಳುವರ್ಷಗಳ ಕಾಲವಿದ್ದು ಅಲ್ಲನರಂಗ ಭೂಮಿಯನ್ನೂ ನಾಟಕಗಳನ್ನೂಪರೀಕ್ಷಿಸಿ ಸಾಮಾಜಿಕ ನಾಟಕಗಳನ್ನು ಬರೆದವರಲ್ಲಿ ಇವರೇ ಮೊದಲು. ಇವರನಾಟಕಗಳು ೧. ಟೊಳ್ಳುಗಟ್ಟಿ ೨. ಪೋಲೀ ಕಿಟ್ಟಿ ೩. ಅಪ್‌ಟುಡೇಟ್ ಅಮ್ಮಯ್ಯ ೪. ಸತ್ಯಹರಿಶ್ಚಂದ್ರ ೫. ಏಕಲವ್ಯ ೬. ತಿಪ್ಪಾರಹಳಿ ಇತ್ಯಾದಿ.

ಹನುಮಂತರಾಯರವರು, ಮೈಸೂರು:—ಇವರು 'ಮಧುರವಾಣಿ' ಎಂಬ ಉತ್ತಮ ಮಾಸಪತ್ರಿಕೆಗೆ ಸಂಪಾದಕರಾಗಿದ್ದರು. ಇವರ ಅಕಾಲ ಮರಣವು ಕನ್ನಡ ಮಾತೆಯ ಸೇವಕರಲ್ಲೊಬ್ಬರನ್ನು ಕೊಂಡೊಯ್ದಿತು.

ಲಕ್ಷ್ಮಣ ಸುಬ್ಬಾಜಿ ಮುಜುಮದಾರ್, ಗದಗ, ಜೊಂಬಾಯಿ ಆಧಿಪತ್ಯ:—೧. ಗಿರಿಜಾಕಲ್ಯಾಣಿ ೨. ಸುಧಾಮಚರಿತ್ರೆ ಎಂಬ ಕನ್ನಡ ಗ್ರಂಥಗಳನ್ನು ಬರೆದಿರುವರು.

ಲಿಂಗೇಶ, ವಿದ್ಯಾಭೂಷಣ, ಸಿದ್ಧಾಂತವಾಚಸ್ಪತಿ, ಎಂ. ಆರ್. ಎ. ಎಸ್. ಕುರ್ತಕೋಟಿ, ಧಾರವಾಡ:—ಅಷ್ಟೋತ್ತರ ಶತಶ್ಲೋಕಿ, ಸಿದ್ಧಾಂತ ಸುಧ ಎಂಬ ಸಂಸ್ಕೃತ ಗ್ರಂಥಗಳನ್ನೂ, ಗೀತಾಸಾರ ವಿಚಾರವೆಂಬ ಕನ್ನಡ ಗ್ರಂಥವನ್ನೂ ಬರೆದಿರುವರು.

ಲಕ್ಷ್ಮಣ ಪೈ ಹರ್ಡಿಕರ, ಬಂಟ್ವಾಳ ಪೋಸ್ಟು :—ನರೇಂದ್ರ ಮತ್ತು ಕುಮುದನಾಥ ಎಂಬ ಕನ್ನಡ ಗ್ರಂಥಗಳನ್ನು ಬರೆದಿರುವರು.

ಎಂ. ತಿಮ್ಮಪ್ಪಯ್ಯ, ಕಾವ್ಯ ಸೀನಿಯರ್ ಕನ್ನಡ ಪಂಡಿತರು, ಸೆಂಟ್ ಅಲಾಯಿಸಸ್ ಕಾಲೇಜ್, ಮಂಗಳೂರು :—೧೮೯೦ ರಲ್ಲಿ ಜನಿಸಿದುದು. ಇವರು ಚಂದ್ರಮತೀವಿಲಾಸ, ಸೊಬಗಿನಬಳ್ಳಿ, (ಪದ್ಯ) ನಡತೆಯನಾಡಿ, ಹಗಲಿರುಳು, ಬಡಹುಡುಗಿ, ಮಾತೃಭೂಮಿ (ಪದ್ಯ) ಎಂಬ ಕಾವ್ಯಗಳನ್ನು ಬರೆದಿರುವರು.

ಎಂ. ಶಂಕರಭಟ್ಟ, ಕಾವ್ಯರತ್ನ, ಜೂನಿಯರ್ ಕನ್ನಡ ಪಂಡಿತರು, ಸೆಂಟ್ ಅಲಾಯಿಸಸ್ ಕಾಲೇಜ್, ಮಂಗಳೂರು :—ಜನನವಾದ ವರ್ಷ ೧೮೯೨. ಇವರ ಗ್ರಂಥಗಳು -ಚಂದಭೀಮ, ತಿಲಕ ಪುರಾಣ, ಹೊಸಗನ್ನಡ, ರಾಮಾಶ್ವಮೇಧ, ಚಾಣಿಕ್ಯತಂತ್ರ.

ಮಂಜರಿ, ಎ. ಬಿ :—ಇವರು ಶನಿಪ್ರಭಾವವೆಂಬ ನಾಟಕ ಗ್ರಂಥಕರ್ತರು.

ಮೈಸೂರು ಸೀತಾರಾಮ ಶಾಸ್ತ್ರಿಗಳು. ಆಸ್ಥಾನವಿದ್ವಾನ್ ಹಳ್ಳದಕೇರಿ ಮೈಸೂರು (ಜನನ ೨೬ ನೇ ಅಕ್ಟೋಬರ್ ೧೮೬೮) ೧. ಪಾರ್ವತಿಪರಿಣಯ ೨. ಇಂದ್ರಕುಲವಿಜಯ ೩. ಶ್ರೀವಿಜಯ ೪. ಪದ್ಯಕದಂಬ ೫. ಪಂಚತಂತ್ರ ೬. ದ್ವಾದಶಮಂಜರಿ ೭. ಚತುರ್ದಶಮಂಜರಿ ೮ ಗೋಪಿಕಾಗೀತ ೯. ಶುಕ್ಲಮಂಜರಿ. ಇವುಗಳನ್ನೆಲ್ಲಾ ಕನ್ನಡದಲ್ಲಿರಚಿಸಿದ್ದಾರೆ.

ಮಾಧವಭೀಮರಾವ ಕಬ್ಬೂರ್, ಎಂ. ಎ. ಎಲ್. ಎಲ್. ಬಿ. ಧಾರವಾಡ :—ಭಗವಾನ್ ಶ್ರೀಕೃಷ್ಣ (ಕನ್ನಡ) ೨. ವೀರಮಾತೆ ಕುಂತಿ(ಕ) ೩. ಕುರುಪುಂಗವಭೀಷ್ಮ (ಕ) ಇವುಗಳನ್ನು ರಚಿಸಿದ್ದಾರೆ

ನಂಜನಗೂಡು ಶ್ರೀಕಂಠ ಶಾಸ್ತ್ರಿಗಳು, ಕನ್ನಡ ಪಂಡಿತರು, ಮೈಸೂರು ಅರಸೂ ಬೋರ್ಡಿಂಗ್ ಸ್ಕೂಲು, ಮೈಸೂರು:—

ಅನಂಗಸುಂದರಿ, ಜಾರಸುಂದರಿ, ರಾಧಾಮಾಧವಿ, ಸರಳಬಾಲಾ, ಮಾಧವಚಂದ್ರ, ಸಂತಾಪಕ, ಸತಿರೋಹಿಣಿ, ನಿರ್ಭಾಗ್ಯಚಾಣಿಕ್ಯ, ಅಧಿಕಪ್ರಸಂಗಿ, ಹಾಸ್ಯಾರ್ಣವ, ನಿಭಾಷಿತಲಹರಿ, ಸೀತಾಪರಿಣಯ ಅಭಿಜ್ಞಾನಪ್ರದಾನ, ರಾಘವಾಭ್ಯುದಯ, ವಿಜಯಾಭ್ಯುದಯ, ಸೀತಾ ಸುಭರಣಮೃಗ, ಧ್ರುವವಿಜಯ, ಕೃಷ್ಣವಿಜಯ, ಪ್ರಿಯದರ್ಶಿಕ, ನಿರುಪಮ, ಕಂಕಲತಪರಿಣಯ, ಉತ್ಪಲಕುಮಾರಿ, ತಿಲೋತ್ತಮ ಮೋಹನಿ, ಕರ್ಣಾಟಕಚಂದ್ರಿಕೆಯ ಸಂಪಾದಕರು ಮತ್ತು ಕರ್ಣಾಟಕ ಗ್ರಂಥಮಾಲೆಗೆಅವಕಾಶತೋಷಿಣಿಗಳಿಗೆ ಬರೆಯತಕ್ಕಂಥಾವರು.

ನರಸಿಂಹೈಯ್ಯಂಗಾರ್ ಎಂ. ಟಿ.,ಬಿ. ಎ.ಎಂ. ಆರ್. ಎ ಎಸ್. ಈಸ್ಟ್‌ಪಾರ್ಕ್‌ರೋಡು ಮಲ್ಲೇಶ್ವರ, ಬೆಂಗಳೂರು :—ವಾಸವದತ್ತ ಕಥಾಸಾರ (ಸಂಸ್ಕೃತ) ಬ್ರಾಹ್ಮಣೀಯ ಮತ ಮತ್ತು ತತ್ವ (ಇಂಗ್ಲೀಷು) ವೇದಾಂತವಾದಾವಳಿ, ದಿನಾಚಾರ್ಯ, ಸುಭಾಷಿತನೀತಿ, ಉಪದೇಶ ರತ್ನಮಾಲ ಇವುಗಳ ಸಂಪಾದಕರು

ನಾರಾಯಣ ವೆಂಕಟೇಶ ಕುರಡಿ, ಧಾರವಾಡ. ಜನನ ೧೮೮೭ ದಾನಧರ್ಮ ಪದ್ಧತಿ, ಶ್ರೀಸುರೇಶ್ವರಾಚಾರ್ಯ ಚರಿತ್ರೆ. ಇತ್ಯಾದಿ

ನರಸಿಂಹಾಚಾರ್ಯ, ಆರ್. ಎಂ. ಎ. ಎಂ. ಆರ್. ಎ. ಎಸ್. ರಾವಬಹದ್ದೂರ, ಪ್ರಾಕ್ತನ ವಿಮರ್ಶಕ ವಿಚಕ್ಷಣ, ಮಲ್ಲೇಶ್ವರಂ, ಬೆಂಗಳೂರು ಸಿಟಿ :—ನೀತಿಮಂಜರಿ, ಶಾಸನಪದ್ಯಮಂಜರಿ, ನಗೆಗಡಲು, ಕರ್ಣಾಟಕ ಕವಿಚರಿತೆ (೨ ಭಾಗಗಳು)

ನರಸಿಂಹಯ್ಯ, ಯಸ್. ಕೆ. ಶಂಕರಪುರ, ಬೆಂಗಳೂರು ಸಿಟಿ:- ಮಾಗಡಿ ಕೆಂಪೇಗೌಡನ ಚರಿತ್ರೆ.

ನಾರಾಯಣ ಶಾಸ್ತ್ರಿ, ದೊಡ್ಡಬೆಲೆ, ಪಂಡಿತ, ಶೀಗೇಬೇಲಿ, ಬೆಂಗಳೂರು ಸಿಟಿ:—ರಘುವಂಶ, ಕುಮಾರಸಂಭವ, ಶುಕ್ರನೀತಿ, ರಾಮಾಯಣ ಸುಂದರಕಾಂಡ ಮುಂತಾದ ಸಂಸ್ಕೃತ ಗ್ರಂಥಗಳಿಗೆ ಕನ್ನಡ ಟೀಕೆಯನ್ನು ಬರೆದಿರುವರು.

ಒಡಲುಮನೆ ಆತ್ಮಾರಾಮ ಶಾಸ್ತ್ರಿವಿದ್ಯಾವಾಚಸ್ಪತಿ, ಕವಿಹೃದಯವಲ್ಲಭ ಸಂಸ್ಕೃತಪಂಡಿತ, ಕೆ. ಈ. ಎಮ್. ಹೈಸ್ಕೂಲ್:—ಮಂಗಳೂರು:—ಜನನ ೧೮೭೧. ಪುಷ್ಪಮಾಲಾ. ದುರ್ಗಾಹರಣ, ಶಿವಪ್ರದಯ, ಹರಿಹರಸ್ತವರಾಜ್, ಮುಂತಾದ ಸಂಸ್ಕೃತ ಗ್ರಂಥಗಳನ್ನೂ, ಆತ್ಮೋದ್ಧರ, ಸಂಸಾರಿಕ ಪರಿವರ್ತನ, ಕರ್ಮಾಚರಣಮಿಮಾಂಸ ಎಂಬ ಮರಾಠಿ ಗ್ರಂಥಗಳನ್ನೂ, ಹಿಂದುವ್ರತವಿವೇಕ, ಸೇತುಭಂಗ, ಸಂಕ್ಷೇಪಗೀತೆ, ನಾಟಕ ಕಳೆ ಎಂಬ ಕನ್ನಡ ಗ್ರಂಥಗಳನ್ನೂ ಬರೆದಿರುವರು.

ಪುನಿನ್‌ಚಟ್ಟಯ್ಯ, ಪುಂಡೂರುಲಕ್ಷ್ಮೀನಾರಾಯಣ, ಕಾಸರ್ ಗೋಡ್ ಪೋಸ್ಟ್ (ದ. ಕೆನರಾ):—ಜನನ ೧೯೦೦, ತಿಲಕಕಾವ್ಯಾಂಜಲಿ, ಸ್ವರಾಜ್ಯ, ಭಕ್ತಾ ರಾ, ಚರಕಗೀತೆ, ಧ್ವಜಗೀತೆ, ಸ್ವರಾಜ್ಯಗೀತೆ. ಗಾಂಧೀವಿಜಯ, ರವೀಂದ್ರವಿಜಯ, ಭರದ್ವಾಜ ವಿಜಯ, ಕೋದಂಡರಾಮ ವಿಜಯ, ಭಾರತಭಾರತೀಯ ಭಕ್ತಿ, ಮಧುರಗೀತಾರ್ಣವ, ಬೋಧಾಂಬುಧಿ, ಶಾಂತಿಯ ಯುದ್ಧವೂ ಎಂಬ ಕನ್ನಡ ಗ್ರಂಥಗಳ ಕರ್ತರು.

ಶ್ರೀರಾಜಮ್ಮತಾತಾಚಾರ್ಯ ಶರ್ಮ. ಕಾಶೀವಿಶ್ವೇಶ್ವರನ ಗುಡಿಬೀದಿ, ಬೆಂಗಳೂರು ಸಿಟಿ—ಚರಕಗೀತೆ ಮುಂತಾದ ಪದ್ಯಗಳನ್ನು ಬರೆದಿರುವರು.

ರಾಮಚಂದ್ರರಾವ್, ವೈ. ಕೆ. ಬಿ.ಎ. ಎಲ್. ಸಿ. ಇ. ಮಲ್ಲೇಶ್ವರಂ ಬೆಂಗಳೂರು—ಗಾರ್‌ಫೀಲ್ಡ್ ಚರಿತ್ರೆ, ಸುಭದ್ರೆ ಎಂಬ ಗ್ರಂಥಗಳನ್ನು ಬರೆದಿರುವರು.

ರಾಮಾನುಜಐಯ್ಯಂಗಾರ್. ಎಮ್. ಎ. ಮೈಸೂರು:—ಕವಿಸಮಯಂ. ಕವಿಕಾರ್ಯಪ್ರಶಂಸೆ, ಪ್ರಬಂಧಾವಳಿ, ಸುವ್ರತ, ಪ್ರಮಾಣಪ್ರಮೇಯವಿವೇಕ, ಬಾಗಿಲುಭದ್ರ, ಆದಿಪುರಾಣ, ಸಭಾಪರ್ವ, ಈ ಗ್ರಂಥಗಳನ್ನು ಬರೆದಿರುವರು.

ಸಂಜೀವರಾವ್, ಎಂ. ಎ. ಲೇಟ್ ಪ್ರಿನ್ಸಿಪಾಲ್ ಕಾಯಸ್ತಪಾಠ ಶಾಲ, ಅಲಹಾಬಾದ್ :—ಸಂಯುಕ್ತಸಂಸ್ಥಾನದ ವಿದ್ಯಾಭ್ಯಾಸದ ತಃಖ್ತೆ.

ಸೇಟ್ಲೂರ್ ಎಸ್. ಎಸ್. ಬಿ.ಎ. ಎಲ್ ಎಲ್.ಬಿ. ಅಡ್ವೊಕೇಟ್ ಬೆಂಗಳೂರು ಸಿಟಿ:—ಹಿಂದೂ ಧರ್ಮಶಾಸ್ತ್ರಸಂಗ್ರಹ, ದುತಾಕ್ಷರ, ಭಾಷಾಂತರಎಂಬ ಗ್ರಂಥಗಳನ್ನು ಬರೆದಿರುವರು.

ಶ್ರೀಪಾದರಾಮಶರ್ಮ ಮಂಗಳೂರು:—ಸ್ವಾಮಿರಾಮತೀರ್ಥ ಎಂಬ ಗ್ರಂಥವನ್ನು ಇಂಗ್ಲೀಷಿನಲ್ಲಿ ಬರೆದಿರುವರು.

ಸ್ವಾಮಿರಾವ್, ಲೇಟ್ ಸಬ್ ಎಡಿಟರ್ ಮೈಸೂರು ಅರ್ಥಸಾಧಕಪತ್ರಿಕೆ ಬೆಂಗಳೂರುಸಿಟಿ.—ಸುಶೀಲೆ, ಬಾಲಮನೋರಮ, ಸುವರ್ಣಸುಂದರಿ, ಶರೀರಶಾಸ್ತ್ರಸಾರ, ರವೀಂದ್ರನಾಥಠಾಕೂರ, ಜಗದೀಸ್‌ಚಂದ್ರಬೋಸ್, ತಾತಾ ಮುಂತಾದ ಗ್ರಂಥಗಳನ್ನು ಬರೆದಿರುವರು.

ಶಂಕರಭಟ್ಟ ಕಾಡರಿಗೋಡ್ಲು, :—ಘೋಷಯಾತ್ರೆ, ಗಾಂಧಿಸಂದೇಶ, ವಸ್ತ್ರಾಪಹರಣ, ಭಾಮಿನೀವಿರಹ, ಪೃಥ್ವಿರಾಜವಿಜಯ ಎಂಬ ಪದ್ಯಗಳನ್ನು ಸ್ವರಾಜ್ಯಯುದ್ಧವೆಂಬ ಗ್ರಂಥವನ್ನು ಬರೆದಿರುವರು.

ಶೇಷ ಎಂ. ಆರ್., ಎಂ. ಎ. ಪ್ರೊಪೆಸರ್ ಆಫ್ ರಾಜವಿದ್ಯ ಆಂಧ್ರರೀಸರ್ಚ್ ಯೂನಿವರ್ಸಿಟಿ:—ಕೃಷ್ಣವಿಶ್ವಾವಸುಸಂವಾದ, ಮತ್ತು ಇತರ ಲೇಖನಗಳು.

ಸಾಮಿ, ಎಂ. ಆರ್. ಕೆಟಿ. ಪಿ. ಎಚ್., ಡಿ. ಎಂ. ಡಿ, ಡಿಪಿ. ಎಚ್. (ಜರ್ಮನಿ) ಬಸವನಗುಡಿ ಬೆಂಗಳೂರು ಸಿಟಿ ಇಂಗ್ಲೀಷಿನಲ್ಲಿ ಗ್ರಾಮನೈರ್ಮಲ್ಯಮುಂತಾದ ಗ್ರಂಥಗಳನ್ನೂ ಕನ್ನಡದಲ್ಲಿ ಆರ್ಯಗೃಹಧರ್ಮದೀಪಿಕವೆಂಬ ಪುಸ್ತಕಗಳನ್ನೂ, ಪತ್ರಿಕೆಗಳಲ್ಲಿ ಲೇಖನಗಳನ್ನೂ ಬರೆದಿರುವರು.

ಬಿ. ಎಂ. ಶ್ರೀಕಂಠಯ್ಯ ಎಂ. ಎ., ಬಿ. ಎಲ್. ಮಹಾರಾಜ ಕಾಲೇಜು, ಮೈಸೂರು:—'ಕನ್ನಡಮಾತು ತಲೆಯೆತ್ತುವಬಗೆ' ಎಂಬುದನ್ನು ಕನ್ನಡದಲ್ಲಿಯೂ ಲಕ್ಷಣಗ್ರಂಥವೊಂದನ್ನು ಇಂಗ್ಲೀಷಿನಲ್ಲಿಯೂ ಬರೆದಿರುವರು.

ವೈ. ಸುಬ್ಬರಾವ್ ಅಧ್ಯಾತ್ಮಪ್ರಕಾಶದಸಂಪಾದಕರು, ಎರಡನೇ ಬೀದಿ, ಚಾಮರಾಜಪೇಟೆ, ಬೆಂಗಳೂರು ಸಿಟಿ:—ವೇದಾಂತ ಬಾಲಬೋಧೆ, ರಾಜಯೋಗ, ವೇದಾಂತ ಕಥಾವಳಿ, ಮಂಡೂಕ್ಯೋಪನಿಷದ್ಭಾಷ್ಯ, ಅದ್ವೈತ ಪ್ರಕರಣ ಮುಂತಾದ ಗ್ರಂಥದ ಕರ್ತೃಗಳು.

ತಾತ, ಎಂ. ಎ., ಎಲ್. ಟಿ. ವೈಸ್‌ಪ್ರಿನ್ಸಿಪಾಲ್, ಟೀಚರ್ಸ್ ಕಾಲೇಜ್, ಸೈದಾಪೇಟೆ, ಮದರಾಸು:—ಇವರಿಗೆ ಹಳೆಗನ್ನಡದಲ್ಲಿ ಬಹಳ ಪರಿಶ್ರಮ. ಇವರು ಮರುನ್ನಂದಶತಕಂ ಮುಂತಾದ ಅನೇಕ ಗ್ರಂಥಗಳನ್ನು ಬರೆದಿರುವರು

ಶ್ರೀಮತಿ, ತಿರುಮಲಮ್ಮ ನಂಜನಗೂಡು, ಮೈಸೂರು:—ದಕ್ಷಕನ್ಯಾ, ಮಾತೃನಂದಿನಿ, ಸತಿತ್ವರಕ್ಷಣ, ಸುಶೀಲ, ವಿದ್ಯುಲ್ಲತಾ, ವಿರಾಗಿಣಿ ಮುಂತಾದ ಕಾದಂಬರಿಗಳನ್ನು ಬರೆದಿರುವರು.

ಉಗ್ರಾಣ ಮಂಗೇಶರಾವ್, ಪಂಡಿತರು, ಬೋರ್ಡ್‌ಹೈಸ್ಕೂಲ್ ಪುತ್ತೂರು, ದಕ್ಷಿಣಕನ್ನಡ:—ಕನಕಾಂಗಿ, ಕಾವ್ಯರತ್ನಾಕರ, ಲೋಭಿಪ್ರಹಸನ ಎಂಬ ಪುಸ್ತಕಗಳನ್ನು ಬರೆದಿರುವದಲ್ಲದೆ ಕವಿರತ್ನಾಕರ, ಸಿದ್ಧರ ಭಾರತೇಶ ವೈಭವವೆಂಬ ಗ್ರಂಥಗಳನ್ನು ಪ್ರಕಟಿಸಿರುವರು.

ವಾಸುದೇವಾಚಾರ್ಯ, ಕೆರೂರ:—ಇವರು ನಳದಮಯಂತಿ, ರುಕ್ಮಿಣಿಸ್ವಯಂವರ, ವಾಲ್ಮೀಕಿ ವಿಜಯ, ಇಂದಿರಾ ಮತ್ತು ಯದುಮಹಾರಾಜ ಎಂಬ ಗ್ರಂಥಗಳ ಕರ್ತೃಗಳು.

ವೆಂಕಟೇಶಭೀಮರಾವ್ ಆಲೂರ್, ಬಿ.ಎ., ಎಲ್. ಎಲ್. ಬಿ., ಧಾರವಾಡ:—ಗೀತಾರಹಸ್ಯ (ಲೋಕಮಾನ್ಯ ತಿಲಕರ ಗ್ರಂಥದ ಭಾಷಾಂತರ) ಶಿಕ್ಷಣಮೀಮಾಂಸ, ವಿದ್ಯಾರಣ್ಯ, ಕರ್ಣಾಟಕಗತ್ವೈಭವ, ಬ್ರಹ್ಮಸಿರಸನ ಮುಂತಾದ ಗ್ರಂಥಗಳ ಲೇಖಕರು.

ವೆಂಕಟೇಶ ನಾರಾಯಣ ಕುರಡಿ, ಸರಸ್ವತಿ ಮಂದಿರ, ಧಾರವಾಡ :—ಸತ್ಯವಾನ್ ಸಾವಿತ್ರಿ ಮತ್ತು ಪದ್ಮಿನಿ ಎಂಬ ಗ್ರಂಥಗಳನ್ನು ಬರೆದಿರುವರು.

ಎಂ. ವೆಂಕಟೇಶ ಅಯ್ಯಂಗಾರ್ ಎಂ. ಎ., ಅಸಿಸ್ಟೆಂಟ್ ಸೆಕ್ರಿಟೆರಿ, ಮೈಸೂರು ಸರ್ಕಾರ :—ಶ್ರೀನಿವಾಸನ ಸಣ್ಣಕತೆಗಳು, ಸಾವಿತ್ರಿ, ಬಿನ್ನಹ, ಶಾಂತ, ಸಾಹಿತ್ಯವೆಂಬ ಕಥೆಗಳು, ನಾಟಕ, ಪದ್ಯ ಮತ್ತು ವಿಮರ್ಶೆಗಳನ್ನು ಬರೆದಿರುವರು.

ಎನ್. ವೆಂಕಟೇಶ ಅಯ್ಯಂಗಾರ್ ಬಿ. ಎ. ರಿಟೈರ್ಡ್ಡ ಮಿಟಿಯೊರೊ ಲಾಜಿಕಲ್ ಡಿರೆಕ್ಟರ್, ಚಾಮರಾಜಪೇಟೆ, ಬೆಂಗಳೂರು ಸಿಟಿ:—ಉಪದೇಶವಾಕ್ಯಾವಳಿ ಮುಂತಾದ ಅನೇಕ ಗ್ರಂಥಗಳನ್ನು ಬರೆದಿರುವರು.

ವೆಂಕಟರಾಮಯ್ಯ, ಶಾನುಭೋಗರು, ಹಲಕೂರು, ಗೋರಿ ಬಿದನೂರುಪೋಸ್ಟ್; ಸಾವಿತ್ರಿನಾಟಕಂ, ಯಯಾತಿನಾಟಕಂ, ಕಲ್ಯಾಣಿನಾಟಕಂ, ಯದುರಾಜ ವಿಜಯ ನಾಟಕವೆಂಬ ನಾಟಕಗಳನ್ನೂ ಚಂದ್ರಹಾಸನೆಂಬ ಕಾದಂಬರಿಯನ್ನೂ ಬರೆದಿರುವರು.

---

# ಕರ್ಣಾಟಕದ ಪ್ರಸಿದ್ಧಸ್ಥಳಗಳು

## ಕೋಲಾರ

ಕೋಲಾರ ಚಿನ್ನದಗಣಿಗಳನ್ನು ಒಂದಸ್ನೊಂದಕ್ಕೆ ಜೋಡಿಸುವುದಕ್ಕೆ ರೈಲ್ವೆ ಲೈನನ್ನೇ ತೆರೆದಿರುತ್ತಾರೆ. ಆ ಲೈನಿನಲ್ಲಿ ಸೈನ್‌ರೀಫ್ಸ್ ಕೋರಮಂಡಲ್, ಉರಿಗ, ಛಾಂಪಿಯನ್ ಮತ್ತು ಮಾರಿಕುಪ್ಪಮ್ ಸ್ಟೇಷನುಗಳಿವೆ. ಇವು ಪ್ರತಿಯೊಂದು ಚಿನ್ನದ ಗಣಿಯುಬಳಿಯಲ್ಲಿವೆ. ಈ ಗಣಿಗಳಲ್ಲಿ ೩೦೦೦೦ ಜನರು ಕೆಲಸಮಾಡುತ್ತಾರೆ. ಕೆಲಯೂರೋಪಿಯನ್ನರೂ ಇದ್ದಾರೆ. ಈ ಗಣಿಗಳಿಗೆ ಇಳಿಯುವುದೆಂದರೆ ಒಂದು ಸಲ ಹಿಂದೂಸ್ಥಾನವನ್ನು ಬಿಟ್ಟು ಯೂರೋಪಿನ ಗಣಿಯ ಒಂದು ನಗರವನ್ನೇಪ್ರವೇಶಿಸಿದ ಭಾವನೆಯಾಗುತ್ತದೆ. ಇಲ್ಲಿ ಅನೇಕ ವಿಚಿತ್ರ ವಿಷಯಗಳು ಕಾಣಸುತ್ತವೆ.

## ಗದಗ

ಕರ್ನಾಟಕಪ್ರಾಂತಿಕ ಕಾಂಗ್ರೆಸ್‌ಕಮಿಟಿಯು ಕಚೇರಿ ಇರುವ ಪಟ್ಟಣ. ಇದು ಧಾರವಾಡಜಿಲ್ಲೆಯುಲ್ಲಿ ಗದಗ ಡಿವಿಜನಿನ ಮುಖ್ಯ ಪಟ್ಟಣವಾಗಿದೆ. ಇಲ್ಲಿ ಹತ್ತಿ ಮತ್ತು ರೇಷ್ಮೆನೂಲಿನ ವ್ಯಾಪಾರವು ಬಹಳ ನಡೆಯುತ್ತದೆ. ವೀರನಾರಾಯಣಸ್ವಾಮಿಯ ಒಂದು ದೊಡ್ಡ ದೇವಾಲಯವಿದೆ. ಇದು ಬಿಜಾಪುರದತ್ತ ಕಡೆ ತಿರುಗುವ ರೈಲ್ವೆ ಜಂಕ್ಷನ್ ಆಗಿದೆ.

## ಗೋಕಾಕ್

ಬೆಳಗಾಂವಿ ಜಿಲ್ಲೆಯ ಗೋಕಾಕ್ ತಾಲೂಕಿನ ಮುಖ್ಯಪಟ್ಟಣವು. ರೈಲ್ವೆಸ್ಟೇಷನಿನಿಂದ ೩½ ಮೈಲುದೂರದಲ್ಲಿರುವ ಜಲಪಾತವು ನೋಡತಕ್ಕದ್ದಾಗಿದೆ. ಜೂನ್ ಮತ್ತು ಜುಲೈ, ತಿಂಗಳಲ್ಲಿ ಮಳೆ ಬಹಳ ಬಿದ್ದು ಘಟಪ್ರಭೆಯು ತುಂಬಿದಾಗ ಈ ಜಲಪಾತವು ಬಹಳ ರಮಣೀಯವಾಗಿ ಕಾಣುತ್ತದೆ. ಅದರ ಮೇಲೆ ಒಂದು ತೂಗುವ

ಸಂಪಿದೆ. ಈ ಸಮಯದಲ್ಲಿ ಜಲಪಾತವನ್ನು ನೋಡುವರೇ ಅನೇಕ
ರು ಬರುತ್ತಾರೆ. ರೈಲ್ವೆ ಸ್ಟೇಷನಿಗೂ ಪಟ್ಟಣಕ್ಕೂ ಮೋಟರ್
ಸರ್ವಿಸ್ ಇದೆ. ಜೋಗಿನ ಸಮೀಪದಲ್ಲಿರುವ ಗಿರಣಿಯಲ್ಲಿ ಹತ್ತಿ
ಯನೂಲೂ ಬಟ್ಟೆಗಳೂ ತಯಾರಾಗುತ್ತವೆ. ಗಿರಣಿಗೆ ಬೇಕಾದ
ಮೋಟರ್‌ಪವರ್ ಜೋಗಿನಿಂದಲೇ ಸಿಗುತ್ತದೆ. ರೈಲ್ವೆದಾರಿಯ
ಬೀದಿಯಲ್ಲಿ ಒಂದು ದೊಡ್ಡನೀರಿನ ಆಶ್ರಯವನ್ನು ಕಟ್ಟಿರುವರು.
ಇದರಲ್ಲಿ ನೀರು ತುಂಬುವುದರಿಂದ ಬೇಸಿಗೆಯಲ್ಲಿ ಜಲಪಾತವಿರುವು
ದಿಲ್ಲ. ಗೋಕಾಕ್‌ಪಟ್ಟಣವು ಒಂದು ತರದ ಹಗೂರವಾದ ಮರದಿಂ
ದ ತಯಾರಿಸಿದ ಆಟದಸಾಮಾನುಗಳಿಗೂ, ಮಣ್ಣಿನ ಸಾಮಾನುಗ
ಳಿಗೂ, ಪ್ರಸಿದ್ಧಿ ಹೊಂದಿದೆ.

## ಗೋಕರ್ಣ

ಇದು ಉತ್ತರಕನ್ನಡ ಜಿಲ್ಲೆಯಲ್ಲಿ ಸಮುದ್ರತೀರದ ಒಂದು
ಕ್ಷೇತ್ರ. ಇದು ದಕ್ಷಿಣ ಹಿಂದುಸ್ಥಾನದ ಸಪ್ತ ಕ್ಷೇತ್ರಗಳಲ್ಲಿ ಒಂದಾ
ಗಿದ್ದು ದಕ್ಷಿಣ ಕಾಶಿಯೆನಿಸಿದೆ. ಇಲ್ಲಿಗೆ ಯಾವಾಗಲೂ ಯಾತ್ರಿಕರು
ಬರುತ್ತಲೇ ಇರುತ್ತಾರೆ. ಶಿವರಾತ್ರಿಯ ಜಾತ್ರೆಗೆ ಬಹಳ ದೂರ
ಪ್ರದೇಶಗಳಿಂದ ಸಾವಿರಾರು ಯಾತ್ರಿಕರು ಬಂದು ವಿಶ್ವೇಶ್ವರನಿಗೆ
ಪೂಜೆಮಾಡುತ್ತಾರೆ. ಇಲ್ಲಿಯ ಮಹಾಬಲೇಶ್ವರನ ದೇವಸ್ಥಾನದ
ರಚನೆಯು ದ್ರಾವಿಡ ಶಿಲ್ಪಿಕಲೆಯನ್ನು ಸೂಚಿಸುತ್ತದೆ. ರಾವಣನಿಗೆ
ಈಶ್ವರನು ಕೊಟ್ಟ ಲಿಂಗದ ಒಂದು ತುಂಡು ಈ ದೇವಸ್ಥಾನದಲ್ಲಿದೆ.
ಇಲ್ಲಿ ನಿತ್ಯವೂ ನೂರಕ್ಕಿಂತ ಹೆಚ್ಚು ನಂದಾ ದೀಪಗಳು ಉರಿಯುತ್ತಿ
ರುತ್ತವೆ. ಗೋಕರ್ಣದ ಹೆಸರು ರಾಮಾಯಣದಲ್ಲೂ ಮಹಾಭಾರತ
ದಲ್ಲೂ ಸೂಚಿತವಾಗಿದೆ. ಗೋಕರ್ಣಕ್ಕೆ ಹೋಗುವವರು ಸ್ಟೀಮ
ರಿನ ಮೇಲೆ ಬಂದು ತದಡಿ ಬಂದರದಲ್ಲಿ ಇಳಿದು ಎತ್ತಿನ ಬಂಡಿಯಲ್ಲಿ
ಹೋಗಬಹುದು.

## ಧಾರವಾಡ

ಧಾರವಾಡ ಜಿಲ್ಲೆಯ ಮುಖ್ಯ ಪಟ್ಟಣ. ಇದು ಸಮುದ್ರ
ತಲಕ್ಕಿಂತ ೨೪೨೦ ಅಡಿ ಎತ್ತರವಿದ್ದು ಮನೋಹರವಾದ ಸಮಶೀ

ತೋಷ್ಣ ಹವೆಯುಳ್ಳದಾಗಿದೆ. ಇಲ್ಲಿ ಜಿಲ್ಲಾ ಕಲೆಕ್ಟರ್, ಜಿಲ್ಲಾ ಜಡ್ಜಿ ಮತ್ತು ಡಿವಿಜನಲ್ ರೈಲ್ವೆ ಆಫೀಸರರ ಕಚೇರಿಗಳಿವೆ. ರೈಲ್ವೆ ಸ್ಟೇಷನಿನಿಂದ ೧½ ಮೈಲು ದೂರದಲ್ಲಿ, ಕ್ಲಬ್ ಮತ್ತು ಜವಾಖಾನದ ಸಮೀಪ ಒಂದು ಮುಸಾಫರ ಬಂಗ್ಲೆಯಿದೆ. ಅಲ್ಲದೆ ಒಂದು ರಾಷ್ಟ್ರೀಯ ಮಹಾವಿದ್ಯಾಲಯವಿದೆ.

## ದೊಡ್ಡ ಕುರುಗೋಡು

ಇದೊಂದು ಯಾತ್ರಾಸ್ಥಳ. ಇದರ ಸಮೀಪ ನದಿಯ ದಂಡೆಯ ಮೇಲೆ ಬಹಳ ಪ್ರಾಚೀನಕಾಲದ ಒಂದು ಅಶ್ವತ್ಥದ ಮರವಿದೆ. ಇದನ್ನು ೪೦೦೦ ವರ್ಷಗಳ ಹಿಂದೆ ವಿದುರನು ನಟ್ಟನೆಂದು ಹೇಳುತ್ತಾರೆ. ಮತ್ತು ಅದನ್ನು ವಿದುರಾಶ್ವತ್ಥವೆನ್ನುತ್ತಾರೆ. ಇದನ್ನು ಸಂದರ್ಶಿಸುವ ಯಾತ್ರಿಕರ ಎಂತಹ ಕಠಿಣವಾದ ಅಸ್ವಸ್ಥವನ್ನಾದರೂ ಗುಣ ಮಾಡುವ ಶಕ್ತಿಯು ಇದಕ್ಕಿದೆಯೆಂದು ಹೆಸರಾಗಿದೆ. ರೈಲ್ವೆಸ್ಟೇಷನಿನ ಬಳಿಯಲ್ಲಿ ಒಂದು ಮುಸಾಫ್ರಿ ಬಂಗ್ಲಿಯೂ, ಸುಮಾರು ಒಂದು ಮೈಲುದೂರದಲ್ಲಿ ಎರಡು ಛತ್ರಗಳೂ ಇವೆ.

## ಬಾದಾಮಿ

ಬಿಜಾಪುರ ಜಿಲ್ಲೆಯ ಬಾದಾಮಿತಾಲೂಕಿನ ಒಂದು ಪಟ್ಟಣ. ಇದು ರೈಲ್ವೆಸ್ಟೇಷನಿನಿಂದ ೩ ಮೈಲುದೂರವಾಗಿದೆ. ಇದು ಭೂಗರ್ಭಿತವಾಗಿದ್ದು ಹೊರತೆಗೆದ ಒಂದು ಜೈನದೇವಸ್ಥಾನಕ್ಕೂ ಒಂದು ಗುಹೆಯ ದೇವಾಲಯಕ್ಕೂ ಪ್ರಸಿದ್ಧಿಯಾಗಿದೆ. ಈ ದೇವಸ್ಥಾನವು ಕ್ರಿ. ಶ. ೫೭೯ ಇಸವಿಯದೆನ್ನುತ್ತಾರೆ. ಈ ದೇವಸ್ಥಾನಕ್ಕೂ ಅನೇಕ ಕಲ್ಲಿನ ಮೆಟ್ಲುಗಳಾಗಿವೆ. ಪೂರ್ವಕಾಲದಲ್ಲಿ ಇಲ್ಲಿಗೆ ಬರುತ್ತಿದ್ದ ಸಾವಿರಾರು ಯಾತ್ರಿಕರ ಪಾದಸ್ಪರ್ಶದಿಂದ ಈ ಮೆಟ್ಟಲುಗಳು ಬಹಳ ಸವೆದುಹೋಗಿವೆ. ಜೈನಗುಹೆಯು ೩೧ ಅಡಿ ಅಗಲವೂ ೧೯ ಅಡಿ ಎತ್ತರವೂ ಇದೆ. ಬೌದ್ಧಕಾಲದನಂತರ ಬ್ರಾಹ್ಮಣರು ತಮ್ಮ ಪ್ರಾಬಲ್ಯವನ್ನು ತಿರಿಗಿ ಬೆಳೆಸಿದ ಗುರುತುಗಳಿಂದ ಈ ಗುಹೆಗಳಿಂದ ತಿಳಿಯುತ್ತವೆ. ನರಸಿಂಹಾವತಾರ, ಐದು ಹೆಡೆಯ ಅನಂತನ ಮೇಲೆ ಕೂತಿ

ರುವ ವಿಷ್ಣು ಮತ್ತು ಇತರ ಕೌಶಲದ ಕೆಲಸಗಳೂ ಈಗಲೂ ಇವೆ. ಒಂದು ಗುಹೆಯ ದೇವಸ್ಥಾನದ ಮುಂದಣ ಸ್ತಂಭಗಳಲ್ಲಿ ಮೂರು ಚಡಿಗಳೂ ಇವೆ. ಇವುಗಳಲ್ಲಿ ಗಂಡು ಹೆಣ್ಣಿನ ಚಿತ್ರಗಳೂ ಕುಬ್ಜರೂ ಮಗಳೂ ಬಹು ಸುಂದರದಿಂದ ಕೆತ್ತಲ್ಪಟ್ಟಿವೆ. ಕೆಲವು ಸ್ತಂಭಗಳು ಹಿಂದೂ ಶಿಲ್ಪಕಲೆಯ ಆದರ್ಶಗಳಾಗಿವೆ. ಈ ಸ್ಟೇಷನಿನಿಂದ ೯ ಮೈಲು ದೂರದಲ್ಲಿ ಪರಿಶಗಡವಿದೆ. ಇಲ್ಲಿ ಶ್ರೀ ಭಾನಶಂಕರೀದೇವಸ್ಥಾನವಿದೆ. ಇಲ್ಲಿ ಜನವರಿ ತಿಂಗಳಲ್ಲಿ ಕೂಡುವ ಜಾತ್ರೆಗೆ ಅನೇಕ ಯಾತ್ರಿಕರು ಬರುತ್ತಾರೆ. ರೈಲ್ವೆಸ್ಟೇಷನ್ ಬಳಿಯಲ್ಲಿ ಒಂದು ಧರ್ಮಶಾಲೆಯಿದೆ. ಗುಹೆಗಳಿಗೆ ಹೋಗುವುದಕ್ಕೆ ಎತ್ತಿನ ಗಾಡಿಗಳು ೮ ಆಣೆ ಬಾಡಿಗೆಯಲ್ಲಿ ಸಿಗುತ್ತವೆ.

## ಬೇಲೂರು ಮತ್ತು ಹಳೇಬೀಡು

ಹಳೇಬೀಡು ಹೊಯಿಸಳ ಅರಸರ ರಾಜಧಾನಿಯಾದ ಪ್ರಾಚೀನ ದ್ವಾರ ಸಮುದ್ರವಾಗಿದೆ. ಇದರಲ್ಲಿ ಹಿಂದುಸ್ಥಾನದಲ್ಲೆಲ್ಲಾ ಅತಿ ಪ್ರಖ್ಯಾತವಾದ ಕೆಲವು ದೇವಸ್ಥಾನಗಳು ಜೀರ್ಣವಾಗಿ ಬಿದ್ದಿರುವುದು ಈಗಲೂ ಕಾಣುತ್ತದೆ. ಇವುಗಳಲ್ಲಿ ಮುಖ್ಯವಾದ ಹೊಯಿಸಳೇಶ್ವರ ದೇವಸ್ಥಾನವನ್ನು ೧೧ ನೆಯ ಶತಮಾನದಲ್ಲಿ ಕಟ್ಟಲಿಕ್ಕೆ ಆರಂಭಿಸಿದ ಕೆಲಸವು ಸಂಪೂರ್ಣವಾಗದೆ ನಿಂತಿದೆ. ಶಿಲ್ಪಶಾಸ್ತ್ರದಲ್ಲಿ ಮಹಾ ಪಂಡಿತನಾದ ಫರ್ಗೂಸನ್ ಸಾಹೇಬನು ಈ ಕಟ್ಟಡದ ವಿಚಾರವಾಗಿ "ಈ ದೇವಸ್ಥಾನವು ಸಂಪೂರ್ಣವಾಗಿದ್ದರೆ ಹಿಂದುಸ್ಥಾನದ ಶಿಲ್ಪಶಾಸ್ತ್ರಕ್ಕೂ, ಕಟ್ಟೋಣವನ್ನು ರಚಿಸುವ ಶಾಸ್ತ್ರಕ್ಕೂ ಇದೊಂದು ತಳಪಾಯಿಯಂತಾಗುತ್ತಿತ್ತು" ಎಂದಿರುವನು. ಇದರ ರಚನೆಯು ಗಾಥಿಕ್ ರಚನಾ ಪದ್ಧತಿಯನ್ನು ಮೀರಿದುದಾಗಿಯೂ, ಮಧ್ಯಕಾಲದವರು ಯಾವುದನ್ನು ಧ್ಯೇಯವೆಂದೆಣಿಸುತ್ತಿದ್ದರೋ ಮತ್ತು ಯಾವುದನ್ನು ಹೊಂದಲು ಅಶಕ್ತರಾಗಿದ್ದರೋ ಅದಕ್ಕೆ ಸಮನಾಗಿಯೂ ಇದೆ. ಇಲ್ಲಿರುವ ಕೈಟಾರೇಶ್ವರದೇವಸ್ಥಾನಕ್ಕಿಂತಲೂ ಸುಂದರವಾದ ಇನ್ನೊಂದು ದೇವಸ್ಥಾನವನ್ನು ಕಾಣುವುದು ದುರ್ಲಭ. ಆದರೆ ದುರ್ದೈವದಿಂದ ಇದರ ಮುಖ್ಯ ಗೋಪುರದಲ್ಲೊಂದು ಮರವು

ಬೆಳೆದು ಇಡೀದೇವಸ್ಥಾನವೇ ಹಾಳುಬಿದ್ದಿದೆ. ಇದಲ್ಲದೆ ಜೈನದೇವಾಲಯಗಳೂ ನೋಟಕ್ಕೆ ಸುಂದರವಾಗಿದ್ದು ನುಣುಪಾದ ಕರೀಕಂಬಗಳಿಂದ ಕೂಡಿವೆ. ಈ ಕಂಬಗಳಿಂದ ಬೆಳಕು ಎರಡು ಸಲ ಪ್ರತಿಫಲಿಸುತ್ತದೆ.

ಬೇಲೂರಿನಲ್ಲಿರುವ ಚೆನ್ನಕೇಶವ ದೇವಸ್ಥಾನವು ಹೊಯ್ಸಳರ ಕಾಲದ ಶಿಲ್ಪಿಶಾಸ್ತ್ರದ ರಹಸ್ಯವನ್ನು ತೋರಿಸುವ ಅತಿಸುಂದರವಾದ ಸ್ಮಾರಕವಾಗಿದೆ. ಇದನ್ನು ವಿಷ್ಣುವರ್ಧನನೆಂಬ ಹೊಯಿಸಳ ರಾಜನು ೧೨ ನೇ ಶತಮಾನದಲ್ಲಿ ಕಟ್ಟಿಸಿದನು. ಆದರೆ ಮುಹಮ್ಮದೀಯರ ಕಾಟದಿಂದ ಇದು ಬಹು ಮಟ್ಟಿಗೆ ಹಾಳಾಯಿತು. ಗೋಪುರವೊಂದನ್ನು ತಿರಿಗಿ ಹೊಸದಾಗಿ ಕಟ್ಟಿದರು. ಈ ದೇವಸ್ಥಾನದೊಳಗಿನ ಪ್ರತಿಯೊಂದು ಭಾಗದಲ್ಲಿ ಕಾಣುವ ಚಿತ್ರಕಲೆಯ ಸೌಂದರ್ಯದಿಂದ ಈ ಗುಡಿಯು ಮತ್ತೂ ಪ್ರಸಿದ್ಧಿಯಾಗಿದೆ.

ರೈಲ್ವೆಸ್ಟೇಷನಿನಿಂದ ಬೇಲೂರಿಗೆ ೨೮ ಮೈಲು ದೂರವಿದೆ. ೩ ರೂಪಾಯಿ ಬಾಡಿಗೆಗೆ ಎತ್ತಿನ ಬಂಡಿಗಳು ಸಿಗುತ್ತವೆ. ಬಾಸಾವರದಲ್ಲಿ ಒಂದು ಮುಸಾಫ್ರಿಬಂಗ್ಲೆಯೂ ಒಂದುಧರ್ಮಶಾಲೆಯೂ ಇವೆ. ಬಾಸಾವರವು ಮೈಸೂರು ರಾಜ್ಯದ ಹಾಸನ ಜಿಲ್ಲೆಯಲ್ಲಿದೆ.

## ಬಾಬಾಬುಡ್ಡರ್ ಅಥವಾ ಚಂದ್ರದ್ರೋಣ

ಮೈಸೂರು ಸಂಸ್ಥಾನದ ಕಡೂರು ಜಿಲ್ಲೆಯಲ್ಲಿರುವ ಒಂದು ಪರ್ವತದ ಶ್ರೇಣಿ. ಇದು ಕುದುರೆಯ ಲಾಳದಾಕಾರವಾಗಿದೆ. ಹಿಂದುಸ್ಥಾನದಲ್ಲಿ ಮೊದಲಾಗಿ ಕಾಫಿಯನ್ನು ಬೆಳೆಯಿಸಿದ್ದೆಂದರೆ ಇಲ್ಲಿಯೇ. ಸುಮಾರು ೨೦೦ ವರ್ಷಗಳ ಹಿಂದೆ ಒಬ್ಬ ಮುಸಲ್ಮಾನನು ಮಕ್ಕದಿಂದ ಕಾಫಿ ಬೀಜವನ್ನು ತಂದು ಇಲ್ಲಿ ಬಿತ್ತಿದನು. ಅವನ ಹೆಸರೇ ಈ ಬೆಟ್ಟಕ್ಕಾಯಿತು. ಅವನು ಇಲ್ಲೇ ಸತ್ತುದರಿಂದ ಬೆಟ್ಟದ ಒಂದು ಮಗ್ಗುಲ ಗವಿಯಲ್ಲಿ ಅವನ ಸಮಾಧಿಯಿದೆ. ಇದು ಮುಸಲ್ಮಾನರಿಗೆ ಮಾತ್ರವಲ್ಲ, ಹಿಂದೂಗಳಿಗೆ ಕೂಡ ಪವಿತ್ರ ಸ್ಥಳವಾಗಿದೆ. ಏಕೆಂದರೆ ಇದು ದತ್ತಾತ್ರೇಯರ ಸಿಂಹಾಸನವೆಂದು ಭಾವನೆಯಿದೆ.

ದೀಪಾವಳಿಯ ಅಮಾವಾಸ್ಯೆಗೆ ಇಲ್ಲಿ ಜಾತ್ರೆ ಆರಂಭವಾಗಿ ಒಂದು ತಿಂಗಳು ನಡೆಯುತ್ತದೆ. ಇದೇ ಶ್ರೇಣಿಯಲ್ಲಿ ಕಲ್ಹಟ್ಟಿಯೆಂಬುದು ಯೂರೋಪಿನವರ ಬೇಸಿಗೆಯ ವಸತಿ ಸ್ಥಾನವಾಗಿದೆ. ಇಲ್ಲಿ ಸಿಂಕೋನಗಿಡದ ಒಂದು ತೋಟ ಮಾಡಿರುತ್ತಾರೆ. ಎರಡು ಕೆರೆಗಳು ಕೂಡ ಇವೆ. ಬಾಬಾಬುಡರ್ಗೆ ಕಡೂರಿಂದ ೪೦ ಮೈಲಿ ಇದೆ. ಎತ್ತಿನ ಗಾಡಿಗಳು ಸಿಗುತ್ತವೆ.

## ಬಿಜಾಪುರ

ಬಿಜಾಪುರ ಜಿಲ್ಲೆಯ ಮುಖ್ಯ ಪಟ್ಟಣವೂ ಎಮ್. ಎಸ್. ಎಮ್. ರೈಲ್ವೆಯ ಒಂದು ಸ್ಟೇಷನೂ ಆಗಿದೆ. ಬಿಜಾಪುರ ಅಥವಾ ವಿಜಯಪುರವು ೧೪೮೯ ರಿಂದ ೧೬೮೬ ರವರೆಗೆ ದಕ್ಷಿಣ ಹಿಂದೂಸ್ಥಾನದಲ್ಲೆಲ್ಲಾ ಮೊದಲನೆಯ ನಗರವಾಗಿತ್ತು. ಮುಸಲ್ಮಾನರವರ ಆದಿಲ್‌ಷಾ ಕುಲಕ್ಕೆ ಇದು ರಾಜಧಾನಿಯಾಗಿತ್ತು. ಈಗಿರುವ ಕಟ್ಟಡಗಳಿಂದಲೂ ಚರಿತ್ರೆಯಿಂದಲೂ ಕಂಡು ಬರುವಂತೆ ಈ ಕುಲದ ಅರಸರಲ್ಲಿ ಯೂಸೂಫ್‌ಆದಿಲ್‌ಷಾ, ಎರಡನೇ ಇಬ್ರಾಹಿಮ್‌ಆದಿಲ್‌ಷಾ, ಮತ್ತು ಮಹಮ್ಮದ್‌ಆದಿಲ್‌ಷಾ ಎಂಬವರು ಪ್ರಮುಖರಾಗಿದ್ದರು. ಇವರಲ್ಲಿ ಕೊನೆಯವನು ಪಟ್ಟಣದ ನೋಟವನ್ನು ಅಭಿವೃದ್ಧಿ ಪಡಿಸುವುದರಲ್ಲಿ ಬಹಳ ಹೆಚ್ಚು ಪ್ರಯತ್ನಮಾಡಿದ್ದರಿಂದ, ಈಗಿರುವ ಕಟ್ಟಡಗಳಲ್ಲಿ ಯಾವ್ಯಾವುದರ ಇತಿಹಾಸವು ಗೊತ್ತಿಲ್ಲವೋ ಅದೆಲ್ಲಾ ಈತನೇ ಕಟ್ಟಿಸಿದ್ದೆಂದು ಜನರು ಅನ್ನುತ್ತಾರೆ. ಈತನ ಸಮಾಧಿಯೇ ಪ್ರಸಿದ್ಧಿಯಾದ ಗೋಲಿಗುಂಬಸ್ ಅಥವಾ ಬೋಳಗುಮ್ಮಟ ಎಂಬುದು. ಇದು ರೈಲ್ವೇಸ್ಟೇಷನಿಂದ ಹೋಗಿ ಪಟ್ಟಣ ಪ್ರವೇಶಿಸುವಾಗ ಪೂರ್ವಭಾಗದಲ್ಲಿದೆ. ಇದರ ಗುಮ್ಮಟವು ೧೯೮ ಅಡಿ ಎತ್ತರವಾಗಿದ್ದು ಸ್ಪಷ್ಟವಾಗಿ ಮರುಧ್ವನಿಮಾಡುವ Whispering gallery ಉಳ್ಳದಾಗಿದೆ. ಬಿಜಾಪುರದ ಕಟ್ಟಡಗಳಲ್ಲೆಲ್ಲಾ ಇದು ಅತಿಪ್ರಾಮುಖ್ಯವಾದುದು. ಎರಡನೆಯದಾಗಿ ಪಟ್ಟಣದ ಎಡಭಾಗದಲ್ಲಿ ಸ್ಟೇಷನಿನಿಂದ ಸುಮಾರು ಒಂದು ಮೈಲು ದೂರದಲ್ಲಿ ಅಗಾರ್‌ಮಹಾಲ್ ಇದೆ. ಇದನ್ನೂ ಮಹಮ್ಮದನೇ ಕಟ್ಟಿಸಿದನು. ಎಲ್ಲಾ ಅರಮನೆಗಳ ಪೈಕಿ

ಇದೊಂದು ಮಾತ್ರವೇ ಉಳಿದಿದೆ. ಇಲ್ಲಿ ಒಂದು ರಾಯಲ್ ಲೈಬ್ರರಿ ಇತ್ತು. ಆದರೆ ಇದರ ಪುಸ್ತಕಗಳಿಗೆಲ್ಲಾ ಗೆದ್ದಲು ಹಿಡಿದು, ಕೊನೆಗೆ ಉಳಿದವುಗಳನ್ನು ೧೮೫೫ ರಲ್ಲಿ ಇಂಡಿಯಾ ಆಫೀಸಿಗೆ ಕೊಂಡೊಯ್ದರು.

ಎರಡನೆಯ ಆಲಿಆದಿಲ್‌ಖಾನ ಗೋರಿಯು ಸ್ಟೇಷನಿಂದ ಪಟ್ಟಣಕ್ಕೆ ಹೋಗುವ ರಸ್ತೆಯ ಬಲಕ್ಕಿದೆ. ಅದು ಅಪೂರ್ಣವಾಗಿಯೂ ಮೊನಚಾದ ಕಮಾನುಗಳುಳ್ಳದ್ದಾಗಿಯೂ ಇದೆ.

ತಿರ್‌ಬೂರಿ ಎಂಬುದೂ ನೋಡಲು ಯೋಗ್ಯವಾದ ಕಟ್ಟಡವಾಗಿದೆ. ಇದರಲ್ಲೆರಡು ಸಿಂಹಗಳ ಪ್ರತಿಮೆಗಳಿರುವುದರಿಂದ ಇದಕ್ಕೆ ಈ ಹೆಸರಾಯಿತು. ಬಿಜಾಪುರದಲ್ಲಿರುವ ಅತಿದೊಡ್ಡ ಫಿರಂಗಿಯಾದ ಮಾಲಿಕ್-ಇ-ಮೈದಾನ್ ಎಂಬುದು ಇಲ್ಲಿದೆ. ಒಬ್ಬ ತುರ್ಕಿಯ ಆಫೀಸರನು ಇದನ್ನು ೧೫೪೯ ರಲ್ಲಿ ಅಹಮ್ಮದ್ ನಗರದಲ್ಲಿ ಮಾಡಿಸಿದನು. ಇದನ್ನು ಮಾಡಿದ ಮುಹಮ್ಮದ್‌ಬಿನ್‌ಹಸನ್‌ರೂಮಿ ಎಂಬವನ ಹೆಸರು ಈ ಫಿರಂಗಿಯಲ್ಲೇ ಬರೆದಿದೆ. ಅದಲ್ಲದೆ ಇದರ ಸಮೀಪದಲ್ಲಿ ೧೬೮೬ ರಲ್ಲಿ ಔರಂಗಜೇಬನು ಪಟ್ಟಣವನ್ನು ವಶಮಾಡಿಕೊಂಡಾಗ ಮಾಡಿಸಿದ ಒಂದು ಶಾಸನವಿದೆ. ೧೫೬೫ ರಲ್ಲಿ ತಾಳಿಕೋಟೆಯಯುದ್ಧದಲ್ಲಿ ಮೊದಲನೆಯ ಆಲಿಆದಿಲ್‌ಖಾನು ವಿಜಯನಗರದ ರಾಜನನ್ನು ಗೆದ್ದನಂತರ ನಗರದ ಗೋಡೆಯನ್ನು ಕಟ್ಟಿಸಲಿಕ್ಕಾರಂಭಿಸಿದನೆಂದು ಕಥೆಯಿದೆ. ಈ ಗೋಡೆ ಕಟ್ಟಿಸುವುದರಲ್ಲಿ ಒಬ್ಬೊಬ್ಬ ಸರದಾರನಿಗೆ ಒಂದೊಂದು ಜಾಗವಿತ್ತು. ಅವನ ಮುಖ್ಯ ದಳನಾಯಕನಾದ ಹೈದರ್‌ಖಾನನು ಬೆಳಗಾಂವಿ ಮತ್ತು ಧಾರವಾಡಗಳನ್ನು ಜಯಿಸಿ ಹೋಗಿದ್ದವನು ಹಿಂದೆ ಬಂದಾಗ ಗೋಡೆಯು ನಿರ್ಮಾಣವಾಯಿತು. ಇಂತಹ ಉತ್ತಮ ಕೆಲಸದಲ್ಲಿ ಅವನಿಗೂ ಒಂದು ಭಾಗವಿರಲಿಲ್ಲವೆಂಬ ಅಪವಾದವನ್ನು ಹೋಗಲಾಡಿಸುವುದಕ್ಕಾಗಿ, ಎಲ್ಲಕ್ಕಿಂತಲೂ ಎತ್ತರವಾದ ಒಂದು ಗೋಪುರವನ್ನು ಕಟ್ಟಲು ಈತನಿಗೆ ಹೇಳಿದನು. ಈತನು ರಚಿಸಿದ್ದೇ ಈ ಉಪಾರಿ ಗೋಪುರವು. ಇದರಲ್ಲೂ ಲಂಡ್ಕೇರಿಯೆಂಬ ಒಂದು ದೊಡ್ಡ ಫಿರಂಗಿಯಿದೆ.

ನಗರದ ಹೊರಗೋಡೆಯ ಪರಿಘವು ೬॥ ಮೈಲು ಇದೆ. ಇದರ ಆರಂಭದ ಬಾಗಿಲುಗಳಿಗೆ ಬಾಮಿನಿ (ಉತ್ತರ), ಅಲ್ಹಾಪೂರ (ಪೂರ್ವ), ಮಕ್ಕ (ಪಶ್ಚಿಮ), ಮತ್ತು ಫತ್ತೆ (ದಕ್ಷಿಣ) ಎಂದು ಹೆಸರಿತ್ತು. ವಿಜಯವೆಂದರ್ಥವುಳ್ಳ ಕೊನೆಯ ಹೆಸರನ್ನು ಔರಂಗಜೇಬನು ಬಿಜಾಪುರವನ್ನು ಜಯಿಸಿದನಂತರ ಬದಲಾಯಿಸಿಬಿಟ್ಟನು. ಈ ದ್ವಾರದಲ್ಲಿ ಲಂಡಕಸಾಬ್ ಮತ್ತು ಫಿರಂಗೀಬುರ್ಜ್ ಎಂಬ ಎರಡು ಕೊತ್ತಲಗಳಿವೆ. ಪಶ್ಚಿಮದ ಮಕ್ಕ ದ್ವಾರವು ಈಗ ಮುಚ್ಚಲ್ಪಟ್ಟಿದೆ. ಇದರ ಪಶ್ಚಿಮಕ್ಕೆ ಎರಡನೆಯ ಇಬ್ರಾಹಿಮ್ ಅದಿಲ್‌ಖಾನ ಮಸೀದಿ ಮತ್ತು ಗೋರಿಗಳಿವೆ. ಇವೆರಡೂ ಒಂದೇ ಅಡಿಗಟ್ಟಿನ ಮೇಲಿವೆ. ಬಿಜಾಪುರದ ಭವ್ಯವಾದ ಕಟ್ಟಡಗಳಲ್ಲಿ ಇವೆರಡಾಗಿವೆ.

ಮೊದಲನೆಯ ಆದಿಲ್‌ಖಾನಷ್ಟು ಬಿಜಾಪುರಕ್ಕೆ ಮತ್ತಾರೂ ಸಹಾಯಮಾಡಿಲ್ಲ. ಫೆರಿಷ್ಟನ ಅಭಿಪ್ರಾಯದಂತೆ ಈತನೇ ತೊರ್ವಿ ವಾಟರ್‌ವರ್ಕ್ಸನ್ನು ಮಾಡಿಸಿ ಇಡೀ ಪಟ್ಟಣಕ್ಕೆ ನೀರನ್ನು ಒದಗಿಸಿಕೊಟ್ಟವನು. ತೊರ್ವಿಯು ಬಿಜಾಪುರಕ್ಕೆ ಮೂರು ಮೈಲು ಪಶ್ಚಿಮದಲ್ಲಿದೆ. ಇಲ್ಲಿಂದ ಒಂದು ಮೈಲು ಮೇಲೆ ಒಂದು ದೊಡ್ಡ ಬಂಡು ಕಟ್ಟಿ ಜಲಾಶಯವನ್ನು ತಯಾರಿಸಿದ್ದನು. ಬಿಜಾಪುರದಲ್ಲಿ ನೋಡತಕ್ಕ ಬೇರೆ ಕಟ್ಟಡಗಳೆಂದರೆ ಮೆಹ್ತಾರ್ ಮಹಾಲ್ ಮತ್ತು ಜುಮ್ಮಾ ಮಸೀದಿ. ಮೊದಲನೆಯದರ ಹೆಸರಿಗೆ ಈ ರೀತಿ ಕಥೆಯಿದೆ. ಮೊದಲನೆಯ ಇಬ್ರಾಹಿಮನಿಗೆ ಕುಷ್ಟವು ಹಿಡಿದಿರಲು, ಅದನ್ನು ಹೋಗಲಾಡಿಸುವುದಕ್ಕೆ ಏನುಮಾಡಬೇಕೆಂದು ವಿಚಾರಿಸಲು, 'ಮರುದಿನ ಮುಂಜಾನೆ ನೀನು ಪ್ರಥಮ ಯಾರ ಮುಖವನ್ನು ನೋಡುವೆಯೋ ಅವನಿಗೆ ನೀನು ತುಂಬಾದ್ರವ್ಯವನ್ನು ಕೊಟ್ಟು, ಅದನ್ನು ಸದ್ವಿನಿಯೋಗ ಮಾಡಿಸತಕ್ಕದ್ದು' ಎಂದು ಒಬ್ಬನು ಹೇಳಿದನು. ಜೋಯಿಸನಿಗೆ ಮರುದಿನ ತಾನೇ ಅರಸನಿಗೆ ಬೆಟ್ಟಿಯಾಗಿ ಹಣ ಪಡೆಯಬೇಕೆಂಬಾಶೆಯಿದ್ದಿದ್ದರೂ ಅರಸನು ಬೆಳಿಗ್ಗೆ ಕಸ ಗುಡಿಸುವವನನ್ನು ನೋಡಿ ಅವನಿಗೆ ಧಾರಾಳ ಹಣವನ್ನು ಕೊಡಲು, ಅವನು ಆಶ್ಚರ್ಯಪಟ್ಟು ದಲ್ಲದೆ ಆ ಹಣದಿಂದ ಮಸೀದಿಯನ್ನು ದ್ವಾರವನ್ನು ಕಟ್ಟಿಸಿದನು. ದಕ್ಷಿಣ

ಹಿಂದೂಸ್ಥಾನದಲ್ಲೆಲ್ಲಾ ಅತಿ ದೊಡ್ಡದಾದ ಈ ಜುಮ್ಮಾ ಮಸೀದಿಯನ್ನು ಮೊದಲನೆಯ ಆದಿಲ್‌ಖಾನು ೧೫೫೭ ರಲ್ಲಿ ಆರಂಭಿಸಿ, ಔರಂಗಜೇಬ ಮತ್ತು ಸತಾರದ ಅರಸರ ಸಹಾಯ ದೊರೆತರೂ ಪೂರೈಸಲಾರದೆ ಹೋದನು. ಆದ್ದರಿಂದ ಅಜಾನ್ ಹೇಳುವುದಕ್ಕೆ ಗೋಪುರವಿಲ್ಲದ ಕಾರಣ ಈಗ ಅಂಗಳದ ಮಧ್ಯೆ ಇರುವ ಒಂದು ಶಿಲೆಯ ಮೇಲಿಂದ ಹೇಳಬೇಕಾಗುತ್ತದೆ.

ಆರ್ಕಿಲ್ಲಾ ಎಂಬ ಕೋಟೆಯೊಳಗೆ ಅನೇಕ ಸುಂದರವಾದ ಕಟ್ಟಡಗಳಿವೆ. ಇದರ ಸುತ್ತಲೂ ನೀರು ತುಂಬಿದ ಕಂದಕವಿದೆ. ಟೇವರ್ನೀಯರನ ಹೇಳಿಕೆಯಂತೆ ಪೂರ್ವದಲ್ಲಿ ಇದರಲ್ಲಿ ತುಂಬಾ ಮೊಸಳೆಗಳಿದ್ದುದರಿಂದ ಯಾರಿಂದಲೂ ಇದನ್ನು ದಾಟಲಾಗುತ್ತಿರಲಿಲ್ಲ. ಒಳಗಣ ಕಟ್ಟಡಗಳಲ್ಲಿ ಚಿನಿ ಮಹಾಲಿನಲ್ಲಿ ಜಡ್ಜರ ಮತ್ತು ಮೇಜಿಸ್ಟ್ರೇಟರ ಕೋರ್ಟುಗಳಿವೆ. ಸತ್‌ಮಿನ್ಜಿಲಿ ಎಂಬವಳು ಅಂತಸ್ತಿನ ಸುಂದರವಾದ ಕಟ್ಟೋಣದಲ್ಲಿ ಮೂರು ಅಂತಸ್ತು ಬಿದ್ದು ಹೋಗಿದೆ ಆನಂದ ಮಹಾಲ್ ಅಥವಾ ತಾಜ್ ಅರಮನೆಯನ್ನು ಸಿವಿಲ್ ಸರ್ಜನರ ಆಫೀಸಾಗಲುಪಯೋಗಿಸುತ್ತಾರೆ. ಅಲ್ಲದೆ ಗುಗಾನ್‌ಮಹಲ್ ಅಥವಾ ಓಲಗಶಾಲೆಯೆಂಬ ಕಟ್ಟಡವೂ ಇದೆ.

ಇಲ್ಲಿ ಹತ್ತಿ, ಗೋಧಿ ಮತ್ತು ಎಣ್ಣೆಯ ಕಾಳುಗಳೇ ಮುಖ್ಯ ವ್ಯಾಪಾರ ಜಿನಸುಗಳಾಗಿವೆ. ಇಲ್ಲಿ ಹತ್ತಿಯ ಜವಳ್ಯಾನಗಳೂ ಚರ್ಮದ ಮೊಜ್ಜೆಗಳೂ ತಯಾರಾಗುತ್ತವೆ. ರೈಲ್ವೆ ಸ್ಟೇಷನ್ನಿಂದ ಒಂದು ಮೈಲಿನಲ್ಲಿ ಒಂದು ಮುಸಾಫರ್ ಬಂಗ್ಲಿಯೂ, ೧॥ ಮೈಲಿನಲ್ಲಿ ಒಂದು ಧರ್ಮಶಾಲೆಯೂ ಇವೆ. ಟೋಂಗಾಗಳು ಯಾವಾಗಲೂ ಸಿಗುತ್ತವೆ. ಸ್ಟೇಷನಿನಿಂದ ಪಟ್ಟಣಕ್ಕೆ ಸಾಧಾರಣ ೦—೮—೦ ಬಾಡಿಗೆ ಇದೆ.

## ಬೆಂಗಳೂರು

ಇಡೀ ಕರ್ಣಾಟಕದಲ್ಲೆಲ್ಲಾ ದೊಡ್ಡಪಟ್ಟಣ. ಮೈಸೂರು ಸಂಸ್ಥಾನದ ಮುಖ್ಯಪಟ್ಟಣ. ಮೈಸೂರು ಸರಕಾರದ ಪೀಠಸ್ಥಾನ.

ಜನಸಂಖ್ಯೆ ೨ ಲಕ್ಷದ ಮೇಲೆ. ದಂಡು, ಸಿಟಿ ಎಂಬ ಎರಡು ಭಾಗ ಗಳುಂಟು. ದಂಡಿನ ಭಾಗವು ೧೮೮೧ ರಲ್ಲಿ ಕೌಲಿನಂತೆ ಬ್ರಿಟಿಷರ ವಶ ಮಾಡಲ್ಪಟ್ಟಿತು. ಸಮುದ್ರ ಮಟ್ಟದ ಮೇಲೆ ೩೧೧೩ ಅಡಿಗಳ ಎತ್ತರದಲ್ಲಿದ್ದು, ಯೂರೋಪಿಯನರು ಮತ್ತು ಹಿಂದೂ ಜನರಿಬ್ಬರ ಸ್ವಾಸ್ಥ್ಯಕ್ಕೂ ಅನುಗುಣವಾಗಿ, ಉತ್ತಮ ಜಲವಾಯುಗುಣವನ್ನು ಹೊಂದಿರುತ್ತದೆ. ಬಹಳ ಜನರು ನೀಲಗಿರಿಯ ಹವಾ ಗುಣಕ್ಕಿಂ ತಲೂ, ಇದರ ಹವಾ ಗುಣವನ್ನೇ ಹೆಚ್ಚಾಗಿ ಕೋರಿ, ಇಲ್ಲಿ ವಾಸಿಸುವದಕ್ಕೆ ಬರುತ್ತಾರೆ. ಇತಿಹಾಸ ಪ್ರಸಿದ್ಧವಾದ ಸ್ಥಳ. ೧೬ ನೇ ಶತಾಬ್ದದಲ್ಲಿ ಮಾಗಡಿ ಕೆಂಪೇಗೌಡನಿಂದ ಕಟ್ಟಲ್ಪಟ್ಟ, ಮಣ್ಣಿನ ಕೋಟೆಯು, ೧೭೬೧ ರಲ್ಲಿ ಹೈದರಲ್ಲಿಯಿಂದ ಕಲ್ಲಿನಿಂದ ಕಟ್ಟಲ್ಪ ಟ್ಟಿತು. ೧೭೯೧ ರಲ್ಲಿ ಲಾರ್ಡ್ ಕಾರನ್‌ವಾಲೀಸನಿಂದ ತೆಗೆದುಕೊಳ್ಳ ಲ್ಪಟ್ಟಿತು. ಈ ಕೋಟೆಯ ಬಹಳ ಭಾಗವೆಲ್ಲಾ ಒಡೆಯಲ್ಪಟ್ಟು ಶಿಥಿಲವಾಗಿದ್ದರೂ, ಈಗ ಉಳಿದಿರುವ ಅವಶಿಷ್ಟಭಾಗವು ನೋಡುವು ದಕ್ಕೆ ಬಹಳ ಗಂಭೀರವಾಗಿರುವದು. ಕೋಟೆಯ ಒಳಗೆ, ಗೋಡೆ ಗಳಲ್ಲಿಯೇ ಮಾಡಲ್ಪಟ್ಟ ಬಂದೀ ಖಾನೆಗಳೂ ಈಗಲೂ ಇರುವುವು. ಅನೇಕ ದೇವಸ್ಥಾನಗಳು ಇರುವವು. ಕೆಂಪಾಂಬುಧಿ ಕೆರೆಯೆಂಬ ದೊಡ್ಡ ಕೆರೆಯಿರುವದು. ಕೋಟೆಗೆ ವಾಯುವ್ಯದಲ್ಲಿ ಒಂದು ಮೈಲು ದೂರದಲ್ಲಿ, ಒಂದು ಗುಹೆಯಿರುವದು. ಆ ಗವಿಯ ಹತ್ತಿರದಲ್ಲೇ ಕೆಂಪೇಗೌಡನಿಂದ ಕಟ್ಟಿಸಲ್ಪಟ್ಟ, ಗವಿಗಂಗಾಧರೇಶ್ವರನ ದೇವಾಲ ಯವೂ ಇರುವದು. ಈ ಪುರಾತನ ಸ್ಥಳಗಳಲ್ಲದೆ ಮಹಾರಾಜರ ಅರ ಮನೆ, ಅಠಾರಾಕಛೇರಿ, ಆಸ್ಪತ್ರೆಗಳು, ಕಾಲೇಜು, ಮ್ಯೂಸಿಯಮ್ ಮೊದಲಾದ ಅಂದವಾದ ಕಟ್ಟಡಗಳೂ ಇರುವವು. ಅನೇಕ ರಮ ಣೀಯವಾದ ಉದ್ಯಾನವನಗಳೂ ಇರುವವು. ವಿಜ್ಞಾನ ಶೋಧಗ ಳನ್ನು ಮಾಡುವ ಉದ್ದೇಶದಿಂದ ತೆಗೆಯಲ್ಪಟ್ಟ ಇಂಡಿಯನ್ ಇನ್‌ಸ್ಟಿ ಟ್ಯೂಟ್ ಆಫ್ ಸಯನ್ಸ್ ಎಂಬ ವಿಜ್ಞಾನ ಶಾಲೆಯೂ ಇರುವದು. ದೊಡ್ಡವ್ಯಾಪಾರಸ್ಥಳ ಮತ್ತು ರೈಲ್ವೆ ಜಂಕ್ಷನ್.

## ಬೆಳಗಾಂವಿ

ಬೆಳಗಾಂವಿ ಜಿಲ್ಲೆಯ ಮುಖ್ಯಪಟ್ಟಣ. ಹವ ಚೆಲೋದು, ಅತೀಉಷ್ಣವೂ ಇಲ್ಲ ಅತೀ ಶೀತವೂಇಲ್ಲ. ಇಲ್ಲಿ ಕಂಟೋನ್ಮೆಂಟ್ ಇದೆ. ಇದರಲ್ಲಿ ಯೂರೋಪಿಯನ್ ಮತ್ತು ಇಂಡಿಯನ್ ಶಿಪಾಯಿಗಳಿದ್ದಾರೆ. ಬೊಂಬಾಯಿ ಸಂಸ್ಥಾನದ ದಕ್ಷಿಣಭಾಗದ ಕಮಿಷನರ ಆಫೀಸೂ, ಕಲೆಕ್ಟರ ಆಫೀಸೂ ಕೋರ್ಟು ಕಚೇರಿಗಳೂ ಇಲ್ಲಿವೆ. ಅನೇಕ ಶಾಲೆಗಳು ಇವೆ. ಇಲ್ಲಿಯ ಕೋಟೆಯಸುತ್ತಲೂ ಆಳವಾದ ಕಂದಕವಿದೆ. ಇದು ೧೮೧೮ ರಲ್ಲಿ ಬ್ರಿಟಿಷರ ಕೈಸೇರಿತು. ಹತ್ತಿಯ ಕೈಗಾರಿಕೆಯೇ ಇಲ್ಲಿಯ ಮುಖ್ಯ ಕೈಗಾರಿಕೆಯಾಗಿದೆ. ಶಹಾಪುರದಲ್ಲಿ ರೇಶ್ಮೆ ಬಟ್ಟೆಗಳೂ ತಯಾರಾಗುತ್ತವೆ.

ಪರಸಗಡದಲ್ಲಿ ಯೆಲ್ಲಮ್ಮನ ಬೆಟ್ಟವಿದೆ. ಏಪ್ರಿಲ್ ತಿಂಗಳ ಹುಣ್ಣಿಮೆ ದಿವಸವೂ ನವಂಬರ ತಿಂಗಳಲ್ಲೂ ಇಲ್ಲಿ ಜಾತ್ರೆಯು ನಡೆಯುತ್ತದೆ. ಇದು ಮೂರು ದಿವಸ ನಡಿಯುತ್ತದೆ. ಈ ಜಾತ್ರೆಗಳಿಗೆ ೧೫೦೦೦ ದಿಂದ ೪೦೦೦೦ ದವರೆಗೆ ಜನರು ಬರುತ್ತಾರೆ. ನವಂಬರ ಜಾತ್ರೆಯು ಯೆಲ್ಲಮ್ಮನ ಗಂಡನ ಮರಣವನ್ನೂ ಏಪ್ರಿಲ್ ಜಾತ್ರೆಯು ಅವನ ಪುನರ್ಜನ್ಮವನ್ನೂ ಸೂಚಿಸುತ್ತವೆ. ನವಂಬರದ ಜಾತ್ರೆಯು ಯೆಲ್ಲಮ್ಮನ ಗುಡಿಯಿಂದ ಕಾಲು ಮೈಲು ದೂರದಲ್ಲಿರುವ ಒಂದು ಗುಡಿಯಲ್ಲಿ ಜರಗುತ್ತದೆ. ಜಾತ್ರೆಯ ಸಮಯ ಒಂದುಸಲ ಕೂಡಿದ ಜನರೆಲ್ಲ ಬೊಬ್ಬಿಡುತ್ತಾರೆ. ಮತ್ತು ಯೆಲ್ಲಮ್ಮನ ವೈಧವ್ಯದಲ್ಲಿಸಹತಾಪದೋರಿಸುವುದಕ್ಕೆ ಹೆಂಗಸರು ತಮ್ಮ ಕೈ ಬಳೆಗಳನ್ನು ಒಡೆದುಕೊಳ್ಳುತ್ತಾರೆ.

## ಮೈಸೂರು

ಇದು ಮೈಸೂರು ಸಂಸ್ಥಾನದ ರಾಜಧಾನಿ. ಇಲ್ಲಿ ಮಹಾರಾಜರ ಅರಮನೆ ಇದೆ. ಇಲ್ಲಿ ಕೋಟೆಯಲ್ಲಿರುವ ಅರಮನೆಯೂ, ಜಗನ್ಮೋಹನ ಅರಮನೆಯೂ, ಬೇಸಿಗೆಯ ಅರಮನೆಯೂ ಬಹಳ ಸುಂದರವಾಗಿವೆ. ಇಲ್ಲಿ ಪ್ರತಿವರ್ಷವೂ ದಸರಹಬ್ಬವು ಬಹಳ ವಿಜೃಂಭಣೆಯಿಂದ ನಡೆಯುತ್ತದೆ.

ಇಲ್ಲಿಂದ ದಕ್ಷಿಣ ಪೂರ್ವದಲ್ಲಿ ಚಾಮುಂಡಿಬೆಟ್ಟವಿದೆ. ಇದು ಸಮುದ್ರತಳಕ್ಕಿಂತ ೩೪೮೯ ಅಡಿ ಎತ್ತರವಾಗಿದೆ. ಇದರ ಶಿಖರದಲ್ಲಿ ಚಾಮುಂಡೀ ದೇವಾಲಯವಿದೆ. ಬೆಟ್ಟಕ್ಕೆ ಹತ್ತುವ ಮೆಟ್ಟಲಲ್ಲಿ ಬಸವನ ದೊಡ್ಡಪ್ರತಿಮೆಯೊಂದನ್ನು ಕಲ್ಲಿಂದ ಕೆತ್ತಿಮಾಡಿರುತ್ತಾರೆ. ಈ ಬಸವನ ವಿಗ್ರಹವು ೧೬ ಅಡಿ ಎತ್ತರವಾಗಿ ಬಹು ಸುಂದರವಾಗಿದೆ. ಇದನ್ನು ೧೬೫೯ ರಲ್ಲಿ ಪಟ್ಟಕ್ಕೆ ಬಂದ ದೊಡ್ಡದೇವರಾಯನು ಮಾಡಿಸಿದನು. ದಕ್ಷಿಣ ಹಿಂದೂಸ್ಥಾನದಲ್ಲಿ ಮೈಸೂರು ಪಟ್ಟಣವು ಅತಿ ಸುಂದರವಾದ ಪಟ್ಟಣವೆಂದು ಹೆಸರುಗೊಂಡಿದೆ.

## ಶಿವಮೊಗ್ಗ

ಮೈಸೂರು ಸಂಸ್ಥಾನದ ಶಿಮೊಗ್ಗಜಿಲ್ಲೆಯ ಮುಖ್ಯಪಟ್ಟಣ ಪ್ರಸಿದ್ಧವಾದ ಗೇರುಸಪ್ಪಜೋಗಿಗೆ, ಇಲ್ಲಿಂದ ೬೪ ಮೈಲು ದೂರವಿದೆ. ಜೋಗು ಇಡೀ ಪ್ರಪಂಚದಲ್ಲಿ ಅತಿ ಎತ್ತರವಾದದ್ದು. ಈ ಜೋಗು ೪ ಕವಲುಗಳಾಗಿ ಬೀಳುತ್ತದೆ. ಅವುಗಳಲ್ಲಿ 'ರಾಜ' ವು ೮೩೦ ಅಡಿ ತಗ್ಗಿಗೆ ಬೀಳುತ್ತದೆ. ಉಳಿದ ಕವಲುಗಳನ್ನು 'ರೋರರ್' 'ರಾಕೆಟ್' ಮತ್ತು 'ಡೇಮ್‌ಬ್ಲಾಂಚಿ' ಎಂದು ಕರೆಯುತ್ತಾರೆ. ಇವು ಪಶ್ಚಿಮಘಟ್ಟದ ಮೇಲನಿಂದ ಬೀಳುತ್ತದೆ. ಇಲ್ಲಿಯ ಸೃಷ್ಟಿ ಸೌಂದರ್ಯವು ಅಪಾರವಾದುದು. ಇವುಗಳ ಸೌಂದರ್ಯವನ್ನು ನೋಡುವುದಕ್ಕೆ ಛಳಿಗಾಲವು ಅತ್ಯುತ್ತಮವಾದದ್ದು. ಶಿಮೊಗ್ಗದಿಂದ ೪೫ ಮೈಲು ದೂರವಿರುವ ನಗರಕ್ಕೆ ಟಪ್ಪಾಲುಕೊಂಡ್ಯೊಯ್ಯುವ ಜಟ್ಕಾ ಇದೆ. ಇದರಲ್ಲಿ ಟಿಕೆಟಿಗೆ ೩ ರೂಪಾಯಿ ಚಾರ್ಜಿದೆ. ಇದಲ್ಲದೆ ಪೋಸ್ಟಮಾಸ್ಟರರ ಕೂಡಹೇಳಿದರೆ ಸ್ಪೆಷಲ್ ಜಟ್ಕಾಕೂಡ ಸಿಗುತ್ತದೆ. ಸಾಗರದ ಅಮಲ್ದಾರರ ಮೂಲಕ ಸಾಗರದಿಂದ ಗೇರುಸೊಪ್ಪಗೆ ಜಟ್ಕಾ ಸಿಗುತ್ತದೆ. ಸಾಗರದಲ್ಲಿ ಒಂದು ಮುಸಾಫರಿ ಬಂಗ್ಲೆಯಿದೆ. ಗೇರುಸೊಪ್ಪ ಜೋಗಿನ ಸಮೀಪ ಎರಡು ಮುಸಾಫರಿ ಬಂಗ್ಲೆಗಳಿವೆ.

ಕುಮ್ಸಿಯಿಂದ ಜೋಗಿಗೆ ಹೋಗುವ ರಸ್ತೆಯು ದಟ್ಟವಾದ ಕಾಡಿನಿಂದ ಹಾದುಹೋಗುತ್ತದೆ. ಈ ಕಾಡಿನಲ್ಲಿ ಕಾಡುಮೃಗಗಳು ತುಂಬಾ ಇವೆ.

## ಶ್ರೀರಂಗಪಟ್ಟಣ

ಇದು ಮೈಸೂರು ರಾಜ್ಯದ ಪೂರ್ವದ ರಾಜಧಾನಿಯಾಗಿತ್ತು ಇದು ಕಾವೇರಿನದಿಯ ಒಂದು ನಡುಗಡ್ಡೆಯಲ್ಲಿದೆ. ಇಲ್ಲಿಯ ಕೋಟೆಯು ಬಹುಪ್ರಸಿದ್ಧವಾದುದು. ಇಲ್ಲಿ ಬ್ರಿಟಿಷರಿಗೂ ಟಿಪ್ಪುಸುಲ್ತಾನನಿಗೂ ಅನೇಕ ಯುದ್ಧಗಳಾಗಿದ್ದವು. ೧೭೯೨ ರಲ್ಲಿ ಲಾರ್ಡುಕಾರ್ನವಾಲೀಸನಿಗೂ ಟಿಪ್ಪುವಿಗೂ ಇಲ್ಲಿ ಒಪ್ಪಂದವಾಯಿತು. ೧೭೯೯ರಲ್ಲಿ ಜನರಲ್ ಹೇರಿಸನು ಈ ಕೋಟೆಯನ್ನು ವಶಮಾಡಿಕೊಂಡಾಗ ಟಿಪ್ಪುವು ಪ್ರಾಣಬಿಟ್ಟನು. ಕೋಟೆಯಲ್ಲಾದ ಒಡಕೂ, ಹೇವಿಲೆಂಡ್‌ಕಮಾನೂ, ರಂಗನಾಥಸ್ವಾಮಿ ದೇವಸ್ಥಾನವೂ, ದೊಡ್ಡಮಸೀದಿಯೂ ನೋಡಲಿಕ್ಕೆ ಯೋಗ್ಯವಾದ ವಿಷಯಗಳಾಗಿವೆ. ಕೋಟೆಯ ಪೂರ್ವದಿಕ್ಕಿನಲ್ಲಿ ದರಿಯಾದೌಲತ್‌ಭಾಗ್ ಇದೆ. ಇದರಲ್ಲಿ ಟಿಪ್ಪುಸುಲ್ತಾನನ ವಿಶ್ರಾಂತಿ ಗೃಹವಿದೆ. ಅದರ ಗೋಡೆಯ ಮೇಲೆ ಸುಂದರವಾದ ಚಿತ್ರ ಕೆಲಸವು ಮಾಡಿದೆ. ಇದಕ್ಕೆ ಪೂರ್ವದಲ್ಲಿ ಗಂಜಾಮಿನ ಸರಹದ್ದಿನಲ್ಲಿ ಲಾಲ್‌ಬಾಗ್ ಇದೆ. ಇದರಲ್ಲಿ ಟಿಪ್ಪುವು ತನ್ನ ತಂದೆಯಾದ ಹೈದರನಿಗೆ ಕಟ್ಟಿಸಿದ ಗೋರಿ ಇದೆ. ಇದರಲ್ಲೇ ಟಿಪ್ಪುವಿನ ಸಮಾಧಿಯೂ ಇದೆ. ದಂತದ ಕಟ್ಟಿಗೆಯುಳ್ಳ ಇಬನಿಲೋಹದ ಅದರ ಬಾಗಿಲುಗಳನ್ನು ಡಲ್‌ಹೌಸಿಯು ಉಚಿತವಾಗಿ ಕೊಟ್ಟಿದ್ದು. ಸ್ಟೇಷನಿನಿಂದ ಹೈದರನ ಸಮಾಧಿಗೆ ಮೂರು ಮೈಲು ದೂರವಿದೆ. ಎತ್ತಿನ ಗಾಡಿಗಳು ಸಿಗುತ್ತವೆ. ಸ್ಟೇಷನಿಂದ ಒಂದೂವರೆಮೈಲು ದೂರದಲ್ಲಿ ಒಂದು ಮುಸಾಫರಿ ಬಂಗ್ಲೆಯಿದೆ. ಶ್ರೀರಂಗಪಟ್ಟಣಕ್ಕೆ ಮೈಸೂರಿನಿಂದ ೯ ಮೈಲುದೂರವಿದೆ.

## ಶೃಂಗೇರಿ

ಇದು ಕಡೂರು ಜಿಲ್ಲೆಯ ತುಂಗಾನದಿಯ ಎಡದಂಡೆಯ ಮೇಲಿರುವ ಒಂದುಗ್ರಾಮ. ಇದು ವಿಭಾಂಡಕ ಋಷಿಯು ತಪಸ್ಸು ಮಾಡಿದ ಸ್ಥಳವೆಂದೂ, ಇಲ್ಲಿಯೇ ಋಷ್ಯಶೃಂಗನು ಹುಟ್ಟಿದನೆಂ

ದೂ ಸ್ಥಳಪುರಾಣದಲ್ಲಿ ಹೇಳಿದೆ. ಎಂಟನೆಯ ಶತಮಾನದಲ್ಲಿ ಅದ್ವೈತಮತಸ್ಥಾಪಕರಾದ ಶ್ರೀ ಶಂಕರಾಚಾರ್ಯರು ಕಾಶ್ಮೀರದಿಂದ ಶಾರದಮ್ಮನ ವಿಗ್ರಹವನ್ನು ತಂದು ಇಲ್ಲಿನೆಲೆಸಿದರೆಂದು ಹೇಳುತ್ತಾರೆ. ಇಲ್ಲಿಯ ಸರಸ್ವತೀ ಪಟ್ಟವು ಇವರಿಂದ ಹಿಡಿದು ಈ ವರೆಗೂ ತಪ್ಪದೆ ನಡೆಯುತ್ತ ಬಂದಿದೆ. ಶೃಂಗೇರಿಯ ಜಗದ್ಗುರು ಸ್ವಾಮಿನರಸಿಂಹ ಆಚಾರ್ಯರು ಪುಣ್ಯಪುರುಷರೂ ಅಪಾರ ವಿದ್ಯಾವಂತರೂ ಎಂಬುದನ್ನು ಶಿವಭಕ್ತರೆಲ್ಲರೂ ಒಪ್ಪಿಕೊಳ್ಳುತ್ತಾರೆ. ತುಂಗಾನದಿಯ ತಪ್ಪಲಲ್ಲಿ ಮಠದ ಪ್ರಾಚೀನತಸದೀಕು ಭೂಮಿಯಿದೆ. ಇದಲ್ಲದೆ ಮೈಸೂರು ಸರಕಾರದಿಂದ ಇಲ್ಲಿಗೆ ಪ್ರತಿವರ್ಷವೂ ೧೦೦ ಪವನು ತಸದೀಕು ಇದೆ ಈ ಹಳ್ಳಿಯಲ್ಲಿ ಮುಖ್ಯ ಒಂದು ರಸ್ತೆಯಿದೆ. ಇಲ್ಲಿಯ ಶೃಂಗಗಿರಿಯ ಮೇಲೆ ಶಾರದಮ್ಮನ ದೇವಸ್ಥಾನವಿದೆ. ವರ್ಷದಲ್ಲಿ ಅನೇಕ ಜಾತ್ರೆಗಳು ನಡೆಯುತ್ತವೆ. ಕಡೂರಿಂದ ಇಲ್ಲಿಗೆ ೫೫ ಮೈಲು ದೂರವಿದೆ. ಗಾಡಿಗಳು ಕಡೂರಲ್ಲಿ ಸಿಗುತ್ತವೆ.

## ಶ್ರವಣಬೆಳಗೊಳ

ಇದು ಜೈನಮತದ ದಿಗಂಬರಶಾಖೆಯುವರಿಗೆ ಮುಖ್ಯಸ್ಥಳ. ಹಾಸನ ಡಿಸ್ಟ್ರಿಕ್ಟಿನ ಚನ್ನರಾಯಪಟ್ಟಣ ತಾಲ್ಲೂಕಿಗೆ ೨ ಮೈಲಿದೂರದಲ್ಲಿದೆ. ಇಲ್ಲಿ ಒಂದು ಗುಡ್ಡವೂ ಒಂದು ಪ್ರಸಿದ್ಧ ತಟಾಕವೂ ಇವೆ. ಜೈನಶ್ರಮಣರನೇಕರು ಇಲ್ಲಿದ್ದುದರಿಂದಲೂ ನಿರ್ಮಲಸರಸ್ಸಿರುವುದರಿಂದಲೂ ಈ ಹೆಸರು ಬಂದಿದೆ.

ಇಲ್ಲಿ ಅನೇಕ ಬಸ್ತಿಗಳಲ್ಲದೆ ಪ್ರಸಿದ್ಧ ಗೋಮಟೇಶ್ವರ ವಿಗ್ರಹವಿದೆ. ೫೮ ಅಡಿ ಎತ್ತರವೂ ಬಹು ಸೌಮ್ಯವೂ ಆದ ಆ ವಿಗ್ರಹವನ್ನು ಚಾಮುಂಡರಾಯನು ಹತ್ತನೇ ಶತಮಾನದಲ್ಲಿ ಸ್ಥಾಪಿಸಿದನು. ಇದಲ್ಲದೆ ಐತಿಹಾಸಿಕರಿಗೆ ಇಲ್ಲಿ ಇನ್ನೂ ಅನೇಕ ಸಂಗತಿಗಳುಂಟು. ಅವುಗಳಲ್ಲಿ ಅತಿಪುರಾತನವಾದುದು ಕ್ರಿ. ಶ. ೪ ನೇ ೫ ನೇ ಶತಮಾನದಷ್ಟು ಹಿಂದಿನದು. ಜೈನರಿಗಿದು ಪವಿತ್ರವಾದಯಾತ್ರಾಸ್ಥಳ.

## ಹರಿಹರ

ಇದು ತುಂಗಭದ್ರಾನದಿಯ ಬಲದಂಡೆಯಲ್ಲಿರುವ ಪಟ್ಟಣವಾಗಿದೆ. ಇದೇ ಮೈಸೂರು ಸೀಮೆಯುಗಡಿ. ಒಂದು ಕಾಲದಲ್ಲಿ ಇಲ್ಲಿ ಕಂಟೋನ್ಮೆಂಟು ಇತ್ತು. ಇಲ್ಲಿ ೧೩ ನೆಯ ಶತಮಾನದಲ್ಲಿ ಕಟ್ಟಿದ ಪ್ರಸಿದ್ಧ ಹರಿಹರೇಶ್ವರ ದೇವಸ್ಥಾನವಿದೆ. ರೈಲ್ವೆಸ್ಟೇಷನಿನ ಬಳಿ ಒಂದು ಮುಸಾಫ್ರಿಬಂಗ್ಲೆ ಇದೆ.

## ಹಂಪೆ

ಹೊಸಪೇಟೆಯಿಂದ ೭ ಮೈಲು ದೂರದಲ್ಲಿತುಂಗ ಭದ್ರಾನದಿಯದಡದ ಮೇಲೆ ಹಾಳುಬಿದ್ದ ಪ್ರಸಿದ್ಧ ಹಂಪೆ ನಗರವಿದೆ. ಇದು ವಿಜಯನಗರದ ರಾಜರ ಪ್ರಾಚೀನ ರಾಜಧಾನಿಯಾಗಿದ್ದು, ಕೊನೆಗೆ ಬಿಜಾಪುರ ಮತ್ತು ಗೋಲ್ಕೊಂಡ ರಾಜರಿಂದ ಆಕ್ರಮಿಸಲ್ಪಟ್ಟಿತು. ವಿಜಯನಗರದ ರಾಜರಕಾಲದಲ್ಲಿ ಹಂಪೆಪಟ್ಟಣವನ್ನು ವಿಸ್ತರಿಸಿ, ಸುಂದರವಾದ ಅರಮನೆಗಳನ್ನೂ ದೇವಸ್ಥಾನಗಳನ್ನೂ ಕಟ್ಟಿದರು. ಸೀಜರ್‌ಫ್ರೆಡರಿಕನು ಇಲ್ಲಿಯ ಅರಮನೆಯ ವಿಷಯವಾಗಿ ಹೀಗೆ ಹೇಳುತ್ತಾನೆ. "ನಾನು ಅನೇಕ ರಾಜಸ್ಥಾನಗಳನ್ನು ನೋಡಿದ್ದೇನೆ. ಆದರೆ ನವದ್ವಾರಗಳಿಂದ ಶೋಭಿಸುವ ವಿಜಯನಗರದ ರಾಜನ ಅರಮನೆಗೆ ಸಮಾನವಾದ ಮತ್ತೊಂದನ್ನು ನಾನು ನೋಡಿಲ್ಲ" ಹಾಳುಬಿದ್ದುದರಲ್ಲಿ ವಿಟೋಬದೇವಸ್ಥಾನವೂ, ಅರಮನೆಯೂ, ಇನ್ನೂ ಅನೇಕ ಕಟ್ಟಡಗಳೂ ಈಗಲೂ ನಿಂತಿವೆ. ಇಲ್ಲಿ ಪ್ರತಿವರ್ಷವೂ ಮಾರ್ಚಿ ಅಥವಾ ಏಪ್ರಿಲ್ ತಿಂಗಳಲ್ಲಿ ದೊಡ್ಡಜಾತ್ರೆ ನಡೆಯುತ್ತದೆ.

ಇದಕ್ಕೆ ನಾನಾ ಕಡೆಗಳಿಂದ ಸಾವಿರಾರು ಜನರು ಬರುತ್ತಾರೆ. ಇಲ್ಲಿಗೆ ಸಮೀಪ ಕಮಲಾಪುರದಲ್ಲಿ ಒಂದು ಮುಸಾಫ್ರಿಬಂಗ್ಲೆ ಇದೆ. ಹೊಸಪೇಟೆಯಲ್ಲಿ ಗಾಡಿಗಳು ಯಾವಾಗಲೂ ಸಿಗುತ್ತವೆ.

## ಮಾರೀಕಣಿವೆ (ಹೊಸದುರ್ಗದ ರೋಡು)

ಮಾರಿಕಣಿವೆ ಸರೋವರಕ್ಕೆ ಹೋಗುವವರು ಇಲ್ಲಿ ರೈಲು ಬಂಡಿಯಿಂದ ಇಳಿಯಬೇಕು. ಮಾರಿಕಣಿವೆ ಸಮೀಪ ವೇದವತೀ

ನದಿಗೆ ಅಡ್ಡವಾಗಿ ೧೩೩೦ ಅಡಿ ಉದ್ದವೂ ೧೪೨ ಅಡಿ ಎತ್ತರವೂ ಉಳ್ಳ ಆಣೆಕಟ್ಟು ಕಟ್ಟಿಯಿದೆ. ಸರೋವರವು ೩೧ ಚದರ ಮೈಲು ವಿಸ್ತೀರ್ಣವುಳ್ಳದ್ದಾಗಿಯೂ ೩೦೦೦೦ ಮಿಲ್ಯನ್ ಘನ ಅಡಿ ನೀರು ಹಿಡಿಯುವಂತಹದಾಗಿಯೂ ಇದೆ. ಈ ಕೆರೆಯ ನೀರಿನಿಂದ ಹಿರಿಯೂರು ತಾಲೂಕಿನ ೨೫೦೦೦ ಎಕರೆ ಭೂಮಿಯಲ್ಲಿ ಸಾಗುವಳಿಯಾಗುತ್ತದೆ. ಈ ನೀರಿನಲ್ಲಿ ದೋಣಿಗಳೂ ಸುಲಭವಾಗಿ ಚಲಿಸುತ್ತವೆ. ನೀರು ತುಂಬಿರುವಾಗ ಈ ಸರೋವರವು ಪ್ರಪಂಚದ ಮನುಷ್ಯ ರಚಿತವಾದ ಅತಿ ದೊಡ್ಡ ಸರೋವರಗಳಲ್ಲಿ ಒಂದಾಗಿರುತ್ತದೆ. ಆಣೆಕಟ್ಟಿನ ಸಮೀಪ ಒಂದು ಮುಸಾಫ್ರಿ ಬಂಗ್ಲೆಯಿದೆ. ಸ್ಟೇಷನಿನಿಂದ ಇಲ್ಲಿಗೆ ೩೨ ಮೈಲು ದೂರವಿದೆ.

## ಗುಲ್ಬರ್ಗ

ಇದು ದಕ್ಷಿಣ ಹಿಂದೂಸ್ಥಾನದ ಆರಂಭದ ರಾಜಧಾನಿಯಾಗಿತ್ತು. ಮತ್ತು ನೈಜಾಮನ ರಾಜ್ಯದ ದಕ್ಷಿಣ ಭಾಗಕ್ಕೆ ಈಗಲೂ ಮುಖ್ಯ ಪಟ್ಟಣವಾಗಿದೆ. ಇಲ್ಲಿ ಅನೇಕ ಮಹಮ್ಮದೀಯರ ಸಮಾಧಿಗಳಿವೆ. ಇಲ್ಲಿ ಪ್ರತಿ ವರ್ಷವೂ ಒಂದು 'ಉರುಸು' ನಡೆಯುತ್ತದೆ. ಇದು ಜನವರಿ ಒಂದರಿಂದ ಹಿಡಿದು ಒಂದು ವಾರದವರೆಗಿರುತ್ತದೆ. ಈ ಜಾತ್ರೆಗೆ ನೈಜಾಮನ ರಾಜ್ಯದ ಎಲ್ಲಾ ಕಡೆಗಳಿಂದಲೂ ಸುಮಾರು ೩೦,೦೦೦ ದಿಂದ ೫೦,೦೦೦ ದವರೆಗೆ ಜನರು ಸೇರುತ್ತಾರೆ. ಇದನ್ನು ಇಲ್ಲಿ ಗೋರಿಯಿರುವ ಒಬ್ಬ ಮುಸಲ್ಮಾನ್ ಸಾಧುವಿನ ಜ್ಞಾಪಕಾರ್ಥವಾಗಿ ಆಚರಿಸುತ್ತಾರೆ. ಈ ಸಾಧುವಿನ ಹೆಸರು ಬಂಡನವಾಜ್ ಅಥವಾ ಗಿಸುಡರಾಜ್ ಎಂದು. ಈತನು ಫಿರೋಜ್‌ಷಾನ ಆಳಿಕೆಯಲ್ಲಿ ೧೪೧೩ ರಲ್ಲಿ ಇಲ್ಲಿಗೆ ಬಂದನು. ಈ ಸಾಧುವು ಗುಲ್ಬರ್ಗದ ಸಮೀಪ ಬಂದನೆಂದು ಕೇಳಿದೊಡನೆಯೇ ಅವನನ್ನು ಎದುರುಗೊಳ್ಳುವುದಕ್ಕೆ ಅರಸನು ಫಿರೋಜಾ ಷಾನಿನಿಂದ ಹೊರಟನು. ಈತನನ್ನು ಅರಸನು ಉತ್ತಮ ರೀತಿಯಲ್ಲಿ ಉಪಚರಿಸುತ್ತಿದ್ದನು. ಅಲ್ಲದೆ ಅರಸನ ತಮ್ಮನಾದ ಅಹ್ಮದ್‌ಷಾವಾಲಿ ಬಾಹ್ಮಿನಿಯು ಈತನಿಗೊಂದು ಅರಮನೆಯನ್ನು ಕಟ್ಟಿಕೊಟ್ಟು ಈತನ ಪ್ರತಿಯೊಂದು ಧರ್ಮೋಪದೇಶವನ್ನೂ

ಕೇಳುತ್ತಿದ್ದನು. ಈ ಸಾಧುವು ಬಂದು ಕೆಲವು ಕಾಲದನಂತರ ಅರಸನು ಪಟ್ಟಕ್ಕೆ ಯೋಗ್ಯವಾದ ತನ್ನ ಮಗನನ್ನು ಆಶೀರ್ವದಿಸಬೇಕೆಂದನು. ಅದಕ್ಕೆ ಸಾಧುವು ಪಟ್ಟವು ಅರಸನ ತಮ್ಮನಿಗೆ ಹೋಗಬೇಕೆಂದು ದೈವಸಂಕಲ್ಪವಿರುವುದರಿಂದ ಇನ್ನೊಬ್ಬನಿಗೆಂದು ನಿಶ್ಚಯಿಸುವುದು ವ್ಯರ್ಥವೆಂದನು. ಅದನ್ನು ಕೇಳಿ ಭಯ ಭ್ರಾಂತನಾದ ಅರಸನು ಆ ಸಾಧುವಿನ ವಾಸ್ತವ್ಯವು ಅರಮನೆಯ ಸಮೀಪವಿದ್ದು ಅಲ್ಲಿಗೆ ಬಂದು ಹೋಗುವ ಶಿಷ್ಯ ಮಂಡಲಿಯಿಂದ ಸಾರ್ವಜನಿಕ ಶಾಂತತಾ ಭಂಗವಾದೀತೆಂಬ ನೆವದಿಂದ ಸಾಧುವು ಪಟ್ಟಣವನ್ನು ಬಿಟ್ಟು ಹೋಗಬೇಕೆಂದು ಆಜ್ಞಾಪಿಸಿದನು. ಸಾಧುವು ಕೂಡಲೇ ಆ ಸ್ಥಳವನ್ನು ಬಿಟ್ಟು ಈಗ ಆತನ ಸಮಾಧಿಯಿರುವ ಸ್ಥಳಕ್ಕೆ ಹೋದನು. ಅರಸನ ತಮ್ಮನು ತನ್ನ ಮಗನೊಂದಿಗೆ ಗುಲ್ಬರ್ಗದಿಂದ ಓಡಿಹೋಗುವ ಸಂಭವವು ಬಂದೊದಗಿದರಿಂದ ಆತನು ಸಾಧುವಿನ ಬಳಿಗೆ ಬಂದು ಆತನ ಆಶೀರ್ವಾದವನ್ನು ಬೇಡಿದನು. ಆಗ ಸಾಧುವು ಅವನ ಮಗನ ತಲೆಯ ರುಮಾಲನ್ನು ಎರಡು ತುಂಡುಮಾಡಿ ಇಬ್ಬರ ತಲೆಗೂಸುತ್ತಿ ಇಬ್ಬರೂ ರಾಜರಾಗುವಿರೆಂದು ಆಶೀರ್ವದಿಸಿದನು. ೧೪೨೨ ರಲ್ಲಿ ಅಹ್ಮದ್‌ಷಾವಾಲಿಯು ಪಟ್ಟಕ್ಕೆ ಬಂದನಂತರ ಆತನು ಈ ಸಾಧುವಿಗೆ ಬಹುಮಾನವನ್ನೂ ಜಹಗೀರನ್ನೂ ಕೊಟ್ಟುದಲ್ಲದೆ ಪಟ್ಟಣದ ಸಮೀಪನೇ ಆತನಿಗೊಂದು ಮಹಾವಿದ್ಯಾಲಯವನ್ನು ಕಟ್ಟಿಸಿಕೊಟ್ಟನು. ಆತನ ಸಮಾಧಿಯ ಮಂದಿರದಲ್ಲಿ ಆತನ ಶಿಷ್ಯರಲ್ಲಿ ಕೆಲವರು ವಾಸಿಸುವರು. ಆತನ ಸಮಾಧಿಯನ್ನು ಮುಸಲ್ಮಾನರು ಪವಿತ್ರವಾಗಿ ಎಣಿಸುತ್ತಾರೆ. ಗೋಡೆಯ ಮೇಲೆ ಕುರಾನನ್ನು ಸುವರ್ಣಾಕ್ಷರದಲ್ಲಿ ಬರೆದಿರುತ್ತಾರೆ.

ಗುಲ್ಬರ್ಗದ ಸೆಂಟ್ರಲ್ ಜೈಲಿನಲ್ಲಿ ಜಲೋ ಜಮಖಾನಗಳನ್ನೂ ತರತರದ ಕಂಬಳಿಗಳನ್ನೂ ತಯಾರಿಸುತ್ತಾರೆ. ಇತ್ತೀಚೆಗೆ ಗುಲ್ಬರ್ಗದಲ್ಲಿ ಒಂದು ಹತ್ತಿಯಗಿರಣಿಯನ್ನು ತೆಗೆದಿದ್ದಾರೆ.

## ಉಡುಪಿ

ದ್ವೈತಮತಸ್ಥಾಪಕರಾದ ಶ್ರೀ ಮಧ್ವಾಚಾರ್ಯರಿಂದ ಪ್ರತಿಷ್ಠಿತವಾದ ಶ್ರೀಕೃಷ್ಣ ದೇವಸ್ಥಾನವು ಉಡುಪಿಯ ಮಧ್ಯಭಾಗದಲ್ಲಿದೆ. ಇದರ ಪಕ್ಕದಲ್ಲೇ ಮಧ್ವ ಸರೋವರವಿದೆ. ಈ ತೀರ್ಥದಲ್ಲಿ ಪ್ರತಿದಿನವೂ ಸಾವಿರಗಟ್ಟಳೆ ಜನರು ಸ್ನಾನಮಾಡುತ್ತಾರೆ. ಕೃಷ್ಣದೇವಸ್ಥಾನದ ಬಳಿಯಲ್ಲೇ ಪುರಾತನ ದೇವಾಲಯಗಳಾದ ಅನಂತೇಶ್ವರ ಮತ್ತು ಚಂದ್ರೇಶ್ವರ ದೇವಸ್ಥಾನಗಳಿವೆ. ಇವುಗಳ ಸುತ್ತಲೂ ಅಷ್ಟ ಮಹಾ ಶ್ರೀಪಾದಂಗಳವರ ಮಠಗಳಿವೆ. ಪ್ರತಿವರ್ಷವೂ ಮಕರ ಸಂಕ್ರಮಣಕ್ಕೆ ಇಲ್ಲ ಜಾತ್ರೆಯು ನಡೆಯುತ್ತದೆ. ಇದಕ್ಕೆ ಹಿಂದೂಸ್ಥಾನದ ಎಲ್ಲಾ ಕಡೆಗಳಿಂದಲೂ ಸಾವಿರಾರು ಯಾತ್ರಿಕರು ಬರುತ್ತಾರೆ. ಚೂರ್ಣೋತ್ಸವದಿವಸ ಮಧ್ವ ಸರೋವರದಲ್ಲ ಒಮ್ಮೆಲೇ ಸುಮಾರು ಆರೇಳು ಸಾವಿರ ಮಂದಿ ಅವಭೃತ ಸ್ನಾನ ಮಾಡುತ್ತಾರೆ. ಈ ಉತ್ಸವ ಸಮಯದಲ್ಲ ದಿನಾಲೂ ಸುಮಾರು ಮೂರು ನಾಲ್ಕು ದಿವಸಗಳವರೆಗೆ ನಾಲ್ಕು ಸಾವಿರದವರೆಗೆ ಬ್ರಾಹ್ಮಣರಿಗೆ ಔತಣವಿರುತ್ತದೆ. ಎರಡು ವರ್ಷಕ್ಕೊಮ್ಮೆ ಮಕರ ಸಂಕ್ರಮಣದಾಟಿ ೪ ನೇ ದಿವಸ ಪರ್ಯಾಯೋತ್ಸವವು ಜರಗುವದು. ಈ ದಿವಸ ಒಬ್ಬ ಸ್ವಾಮಿಯು ಶ್ರೀ ಕೃಷ್ಣರಪೂಜೆ ಮತ್ತು ಕೃಷ್ಣ ದೇವಸ್ಥಾನದ ಆಡಳಿತವನ್ನು ಮತ್ತೊಬ್ಬರಿಗೆ ಒಪ್ಪಿಸಿ ಕೊಡುವರು. ಈ ಉತ್ಸವಕ್ಕೆ ಪರಿಷೆಯು ಬಹಳ ಒರುತ್ತದೆ. ದಿನಕ್ಕೆ ಆರೇಳು ಸಾವಿರ ಜನರಿಗೆ ಸಮಾರಾಧನೆ ನಡೆಯುತ್ತದೆ. ಇವಲ್ಲದೆ ಮಧ್ವನವಮಿ ವಸಂತೋತ್ಸವ ಮತ್ತು ಲಕ್ಷದೀಪವೆಂಬ ಮಹೋತ್ಸವಗಳೂ ಪ್ರತಿವರ್ಷವೂ ವಿಜೃಂಭಣೆಯಿಂದ ನಡೆಯುವವು. ವರ್ಷದ ಪ್ರತಿದಿನವೂ ಸುಮಾರು ಒಂದು ಸಾವಿರ ಜನರಿಗೆ ಸಂತರ್ಪಣೆಯು ನಡೆಯುವುದು. ಉಡುಪಿಯು ಮಾಧ್ವರ ಮುಖ್ಯಸ್ಥಾನವಾಗಿರುವುದಲ್ಲದೆ ಪೂರ್ವದಲ್ಲ ಸಂಸ್ಕೃತ ವಿದ್ಯೆಯ ಪೀಠವಾಗಿತ್ತು. ಈಗಲೂ ಅನೇಕ ಸಂಸ್ಕೃತ ಪಂಡಿತರು ಇಲ್ಲಿ ಇದ್ದಾರೆ. ಉಡುಪಿಯಿಂದ ಸುಮಾರು ೮ ಮೈಲು ದೂರದಲ್ಲಿ ಶ್ರೀಮಧ್ವಾಚಾರ್ಯರ ಹುಟ್ಟೂರಾದ ಪಾಜಕ ಕ್ಷೇತ್ರವಿದೆ. ಅದರ

ಸಮೀಪವೇ ಪ್ರಸಿದ್ಧವಾದ ದುರ್ಗಾ ಜೆಟ್ಟವಿದೆ. ಉಡುಪಿಗೆ ಬಂದ ಯಾತ್ರಿಕರಲ್ಲ ಹೆಚ್ಚಿನವರು ಇಲ್ಲಿಗೆ ಹೋಗುವರು. ಉಡುಪಿಗೆ ಮೂರು ಮೈಲು ಪಶ್ಚಿಮಕ್ಕೆ ಮಲ್ಪೆ ಬಂದರವಿದೆ. ಇಲ್ಲಿ ಸಮುದ್ರದಲ್ಲಿ ಬಾದರಗಡವೆಂಬ ನಡುಗಡ್ಡೆಯಿಂದ ಉತ್ಕೃಷ್ಟವಾದ ಒಂದು ರೇವು ಆಗಿದೆ. ದೊಡ್ಡ ದೊಡ್ಡ ಹಡಗಗಳು ಕೂಡ ಇಲ್ಲಿ ಸುರಕ್ಷಿತವಾಗಿ ನಿಲ್ಲಬಹುದು.

## ಮೂಡಬಿದರೆ

ಇದು ಜೈನರ ಮುಖ್ಯಸ್ಥಾನವಾಗಿದೆ ಇದಕ್ಕೆ ಜೈನ ಕಾಶಿ ಯೆನ್ನುತ್ತಾರೆ. ಇಲ್ಲಿ ಜೈನ ಸನ್ಯಾಸಿಯ ಮಠವಿದೆ. ಅಲ್ಲದೆ ಸುಮಾರು ೧೮ ಬಸ್ತಿಗಳಿವೆ. ಇವುಗಳಲ್ಲ ಸಾವಿರ ಕಂಬದ ಬಸ್ತಿಯೂ ಹೊಸ ಬಸ್ತಿಯೂ ನೋಡತಕ್ಕವಾಗಿವೆ. ಇವು ಪೂರ್ಣಶಿಲೆಯಿಂದಲೇ ರಚಿಸಲ್ಪಟ್ಟು ಹಿಂದೂ ಶಿಲ್ಪಶಾಸ್ತ್ರದ ಮಹಿಮೆಯನ್ನು ಪ್ರಕಾಶಗೊಳಿಸುತ್ತವೆ. ಹೊಸಬಸ್ತಿಯಲ್ಲ ಲಕ್ಷಾಂತರ ರೂಪಾಯಿ ಬೆಲೆ ಬಾಳುವ ನವರತ್ನದ ಮಂಟಪಗಳೂ, ಅತ್ಯುತ್ತಮ ರತ್ನಗಳೂ ಇವೆ. ಮೂಡಬಿದರೆಯು ಪೂರ್ವದಲ್ಲಿ ಶ್ರೇಷ್ಠಜೈನಕವಿಗಳ ತವರು ಮನೆಯಾಗಿತ್ತು. ಉತ್ತಮಕನ್ನಡ ಪದ್ಯ ಗ್ರಂಥಗಳ ಕೈಬರಹದ ಪುಸ್ತಕಗಳು ಈಗಲೂ ಮೂಡಬಿದರೆಯಲ್ಲಿವೆ. ಮೊನ್ನೆತಾನೇ ಪ್ರಕಟವಾಗಿರುವ 'ಭರತೇಶವೈಭವ' ವೆಂಬ ಸಾಂಗತ್ಯ ಪದ್ಯಗ್ರಂಥದಿಂದಲೇ ಮೂಡ ಬಿದರೆಯು ಕನ್ನಡ ಸಾಹಿತ್ಯದೃಷ್ಟಿಯಿಂದ ಎಷ್ಟು ಮಹತ್ವವಿದೆಯೆಂಬುದು ವ್ಯಕ್ತವಾಗುತ್ತದೆ

# ಕರ್ಣಾಟಕದಲ್ಲಿ ಯಾರು ಯಾರು?

## ಗಂಗಾಧರರಾವ್ ದೇಶಪಾಂಡೆ

ಇವರ ಸ್ಥಳಬೆಳಗಾಂವಿ. ಬೆಳಗಾಂವಿಯ ಡಿಸ್ಟ್ರಿಕ್ಟಿನಲ್ಲಿರುವ ಇವರು ಹುದಲಿ ಎಂಬ ಗ್ರಾಮದಲ್ಲಿ ಒಂದು ದೊಡ್ಡ ಮನೆತನದಲ್ಲಿ ಹುಟ್ಟಿದರು. ಸುಮಾರು ೨೫-೩೦ ವರ್ಷಗಳಿಂದ ಅನೇಕ ರಾಷ್ಟ್ರೀಯ ಸಂಘಗಳಲ್ಲಿ ಪ್ರಾಮುಖ್ಯರಾಗಿರುವರು. ಇವರು ಲೋಕಮಾನ್ಯ ತಿಲಕರವರ ಮುಖ್ಯ ಸ್ನೇಹಿತರಾಗಿದ್ದರು. ಇವರು ದೇಶದ ಪ್ರಾಮುಖ್ಯರಾದ ಲಾಯರಾಗಿದ್ದು, ಕೆಲಸವನ್ನು ೧೯೨೦ ನೆಯ ವರ್ಷದಲ್ಲಿ ಬಿಟ್ಟರು. ಇವರು ಕನ್ನಡದಲ್ಲಿಯೂ ಮತ್ತು ಮರಾಠಿಯಲ್ಲಿಯೂ ಮಹತ್ತಾದ ವಾಚಾಳಿಗಳು. ೧೯೨೧ ನೆಯ ವರ್ಷದಲ್ಲಿ ನವಿಲ್‌ಗುಂದದಲ್ಲಿ ನಡೆದ ಡಿಸ್ಟ್ರಿಕ್ಟ ಕಾನ್ಫರೆನ್ಸಿನಲ್ಲಿ ಇವರು ಅಧ್ಯಕ್ಷಪದವಿಯನ್ನು ವಹಿಸಿದರು. ಅವರ ಕಠಿಣವಾದ ಭಾಷಣಕ್ಕೋಸ್ಕರ ಇಂಡಿಯನ್ ಪೀನಲ್ ಕೋಡಿನ ೧೯೪ ನೆಯ ಸೆಕ್ಷನ್ ಪ್ರಕಾರ ಇವರಿಗೆ ಆರು ತಿಂಗಳು ಸಾದಸಜಾವಾಯಿತು. ೧೯೨೦-೨೪ ನಡೆದ ಪ್ರಾಂತಿಕ ಸಮ್ಮೇಳನಗಳಲ್ಲಿ ಅಧ್ಯಕ್ಷ ಪದವಿಯನ್ನು ವಹಿಸಿದ್ದರು. ಇವರು ಆಲ್ ಇಂಡಿಯ ಕಾಂಗ್ರೆಸ್ ಕಮಿಟಿ ಕಾರ್ಯದರ್ಶಿಯಾಗಿದ್ದರು ಮತ್ತು ಇವರು ೩೯ನೆಯ ರಾಷ್ಟ್ರೀಯ ಸಭೆಯ ಸ್ವಾಗತಮಂಡಲದ ಅಧ್ಯಕ್ಷರಾಗಿದ್ದಾರೆ.

**ಶ್ರೀನಿವಾಸರಾವ ಕೌಜಲಗಿ**:—ಇವರು ಬಿಜಾಪುರ ಜಿಲ್ಲೆಯ ಕಲಾದ್ಗಿ ಎಂಬ ಗ್ರಾಮದ ಶ್ರೀಮಂತರ ಮನೆಯಲ್ಲಿ ಜನಿಸಿದರು. ಇವರು ಗಂಗಾಧರರಾಯರ ಸಹಪಾಠಿಗಳು ಮತ್ತು ತಿಲಕರ ಸ್ನೇಹಿತರು. ತಮ್ಮ ವಾಕ್ಪಟುತ್ವದಿಂದ ಶೀಘ್ರದಲ್ಲಿ ಬಿಜಾಪುರದ ವಕೀಲರ ಮುಂದಾಳಾದರು. ೧೯೨೦ ರಲ್ಲಿ ಅಸಹಕಾರ ಚಳವಳ ಹೂಡಿದಾಗ ವಕಾಲತ್ತನ್ನು ಬಿಟ್ಟು, ಪೂರ್ಣಕಾಲವನ್ನು ರಾಜಕೀಯ ಕಾರ್ಯದಲ್ಲಿ ವಿನಿಯೋಗಿಸತೊಡಗಿದರು. ಒಂದು ವರ್ಷಕಠಿಣ ಶಿಕ್ಷೆಯನ್ನು

ಅನುಭವಿಸಿದರು. ನಾಲ್ಕು ವರ್ಷಕಾಲ ಕರ್ಣಾಟಕ ಪ್ರಾಂತಿಕ ರಾಷ್ಟ್ರೀಯ ಸಂಸ್ಥೆಗೆ ಉಪಾಧ್ಯಕ್ಷರಾಗಿದ್ದರು. ತಮ್ಮ ಜಿಲ್ಲೆಯಲ್ಲಿ ಎಲ್ಲರಿಗೂ ಬೇಕಾದವರು ಮತ್ತು ಗೌರವಮಾನ್ಯರು. ಇವರೇ ಬೆಳಗಾಂವಿ ಜಿಲ್ಲೆಯ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರು.

**ವಿನಾಯಕ ಬಾಬಾಜಿ ಜೋಶಿಯವರು** ಬಿ.ಎ. ಧಾರವಾಡ ಇವರು ವಿದ್ಯಾಇಲಾಖೆಯ ಇನಸ್ಪೆಕ್ಟರಾಗಿದ್ದರು. ಇವರಿಗೆ ಸರಕಾರದವರು ರಾವಬಹುದೂರು" ಎಂಬ ಬಿರುದನ್ನು ಅವರ ರಾಜಭಕ್ತಿಗಾಗಿ ಕೊಟ್ಟರು. ಆದರೆ ಇವರು ಅಸಹಕಾರ ಚಳವಳಿಯಲ್ಲಿ ಭಾಗಿಗಳಾಗಿದ್ದುದರಿಂದ ತಮ್ಮ ಬಿರುದನ್ನು ತೆಗದುಹಾಕಬೇಕಾಯಿತು. ಇವರು ರಾಜಕೀಯ ವಿಷಯಗಳಲ್ಲಿ ಬಹಳ ಉತ್ಸಾಹವನ್ನು ತೋರಿದ್ದರಿಂದ ಸರಕಾರದವರು ಅವರ ಪೆನ್ಷನ್ನನ್ನು ತೆಗೆದುಹಾಕಿಬಿಟ್ಟರು ಧಾರವಾಡದ ರಾಷ್ಟ್ರೀಯ ಶಿಕ್ಷಣ ಸಮಿತಿಯ ಅಧ್ಯಕ್ಷರಾಗಿದ್ದಾರೆ. ಕರ್ಣಾಟಕ ಪ್ರಾಂತ್ಯದ ಕಾಂಗ್ರೆಸ ಕಮಿಟಿಯ ಉಪಾಧ್ಯಕ್ಷ ಪದವಿಯನ್ನು ವಹಿಸಿದ್ದರು. ಧಾರವಾಡದ ಷೂಟಿಂಗ್‌ಕೇಸ್ ವಿಚಾರಣೆಗೆ ಏರ್ಪಾಟಾದ ಸಭೆಯಲ್ಲಿ ಮುಖ್ಯ ಪದವಿಯನ್ನು ವಹಿಸಿದ್ದರು. ಮೂವತ್ತನೆಯ ರಾಷ್ಟ್ರೀಯ ಮಹಾಸಭೆಯ ಸ್ವಾಗತಮಂಡಲದ ಉಪಾಧ್ಯಕ್ಷಪದವಿಯನ್ನು ವಹಿಸಿರುತ್ತಾರೆ.

**ಕಾರ್ನಾಡು ಸದಾಶಿವರಾವ್** ಬಿ. ಎ. ಬಿ. ಎಲ್ ಮಂಗಳೂರು:- ಇವರು ತಮ್ಮ ಲಾ ವ್ಯಾಸಂಗವನ್ನು ಪೂರೈಸಿದ್ದರೂ, ವಕಾಲತ್ತು ಮಾಡಲು ಸ್ವಲ್ಪವೂ ಇಷ್ಟಪಡಲಿಲ್ಲ. ಜನಗಳಿಗೆ ಸಹಾಯ ಮಾಡುವುದರಲ್ಲಿ ಬಹಳ ಆತುರವುಳ್ಳವರಾಗಿ ದಕ್ಷಿಣ ಕನ್ನಡ ಜಿಲ್ಲಾ ಸಭೆಯನ್ನು ಸ್ಥಾಪಿಸಿ ಅದಕ್ಕೆ ಸೆಕ್ರೆಟೆರಿಯವರಾಗಿ ಕೆಲಸ ಮಾಡಿದರು. ೧೯೧೮-೧೯ ನೇ ಸಾಲಿನಲ್ಲಿ ಅಕ್ಕಿಯ ಧಾರಣೆಯು ಹೆಚ್ಚಿದಾಗ ಅಕ್ಕಿಯನ್ನು ಒದಗಿಸಲು ಡಿಪೋಗಳನ್ನಿಟ್ಟರು. ೧೯೧೯ ನೇ ಇಸವಿಯಲ್ಲಿ ಸತ್ಯಾಗ್ರಹವನ್ನು ಅವಲಂಬಿಸಿದರು. ೧೯೨೧ ನೇಯ ಇಸವಿಯಿಂದ ೧೯೨೪ನೇ ಇಸವಿಯವರಿಗೆ ಕರ್ಣಾಟಕದಪ್ರಾಂ

ಾಂತ್ಯದ ಕಾಂಗ್ರೆಸ್ ಕಮಿಟಿಯ ಉಪಾಧ್ಯಕ್ಷ ಪದವಿಯನ್ನು ವಹಿಸಿದ್ದರು. ಡಿಸ್ಟ್ರಿಕ್ಟ್ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರಾಗಿದ್ದರು. ದಕ್ಷಿಣಕನ್ನಡದಲ್ಲಿ ನೆರೆಹಾವಳಿ ಸಂಭವಿಸಿದಾಗ, ಇವರು ತಮ್ಮ ಜೊತೆಗಾರರೊಡನೆ ಸೇರಿ ಅನೇಕ ಅಕ್ಕಿಯ ಮಂಡಿಗಳನ್ನು ಡಿಸ್ಟ್ರಿಕ್ಟಿನಲ್ಲೆಲ್ಲಾ ಸ್ಥಾಪಿಸಿದರು. ೩೯ ನೆಯ ರಾಷ್ಟ್ರೀಯ ಸಭೆಯ ಸ್ವಾಗತ ಮಂಡಲದ ಉಪಾಧ್ಯಕ್ಷರಾಗಿದ್ದಾರೆ.

**ಡಿ. ಆರ್. ಮಂಜಲಿಯವರು** ಬಿ. ಎ. ಬೆಳಗಾಂವಿ. ಅಸಹಕಾರ ಚಳವಳಿಯನ್ನು ಅವಲಂಬಿಸಿದ್ದರಿಂದ ತಮ್ಮ ವಕಾಲತ್ತನ್ನು ಬಿಡಬೇಕಾಗಿಬಂತು. ಬೆಳಗಾಂವಿಯ ಡಿಸ್ಟ್ರಿಕ್ಟ ಕಾಂಗ್ರೆಸ್ ಕಮಿಟಿಯ ಸೆಕ್ರೆಟರಿಗಳಾಗಿದ್ದುಕೊಂಡು ದಿವಂಗತರಾದ ಯಲಗಿ ಗೋವಿಂದರಾವ್ ಮತ್ತು ಕುರುಗುಪ್ಪಿ ಕೃಷ್ಣರಾಯರುಗಳ ಸಹಾಯದಿಂದ ಕಮಿಟಿಯನ್ನು ಬಹುಮಟ್ಟಿಗೆ ಅಭಿವೃದ್ಧಿಗೆ ತಂದರು. ೧೯೨೩-೨೪ ಸಾಲಿನಲ್ಲಿ ಕರ್ಣಾಟಕ ಪ್ರಾಂತ್ಯದ ಕಾಂಗ್ರೆಸ್ ಕಮಿಟಿಯ ಕಾರ್ಯದರ್ಶಿಗಳಾಗಿದ್ದರು. ಒಂದು ಸಲ ೧ ಕಠಿಣಶಿಕ್ಷೆಯನ್ನೂ ಎರಡನೆಯ ಸಲ ೬ ತಿಂಗಳು ಕಠಿಣಸಜವನ್ನೂ ಅನುಭವಿಸಿದರು.

**ಎಂ. ಆರ್. ಕೆಂಭಾವಿಯವರು** ಬಿ.ಎ. ಬಿಜಾಪುರ ಇವರು ಡಿಸ್ಟ್ರಿಕ್ಟಿನಲ್ಲಿ ಅತಿ ಸಮರ್ಥರಾದ ತರುಣಲಾಯರು. ಅಸಹಕಾರಚಳವಳಿಯ ಸಲುವಾಗಿ ತಮ್ಮ ಉದ್ಯೋಗವನ್ನು ತ್ಯಜಿಸಬೇಕಾಯಿತು. ಕರ್ಣಾಟಕ ಪ್ರಾಂತ್ಯದ ಕಾಂಗ್ರೆಸ್ ಕಮಿಟಿಯ ಕಾರ್ಯದರ್ಶಿಗಳೂ, ೩೯ ನೆಯ ರಾಷ್ಟ್ರೀಯ ಮಹಾಸಭೆಯ ಕಾರ್ಯದರ್ಶಿಗಳೂ ಬಿಜಾಪುರ ಡಿಸ್ಟ್ರಿಕ್ಟ ಕಾಂಗ್ರೆಸ್ ಕಮಿಟಿಯ ಜಂಟೀ ಕಾರ್ಯದರ್ಶಿಗಳೂ ಆಗಿರುವರು.

**ರಂಗನಾಥ ರಾಮಚಂದ್ರರಾವ್ ದಿವಾಕರ್** ಎಂ.ಎ. ಎಲ್. ಎಲ್.ಬಿ. :—ಧಾರವಾಡದಲ್ಲಿ ಹೊರಡುತ್ತಿರುವ 'ನವಶಕ್ತಿ' ಮತ್ತು 'ಕರ್ಮವೀರ'ಗಳ ಸಂಪಾದಕರು. ಮಹಾತ್ಮ ಗಾಂಧಿಯವರಲ್ಲಿ ತೀವ್ರ ಭಕ್ತಿಯುಳ್ಳ ಶಿಷ್ಯರು ಇವರು ಧಾರವಾಡದಲ್ಲಿ ನಡೆದ ಅಸಹಕಾರ

ದಲ್ಲಿ ಸಿಕ್ಕಿಕೊಂಡಿದ್ದರು, ಆದರೆ ಸರಿಯಾದ ರುಜವಾತು ಸಿಕ್ಕದಿದ್ದುದರಿಂದ ಇವರನ್ನು ಬಿಟ್ಟುಬಿಟ್ಟರು. ಇವರಿಗೆ ಒಂದು ವರ್ಷ ಕಠಿಣ ಸಜವನ್ನು ಕೊಟ್ಟರು. ಆ ಮೇಲೆ ಕೆಲವು ದೇಶೀಯ ಪದಗಳನ್ನು ಪ್ರಕಟಿಸಿದುದಕ್ಕಾಗಿ ಎರಡು ವರ್ಷ ಕಠಿಣಸಜವನ್ನು ವಿಧಿಸಿದರು. ಇವರು ೧೯೨೩ ನೇ ಇಸವಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಡೆದ ಸಭೆಗೆ ಅಧ್ಯಕ್ಷರಾಗಿದ್ದರು. ಇವರು ಕೆಲವು ಕನ್ನಡ ಪುಸ್ತಕಗಳನ್ನು ಬರೆದಿದ್ದಾರೆ. ಇವರು ಕರ್ಣಾಟಕರಿಗೆ ಉತ್ತೇಜನ ಕೊಡುವ ಮಾದರಿಯ ತರುಣ ಸಾಹಸಿಗಳು.

**ಡಾ॥ ನಾರಾಯಣರಾವ್ ಎಸ್. ಹರ್ಡೀಕರ್** ಎಂ. ಎಸ್ ಸಿ., ಮಿಚಿಗನ್ ಸಕಲವಿದ್ಯಾನಿಲಯ ಅಮೆರಿಕಾ, ಹುಬ್ಬಳ್ಳಿ:-ಇವರು ಕಲ್ಕತ್ತೆಯ ನ್ಯಾಷನಲ್ ಮೆಡಿಕಲ್ ಕಾಲೇಜಿನಿಂದ ಉತ್ತೀರ್ಣರಾದವರು. ತರುವಾಯ ಶಸ್ತ್ರಚಿಕಿತ್ಸಾ ಶಾಸ್ತ್ರದಭ್ಯಾಸಕ್ಕಾಗಿ ಅಮೇರಿಕಾಕ್ಕೆ ತೆರಳಿದರು. ಅಲ್ಲಿ ಹಲವರ್ಷಗಳಕಾಲ ವಿದ್ಯಾಭ್ಯಾಸಮಾಡಿ ಅಲ್ಲಿಯ ಮಿಚಿಗನ್ ಪ್ರೌಢವಿದ್ಯಾಶಾಲೆಯಲ್ಲಿ ತಮ್ಮ ಬಿ. ಎ. ಮತ್ತು ಎಂ. ಎಸ್. ಸಿ. ಪದವಿಗಳನ್ನು ಪಡೆದರು. ಅಲ್ಲಿ ಹಿಂದೂಸ್ಥಾನ ಸಂಘಕ್ಕೆ ಕಾರ್ಯದರ್ಶಿಗಳಾಗಿದ್ದರು. ಇವರು ದೇಶಭಕ್ತಲಾಲಾಲಜಪತರಾಯರವರ ಸಂಗಡದಲ್ಲಿ ಕೆಲಸವನ್ನು ಮಾಡಿದವರು. ಇವರು ಹಿಂದೂಸ್ಥಾನಕ್ಕೆ ಹಿಂತಿರುಗಿದ ಮೇಲೆ ರಾಷ್ಟ್ರೀಯ ಅಸಹಕಾರ ಚಳವಳಿಯನ್ನು ಸೇರಿ, ಸ್ವಯಂ ಸೇವಕರ ಸಂಘವನ್ನು ಸ್ಥಾಪಿಸಿದರು. ಇವರು ಕರ್ಣಾಟಕ ಪ್ರಾಂತ್ಯದ ಅಸಹಕಾರ ಸಂಘದ ಡೈರಕ್ಟರಾಗಿದ್ದರು. ಹಿಂದೂಸ್ಥಾನದ ವಾರ್ತಾಪ್ರಸಾರಕ ಸಂಘವನ್ನು ಸ್ಥಾಪಿಸಿದರು. ನಾಗಪುರ ಸತ್ಯಾಗ್ರಹದ ಚಳವಳಿಯಲ್ಲಿ ಒಂದು ವರ್ಷ ಕಠಿಣಸಜಕ್ಕೆ ಪಾತ್ರರಾಗಿದ್ದರು.

**ನಾರಾಯಣರಾವ್ ಹೆಚ್. ದಂಬಾಲ್** ಬಿ.ಎ., ಎಲ್. ಎಲ್.ಬಿ.ಗದಗ್:-ಇವರು ಅಸಹಕಾರಚಳವಳಿಯಲ್ಲಿ ತಮ್ಮ ಉದ್ಯೋಗವನ್ನು ಬಿಟ್ಟುಬಿಟ್ಟರು. ಕರ್ಣಾಟಕದ ಪ್ರಾಂತ್ಯದ ಕಾಂಗ್ರೆಸ್ ಕಮಿಟಿಯ ಕಾರ್ಯದರ್ಶಿಯಾಗಿಯೂ ಮತ್ತು ಧಾರವಾಡದ ಹೋಟಿಂ

ಕೇಸ್ ವಿಚಾರಣೆಯ ಮೆಂಬರಾಗಿಯೂ ಮತ್ತು ಇಂಡಿಯಾದೇಶದ ಖಾದಿ ಬೋರ್ಡಿನ ಪರವಾಗಿ ಕರ್ಣಾಟಕದ ಖಾದಿ ಬೋರ್ಡಿನ ಮೇಲ್ವಿಚಾರಕರೂ ಆಗಿದಾರೆ.

**ಹನುಮಂತರಾವ್ ಶ್ರೀಪತ್ ಕೌಜಲಗಿ** ಬಿ.ಎ., ಎಲ್ ಎಲ್.ಬಿ ಬಿಜಾಪುರ:-ಬುದ್ಧಿವಂತರಾದ ತರುಣ ಪ್ಲೀಡರು. ಅಸಹಕಾರ ಚಳವಳಿಯೊಡನೆ ವಕಾಲತ್ತನ್ನು ಬಿಟ್ಟು ೯ ತಿಂಗಳು ಕಠಿಣಶಿಕ್ಷೆಯನ್ನನುಭವಿಸಿದರು. ಕರ್ಣಾಟಕ ಪ್ರಾಂತ್ಯದ ಖಾದಿಬೋರ್ಡಿನ ಕಾರ್ಯದರ್ಶಿಗಳು. ಎ. ಐ. ಸಿ. ಸಿ. ಯ ಸಭಿಕರು ಮತ್ತು ೩೯ನೆಯ ರಾಷ್ಟ್ರೀಯ ಮಹಾಸಭೆಯ ವಸ್ತುಪ್ರದರ್ಶನ ಶಾಖೆಯ ಕಾರ್ಯದರ್ಶಿಗಳು.

**ಹ. ಮುದುವೇಡಕರ ಕೃಷ್ಣರಾವ** ಸಂಪಾದಕ, ಕರ್ಣಾಟಕವೃತ್ತ ಮತ್ತು ಧನಂಜಯ ಧಾರವಾಡ:—೩೦ ವರ್ಷಗಳಿಂದ ಪತ್ರಿಕಾ ಸಂಪಾದಕರು. ಕನ್ನಡದಲ್ಲಿ ವಾಚಾಳಿಗಳು ಮತ್ತು ಅದ್ಭುತವಾಗಿ ಬರೆಯ ಬಲ್ಲವರು. ಕರ್ಣಾಟಕ ಸಭೆಯ ಮುಖ್ಯಸ್ಥಾಪಕರ ಏಕೀಕರಣಕ್ಕಾಗಿ ಕಾರ್ಯಮಾಡುತ್ತಿರುವರಲ್ಲಿ ಹಳಬರು. ೩೯ ನೆಯ ರಾಷ್ಟ್ರೀಯ ಮಹಾಸಭೆಯ 'ಸಂಗೀತಶಾಖೆಯ' ಕಾರ್ಯದರ್ಶಿಗಳು

**ವೆಂಕಟರಾವ್ ಆಲೂರ** ಬಿ.ಎ.,ಎಲ್.ಎಲ್.ಬಿ. ಸಂಪಾದಕ, ಜಯಕರ್ಣಾಟಕ, ಧಾರವಾಡ:—ಅಸಹಕಾರ ತತ್ವವನ್ನನುಸರಿಸಿ, ವಕಾಲತ್ತನ್ನು ಬಿಟ್ಟರು ಸದ್ದಿಲ್ಲದೆ ಕೆಲಸಮಾಡುವರು. ಜರುಸಾಗಿ ಬರೆಯಬಲ್ಲವರು. ಅನೇಕ ಕನ್ನಡ ಗ್ರಂಥಗಳನ್ನು ಬರೆದಿರುವರು.

**ಎಂ. ವೆಂಕಟಕೃಷ್ಣಯ್ಯ**, ಮೈಸೂರಿನ 'ವೃದ್ಧಪಿತಾಮಹರು'. ಮೈಸೂರಿನ ಮುಖ್ಯಪತ್ರಿಕಾ ಕರ್ತರು. ಮರಿಮಲ್ಲಪ್ಪನವರ ಹೈಸ್ಕೂಲಿನ ಮುಖ್ಯೋಪಾಧ್ಯಾಯರಾಗಿ ಅನೇಕ ವರ್ಷಗಳು ಕೆಲಸ ಮಾಡಿದರು. 'ಅನಾಥಾಲಯ' ಮುಂತಾದ ಅನೇಕ ಉಪಯುಕ್ತ ಸಂಸ್ಥೆಗಳ, ಪ್ರಜಾಪ್ರತಿನಿಧಿ ಸಭೆಯ, ಮತ್ತು ಲೆಜಿಸ್ಲೇಟಿವ್‌ಕೌನ್ಸಿಲ್ ಮುಂತಾದ ರಾಜಕೀಯ ಸಂಸ್ಥೆಗಳಲ್ಲಿ ಮುಖ್ಯರು. ಸಂಪದಭ್ಯುದಯ ಮತ್ತು ಸಾಧ್ವಿಗಳ ಸಂಪಾದಕರು. ಅತಿಶಯವಾದ ಪ್ರಜಾಗೌರವಕ್ಕೆ ಪಾತ್ರರು.

**ಹರ್ಡೇಕರ್ ಮಂಜಪ್ಪನವರು** ಹರಿಹರ:-'ಸತ್ಯಾಗ್ರಹಾಶ್ರಮದ' ಸ್ಥಾಪಕರು ಮತ್ತು ಅಧ್ಯಕ್ಷರು. ಕನ್ನಡನಾಡಿನಲ್ಲಿ ಹೆಚ್ಚಾಗಿರುವ ಲಿಂಗವಂತ ತರುಣರಲ್ಲಿ ತೀಕ್ಷ್ಣಬುದ್ಧಿಯುಳ್ಳ ಬ್ರಹ್ಮಚಾರಿಗಳು. ಕನ್ನಡಸಾಹಿತ್ಯಜ್ಞಾನವನ್ನು ಸ್ವತಃ ಸಂಪಾದಿಸಿ ಕನ್ನಡದಲ್ಲಿ ಉದ್ಗ್ರಂಥಗಳನ್ನು ಬರೆಯುತ್ತಿರುವರು. ಪ್ರಸಿದ್ಧವಾದ ಶಿಕ್ಷಣಜ್ಞರು.

**ದಿವಾನ್‌ಸಾಹೇಬ್‌ಜಾರ್ನೇಕರ** ಬಿಜಾಪುರ:-ಅಸಹಕಾರ' ಚಳವಳಿಯಾರಂಭದಲ್ಲಿ ವಕಾಲತ್ತನ್ನು ಬಿಟ್ಟರು. ತಮ್ಮ ಜಿಲ್ಲೆಯ ಮಹಮದೀಯರಲ್ಲಿ ಗಣ್ಯರು. ಮತ್ತು ಬಿಜಾಪುರದ ಜಿಲ್ಲೆಯ ಕಾಂಗ್ರೆಸ್ ಕಮಿಟಿಯ ಉಪಾಧ್ಯಕ್ಷರು

**ಪದ್ಮನೂರರಾಮಚಂದ್ರರಾವ** ಮಂಗಳೂರು, ಸಮಾಜ ಸಂಸ್ಕರಣ ಕಾರ್ಯದಲ್ಲಿ ನಿರತರು. ತಮ್ಮ ಆಸ್ತಿಯನ್ನೆಲ್ಲಾ 'ಭಾರತಸೇವಾಸಮಿತಿಗೆ" ಕೊಟ್ಟಿರುವರು. ಪಂಚಮರ ಉದ್ಧಾರಕ್ಕಾಗಿ ದಕ್ಷಿಣ ಕನ್ನಡದಲ್ಲಿ ಕೆಲಸಮಾಡುವರಲ್ಲಿ ಅಗ್ರಗಣ್ಯರು. ಈಗ ತಿಲಕ ವಿದ್ಯಾಲಯದ ಅಧ್ಯಕ್ಷರಾಗಿದ್ದಾರೆ.

**ರಾವಸಾಹೇಬ ಯು. ರಾಮರಾವ** ಎಂ., ಎಲ್. ಸಿ.ಎಫ್ ಎಂ. ಯು:-ಮದ್ರಾಸ್ ಮೆಡಿಕಲ್ ಕಾಲೇಜಿನಿಂದ ೧೮೯೯ ರಲ್ಲಿ ತೇರ್ಗಡೆಯಾಗಿ ಸ್ವಂತವಾಗಿ ದವಾಖಾನೆಯನ್ನು ತೆಗೆದು ಪ್ರಸಿದ್ಧ ವೈದ್ಯರಾದರು. ಆರೋಗ್ಯ ಚಿಕಿತ್ಸೆಗಳನ್ನು ಕುರಿತು ಕನ್ನಡ, ಇಂಗ್ಲೀಷು ಭಾಷೆಗಳಲ್ಲಿ ಗ್ರಂಥಗಳನ್ನೂ ಪತ್ರಿಕೆಗಳನ್ನೂ ಹೊರಡಿಸಿರುವರು. 'ಹೆಲ್ತ್' ಮತ್ತು ಆರೋಗ್ಯಚಂದ್ರಿಕೆ ಎಂಬ ಪತ್ರಿಕೆಗಳನ್ನು ಇಂಗ್ಲೀಷು ಮತ್ತು ಕನ್ನಡ ಭಾಷೆಗಳಲ್ಲಿ ಈಗ ಪ್ರಕಟಿಸುತ್ತಿರುವರು. 'ಬಡವರವೈದ್ಯ'ನೆಂಬ ಬಿರುದನ್ನು ಮದ್ರಾಸಿನ ಬಡಜನರು ಇವರಿಗಿತ್ತಿರುವರು.

**ಸರ್ ಎಂ. ವಿಶ್ವೇಶ್ವರಯ್ಯ,** ಬಿ.ಎ.,ಎಲ್.ಸಿ.ಇ., ಕೆ.ಸಿ.ಐ.ಇ. ಬೆಂಗಳೂರು :—ಭರತಖಂಡದ ಇಂಜನೀಯರುಗಳಲ್ಲಿ ಮುಖ್ಯ

ರಾದವರರೊಬ್ಬರು. ಕೋಲಾರ ಜಿಲ್ಲೆ ಚಿಕ್ಕಬಳ್ಳಾಪುರದಲ್ಲಿ ೧೮೬೧ ರಲ್ಲಿ ಜನಿಸಿ ಬೆಂಗಳೂರು ಬೊಂಬಾಯಿಗಳಲ್ಲಿ ವಿದ್ಯಾಭ್ಯಾಸಮಾಡಿ, ಬೊಂಬಾಯಾಧಿಪತ್ಯದಲ್ಲಿ ಇಂಜನೀಯರಾಗಿದ್ದು, ಅತ್ಯಂತವಿಖ್ಯಾತರಾಗಿ ಮೈಸೂರು ದೇಶದ ದಿವಾನರಾಗಿದ್ದರು. ಇಂಡಿಯಾದೇಶದ ವಿಜ್ಞಾನ ಮಹಾಸಭೆಯ ಅಧಿವೇಶನದಲ್ಲಿ ಒಂದುಸಲ ಅಧ್ಯಕ್ಷರಾಗಿದ್ದರು. 'ರಿಕನ್‌ಸ್ಟ್ರಕ್ಷನ್ ಇನ್‌ಇಂಡಿಯ' ಎಂಬ ಗ್ರಂಥವನ್ನು ಬರೆದಿರುವರು. ಭದ್ರಾವತಿಯಲ್ಲಿ ಕಬ್ಬಿಣದ ಕಾರ್ಖಾನೆಯ ಅಧ್ಯಕ್ಷರಾಗಿ ಕೆಲಸಮಾಡುತ್ತಿರುವರು.

**ಎಸ್. ಎಸ್. ಸೆಟ್ಲೂರ್** ಬಿ. ಎ., ಎಲ್. ಎಲ್. ಬಿ :—ಅನುಭವಸ್ಥರಾದ ಲೇಖಕರು. 'ಮಿತಾಕ್ಷರ' 'ಹಿಂದೂಲಾ' ಮುಂತಾದ ಧರ್ಮಶಾಸ್ತ್ರಗಳನ್ನು ಸಂಗ್ರಹಿಸಿರುವರು. ಕೆಲಕಾಲ ಮೈಸೂರು ಚೀಫ್ ಕೋರ್ಟಿನಲ್ಲಿ ಜಡ್ಜಿಗಳಾಗಿದ್ದರು. ಕಾಶಿ ಮಹಾವಿದ್ಯಾನಿಲಯದಲ್ಲಿ 'ಹಿಂದೂಲಾ' ಪ್ರೊಫೆಸರಾಗಿದ್ದರು. 'ಧಾರವಾಡದ ಷೂಟಿಂಗ್ ಕೇಸಿನ' ವಿಚಾರಕ ಮಂಡಲಿಯ ಸದಸ್ಯರಾಗಿದ್ದರು. ಬೊಂಬಾಯಿ ಮತ್ತು ಮೈಸೂರು ವಿಶ್ವವಿದ್ಯಾನಿಲಯಗಳ ಸದಸ್ಯರು.

**ಕೆ. ಪಿ ಪುಟ್ಟಣ್ಣಸೆಟ್ಟರು**, ಜನನ ೧೮೫೪. ಚಿಕ್ಕಹುದ್ದೆಯಿಂದ ಮೈಸೂರು ಸರ್ಕಾರದ ಮಂತ್ರಾಲೋಚನ ಸಭೆಯ ಪ್ರಥಮ ಸಭಿಕರಾಗಿದ್ದು ವಿಶ್ರಾಂತರಾದರು. ದಿವಾನ್ ಬಹದ್ದೂರ್ ಮತ್ತು ರಾಜಸಭಾಭೂಷಣವೆಂಬ ಬಿರುದಾಂಕಿತರು. ಬೆಂಗಳೂರು ಪುರಸಭೆಯ ಅಧ್ಯಕ್ಷರೂ, ಮೈಸೂರು ಬ್ಯಾಂಕಿನ ಅಧ್ಯಕ್ಷರೂ ಆಗಿದ್ದು ಜನರ ವಿಶ್ವಾಸಕ್ಕೆ ಪಾತ್ರರಾದರು. ಎಪ್ಪತ್ತು ವಯಸ್ಸಾದರೂ, ಈಗಲೂ ತರುಣರಂತೆ ಉತ್ಸಾಹದಿಂದ ನ್ಯಾಯವಿಧಾಯಕ ಸಭೆಯಲ್ಲಿ ಕೆಲಸ ಮಾಡುತ್ತಿರುವರು.

**ಬಿಡಾರದ ಕೃಷ್ಣಪ್ಪನವರು**:-ಜನನ ೧೮೬೬. ಗಾನವಿಶಾರದರು. ಮೈಸೂರಿನ ಆಸ್ಥಾನ ಸಂಗೀತ ವಿದ್ವಾನ್. ಹೊರಗಡೆಯೂ ಹೆಸರು ಹೊಂದಿರುವರು.

ಆರ್. ಎ. ನರಸಿಂಹಾಚಾರ್ಯರು ಎಂ. ಎ. :—ಪ್ರಾಕ್ತನ ವಿಮರ್ಶವಿಚಕ್ಷಣರು. ಮೈಸೂರು ಸೀಮೆಯಲ್ಲಿ ಪುರಾತನ ವಸ್ತುಗಳನ್ನೂ ಲಿಪಿಗಳನ್ನೂ ವಿಮರ್ಶೆಮಾಡುವ ಇಲಾಖೆಯ ಮುಖ್ಯಾಧಿಕಾರಿಗಳಾಗಿದ್ದು ವಿಶ್ರಾಂತಿಯನ್ನು ಪಡೆದಿದಾರೆ. ಕರ್ಣಾಟಕ ಕವಿಗಳ ಕಾಲ ನಿರ್ಣಯವನ್ನು ಗೊತ್ತು ಹಚ್ಚಿ ಎಸ್. ಜಿ. ನರಸಿಂಹಾಚಾರ್ಯರ ಸಹಾಯದಿಂದ 'ಕವಿಚರಿತೆ' ಯನ್ನು ಬರೆದಿರುವರು. ಇವರು ಪಶ್ಚಿಮದೇಶದಲ್ಲೂ ತಮ್ಮ ಇಲಾಖೆಯುವರಲ್ಲಿ ಪ್ರಸಿದ್ಧ ಪುರುಷರು.

**ವೀಣೆ ಶೇಷಣ್ಣನವರು** :—ಜನನ ೧೮೫೨. ಅರಮನೆಯ ಮುಖ್ಯ ಸಂಗೀತ ವಿದ್ವಾಂಸರು. ಇವರಿಗೆ 'ವೈಣಿಕಶಿಖಾಮಣಿ' ಎಂಬ ಬಿರುದುಂಟು. ಎಲ್ಲೆಲ್ಲೂ ಪ್ರಸಿದ್ಧರಾದ ಇವರ ವೀಣೆಯನ್ನು ಕೇಳದ ಕನ್ನಡಿಗರು ವಿರಳ.

**ವೈಣಿಕ ಪ್ರವೀಣ ಸುಬ್ಬಣ್ಣನವರು** :—ಜನನ ೧೮೬೯, ಪುರಾತನ ವೈಣಿಕ ವಂಶದಲ್ಲಿ ಹುಟ್ಟಿ, ವೀಣಾವಾದನದಲ್ಲಿ ನಿಪುಣರೆನ್ನಿಸಿಕೊಂಡಿದ್ದಾರೆ. ಅರಮನೆಯ ಗಾಯಕ ವರ್ಗದಲ್ಲಿ ಮುಖ್ಯರು.

**ಕರ್ಪೂರ ಶ್ರೀನಿವಾಸರಾಯರು**, ಬಿ. ಎಸ್. ಸಿ., ಎಲ್. ಸಿ. ಇ :—ಇವರು ಬೊಂಬಾಯಾಧಿಪತ್ಯದಲ್ಲಿ ಇಂಜನೀಯರಾಗಿ ವಿಶ್ರಾಂತಿ ಪಡೆದು ಮೈಸೂರು ಸೀಮೆಯಲ್ಲಿ ಚೀಫ್ ಇಂಜನೀಯರಾಗಿ ವಿಶ್ರಾಂತಿಯನ್ನು ಹೊಂದಿದರು. ಮಧ್ಯ ವಯಸ್ಸಿನಲ್ಲಿ ಸಂಸ್ಕೃತಾಭ್ಯಾಸವನ್ನು ಮೊದಲು ಮಾಡಿ ಈಗ ಮೈಸೂರು ಸಕಲ ವಿದ್ಯಾನಿಲಯದಲ್ಲಿ ಸಂಸ್ಕೃತ ಭಾಷೆಯ ಉಪಸಭೆಗೆ ಅಧ್ಯಕ್ಷರಾಗಿದ್ದಾರೆ. ಕರ್ಣಾಟಕ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರು. ಬೆಂಗಳೂರಿನಲ್ಲಿರುವ ಅನೇಕ ಧಾರ್ಮಿಕ ಮತ್ತು ಇತರ ಸಂಸ್ಥೆಗಳಿಗೆಲ್ಲಾ ಇವರು ಹೆಚ್ಚು ಉತ್ತೇಜನ ಕೊಡುತ್ತಿರುವರು.

**ಸಿ. ಬಿ. ರಾಮರಾಯರು**, ಬಿ. ಎ., ಎಂ. ಡಿ. (ಡಹಾರ್ಯಂ) ರಾವ್‌ಸಾಹೇಬ್ :—ಜನನ ೧೮೬೨. ವಿದೇಶಗಳಲ್ಲಿ ಸಂಚರಿಸಿ ಡಾಕ್ಟರ್ ಪರೀಕ್ಷೆಯನ್ನು ಕೊಟ್ಟು ಮದ್ರಾಸಾಧಿಪತ್ಯದಲ್ಲಿ ಸರ್ಜನ್ ಕೆಲಸ

ವನ್ನು ಮಾಡಿ ವಿಶ್ರಾಂತಿಯನ್ನು ಪಡೆದು ಬೆಂಗಳೂರಿನಲ್ಲಿ ವಾಸಿಸು
ವರು. ಮದ್ರಾಸ್ ಸರ್ಕಾರದ ನ್ಯಾಯವಿಧಾಯಕ ಸಭೆಗೆ ಸರ್ಕಾರ
ದವರಿಂದ ಚುನಾಯಿಸಲ್ಪಟ್ಟಿದ್ದರು.

ರಾವಬಹದ್ದೂರ್ **ಎಚ್. ಕೃಷ್ಣಶಾಸ್ತ್ರಿಗಳು** ಬಿ. ಎ. :—
ಬೆಂಗಳೂರು ಜಿಲ್ಲೆ ಹೊಸಕೋಟೆಯಲ್ಲಿ ಜನಿಸಿ ಬೆಂಗಳೂರಿನಲ್ಲಿ
ವಿದ್ಯಾಭ್ಯಾಸಮಾಡಿ ಇಂಡಿಯಾ ಸರ್ಕಾರದ 'ಎಪಿಗ್ರಾಫಿಕ್' ಡಿಪಾರ್ಟ್
ಮೆಂಟಿಗೆ ಸೇರಿ ಆ ಇಲಾಖೆಯಲ್ಲಿ ದೊಡ್ಡ ಹುದ್ದೆಯನ್ನು ಪಡೆದಿರು
ವರು. ಇವರು ಸಂಸ್ಕೃತ, ಕನ್ನಡ, ತೆಲುಗು ಭಾಷೆಗಳಲ್ಲಿ ಪಂಡಿ
ತರು. ಕೋಲಾರದಲ್ಲಿ ನೆರೆದ ಹತ್ತನೆಯ ಕರ್ಣಾಟಕ ಸಾಹಿತ್ಯ
ಸಮ್ಮೇಳನಕ್ಕೆ ಅಧ್ಯಕ್ಷರಾಗಿದ್ದರು.

**ಎನ್. ಎಸ್. ಸುಬ್ಬರಾಯರು** ಎಂ. ಎ. (ಕ್ಯಾಂಟಬ್),
ಬಾರ್ ಅಟ್ ಲಾ :—ಇವರು ಶ್ರೀರಂಗಪಟ್ಟಣದಲ್ಲಿ ಜನಿಸಿ ಬೆಂಗ
ಳೂರಿನಲ್ಲಿ ವಿದ್ಯಾಭ್ಯಾಸಮಾಡಿ ಪಶ್ಚಿಮ ದೇಶಕ್ಕೆ ಹೋಗಿ 'ಅರ್ಥಶಾಸ್ತ್ರ'
ದಲ್ಲಿ ಪ್ರಾವೀಣ್ಯವನ್ನು ಸಂಪಾದಿಸಿ ಮೈಸೂರು ಕಾಲೇಜಿನಲ್ಲಿ
ಪ್ರೊಫೆಸರಾಗಿದ್ದು ಈಗ ಅಧ್ಯಕ್ಷರಾಗಿರುವರು. ಡೆಲ್ಲಿಯಲ್ಲಿ ನೆರೆದ
ಅಖಿಲಭಾರತ ವಿಶ್ವವಿದ್ಯಾನಿಲಯಗಳ ಸಮ್ಮೇಳನಕ್ಕೆ ಮೈಸೂರು
ವಿಶ್ವವಿದ್ಯಾನಿಲಯದ ಪರವಾಗಿ ಇವರು ಹೋಗಿದ್ದರು.

## ರಾಜಕೀಯ ಮತ್ತು ವಿದ್ಯಾಸಂಸ್ಥೆಗಳಲ್ಲಿ ಕೆಲಸಮಾಡುವ ಇತರ ಕನ್ನಡಿಗರು

ಭಾರತಮಾತೆಯ ಸೇವೆಗೆ ಸಿದ್ಧರಾಗಬೇಕೆಂದು ಕುತ್ತೂಹಲ
ಯಾದಾಗ, ಕರ್ಣಾಟಕದ ಆಬಾಲವೃದ್ಧರೆಚ್ಚತ್ತು ಮುಂದೆ ಬಂದು
ಇತರರ ಪ್ರಾಂತ್ಯದವರಿಗೆ ತಾವೂ ಸಮಾನಸ್ಕಂಧರೆಂದು ತೋರ್ಪ
ಡಿಸಿದರು. ರಾಜಕೀಯ ಸಂಸ್ಥೆಗಳಲ್ಲಿ ನಾಲ್ಕುವರ್ಷಗಳಿಂದ ಕೆಲಸ
ಮಾಡುತ್ತಿರುವ ಕನ್ನಡಿಗರ ಹೆಸರನ್ನು ಜಿಲ್ಲೆಯ ಮೇರೆಗೆ ಕೆಳಗೆ
ಸೂಚಿಸಿದೆ. (ಬ) ಮತ್ತು (ಆ) ಎಂಬಕ್ಷರಗಳು ರಾಜಕೀಯ ಇಳ

ಸಳಿಗಾಗಿ ಬಂಧಿಯಾದವರು ಮತ್ತು ಅಸಹಕಾರ ಹೂಡಿದ ಲಾಯರ್ ಅಥವಾ ವಿದ್ಯಾರ್ಥಿ ಎಂಬುದನ್ನು ಸೂಚಿಸುತ್ತವೆ.

[ಸೂಚನೆ :—ಮೇಲೆ ಹೇಳಿದವರ ಸಂಪೂರ್ಣಪಟ್ಟಿಯು ಎಲ್ಲ ಕಡೆಯಿಂದ ಬಂದಿಲ್ಲವಾಗಿ ಕೆಳಗಿನ ಪಟ್ಟಿಯು ಪೂರ್ತಿಯಾಗಿಲ್ಲ ಮುಂದಿನ ಮುದ್ರಣದಲ್ಲಿ ಇದನ್ನು ಸರಿಪಡಿಸಲಾದೀತು.]

**ಬೆಳಗಾಂವಿ**:—ಹನುಮಂತನಾಯಕ ನಂದಗಡ (ಬ) ಕೆ. ಜಿ. ಗೋಖಲೆ (ಬ, ಅ) ಡಿ. ಆರ್. ಥಾಕೂರು (ಅ) ಎಸ್. ಎಲ್. ಸೋಮಣ ಬಿ. ಎ. ಎಲ್. ಎಲ್. ಬಿ. (ಅ) ಡಿ. ವಿ. ಜೆಳ್ವಿ ಬಿ. ಎ. ಎಲ್. ಎಲ್. ಬಿ., ಬಿ. ಬಿ. ಪೋತದಾರ್ ಬಿ. ಎ. ಎಲ್. ಎಲ್. ಬಿ., ಕೆಣ್ಣೂರ ; ಜೀವಣ್ಣರಾವ್ ಎಲ್ಗಿ; ಕೃಷ್ಣರಾವ್ ಎಲ್ಗಿ ; ಪಟ್ನಕರ್; ತಿವರಾವ್ ಕೊಪ್ಪಳ್ ; ಪುಂಡಲಿಕ ; (ಅ) ತ್ರಿಯಂಬಕ ದೇಶಪಾಂಡೆ (ಅ) ಶ್ರೀಪಾದರಾವ್ ಕಿತ್ತೂರ ಬಿ. ಎ. (ಅ).

**ಧಾರವಾಡ**:—ಆರ್. ಎಸ್. ಹುಕ್ಕೇರಿ ಎಂ. ಎ., ಜಿ. ಜಿ. ಗುಟ್ಟಲ್ ಬಿ. ಎ. ಎಲ್. ಎಲ್. ಬಿ. (ಅ ; ಬ) ಮಧ್ವರಾವ್ ಕಮಲಾಪುರ್ (ಬ) ; ವಿ. ಎಣ. ಜೋಗ್ ಬಿ. ಎ. ಎಲ್. ಎಲ್. ಬಿ., ರಾಘವೇಂದ್ರರಾವ್ ಕಡಪ ಬಿ. ಎ. ಎಲ್. ಎಲ್. ಬಿ. (ಬ. ಅ;) ವಿ. ಬಿ. ಜೋಷಿ ಬಿ. ಎ. ಎಲ್. ಎಲ್. ಬಿ., ಸಿವರಾವ್ ದೇಶೈ ಎಂ. ಎ., ದತ್ತಾತ್ರೇಯಬೇಂದ್ರೆ ಬಿ. ಎ., ಎಸ್. ಹುಯಿಲ್‌ಗೋಳ್ ಎಂ. ಬಿ. ಬಿ. ಎಸ್. ಡಾಕ್ಟರ್ ಉಮಾಜ್ಗಿ, ಎಲ್. ಎಮ್. ಸ್ ; ಎಸ್. ಆರ್. ಸೌಕಾರ್; ಖಾಸೋಳ್ಕರ್ ; ಡಿ. ಸಹಸ್ರಬುದ್ಧೆ; ರಂಗಾಚಾರ್ಯ (ಬ) ದೇಸೀನರಸಿಂಗರಾವ್. ಆರ್. ವಿ. ವಡವಿ (ಅ) ಟಿ. ಜಿ. ಕುಲಕರ್ಣಿ.

**ಬಳ್ಳಾರಿ**:—ಬಿ. ಭೀಮರಾವ್, ಬಿ. ಎ., ಬಿ. ಎಲ್ ; ಡಿ. ಎಸ್. ಹನುಮಂತರಾವ್ ಬಿ. ಎ; ಗುರುರಾವ್; ದಡ್ಡಿಹನುಮಂತರಾವ್, ಐ. ವಸುಪಲ್ಲಪ್ಪ.

**ಬಿಜಾಪುರ** :—ಸೇತುರಾಮದಾಸದರ್ಜಾರ್ ; ಚನ್ನಮಲ್ಲಿಪ್ಪಾ ಕುರ್ಲಿ; ರಾವಬಹೂದೂರ್‌ರಾಘವೇಂದ್ರರಾವ; ಕೆಂಭಾವಿ; ದತ್ತೋ ಪಂತಭತ್ರೆ ; ರಾಮರಾವ್‌ಸಾಲಿ, ಕೊಣ್ಣೂರು ಹನುಮಂತರಾವ ಬಿ. ಎ., ಹಿಪ್ಪರಗಿ ನಾಯಕ್ ಹನುಮಂತರಾವ್, (ಅ.ಬ) ಬಿಸ್ರಿವಾಮನ ರಾವ (ಅ) ತೊರವಿಶ್ರೀನಿವಾಸಾಚಾರ್ಯ (ಅ) ಕಟ್ಟಿನರಹರಾಚಾರ್ಯ (ಅ) ಹರಕಲಸಂಗಪ್ಪ ಬಸಪ್ಪ.

**ದಕ್ಷಿಣಕನ್ನಡಾ** :—ಎಚ್. ನಾರಾಯಣರಾವ್ (ಅ. ಬ.) ಎಚ್. ರಾಮರಾಯಮಲ್ಯ ಬಿ. ಎ. (ಅ. ಬ)ಯು. ಗೋವಿಂದರಾವ್ (ಅ) ಯು. ರಾಮರಾವ್ ಬಿ. ಎ. (ಅ) ಶಾಂತಾರಾಮರಾವ್ (ಅ) ಯು. ಅನಂತಯ್ಯ (ಅ) ಎ. ಭೋಜರಾವ್ (ಅ) ಎಂ. ಉಮೇಶ ರಾವ್ ಬಿ. ಎ., ಕೆ. ಪಿ. ಕಾಮತ್ ಎಂ. ಎ. ಬಿ. ಎಲ್., ಶಂಕರಭಟ್ಟ (ಅ) ಗುಲಾಮ್ ಹೈದರ್ ಸಾಹೆಬ್ (ಅ) ಟಿ. ಮಾರಪ್ಪ (ಬ) ಕೆ. ಆರ್. ಕಾಮತ್ ಬಿ. ಎ., ಎಲ್. ಎಲ್. ಬಿ. ಕಡ್ಮಲೆ ರಂಗರಾವ್ ಇತ್ಯಾದಿ.

**ಉತ್ತರ ಕನ್ನಡ** :—ಶ್ರೀಪಾದರಾವ್ ಕಲ್ಯಾಣ ಪೂರ್ಕರ್ ಬಿ. ಎ. ಎಲ್ ಎಲ್. ಬಿ.; ಡಾಕ್ಟರ್. ಬಸ್ರು ; ಎಸ್. ಎಸ್. ಸಿದ್ಧೇಶ್ವರ. ವಾಸುದೇವರಾವ್ ಕೊಲ್ಹಳ್ಳಿ, ಬಿ. ಎ. ಎಲ್. ಎಲ್. ಬಿ; ಮಂಜುನಾಥಭಟ್ ದೇವರಕರ್ತಿ. ಎಂ. ಎಲ್. ಸಿ ; ಸ. ಸ್. ಶಾಸ್ತ್ರಿ.

**ಮೈಸೂರುಪ್ರಾಂತ್ಯ**:—ಡಿ. ವಿ. ಗುಂಡಪ್ಪ ; ಹೊಸಕೊಪ್ಪ ಕೃಷ್ಣರಾವ; ಎಂ. ಎಲ್. ವರ್ಧಮಾನಯ್ಯ; ಧರ್ಮಪ್ರವರ್ತಕ ಬನುಮಯ್ಯ; ಆರ್. ಶಾಮಶಾಸ್ತ್ರಿ, ಎಂ. ಸಿ. ರಂಗಯ್ಯಂಗಾರ್; ಎಸ್. ಎಣ್. ಎಂ. ರಜ್ವಿ; ನಾಗಾಭಟ್; ಬಿ.ಕೆ.ಗರುಡಾಚಾರ್; ಕೆ. ರಂಗಯ್ಯಂಗಾರ್; ಬಿ. ಎ. ಎಲ್. ಎಲ್. ಬಿ.ಲಿಂಗರಾಜೆ ಅರಸ್; ತಗಡೂರು ರಾಮಚಂದ್ರರಾವ್.

---

# ಕೊಡಗುಪ್ರಾಂತಿಕ ನ್ಯಾಯವಿಧಾಯಕ ಸಭೆ

೧೯೧೭ ನೇ ಇಸವಿಯಿಂದ ಪ್ರಾರಂಭವಾದ ಸುಧಾರಣೆ ಚಳವಳಿಯಲ್ಲಿ ಹಿಂದೂದೇಶದ ಎಲ್ಲಾ ಪ್ರಾಂತ್ಯಗಳಿಗೂ ಸುಧಾರಣೆಗಳೋಪಾದಿಯಲ್ಲಿ ಕೆಲವು ಹಕ್ಕುಗಳು ದೊರೆತವು. ಇದರಿಂದ ಎಲ್ಲಾ ಪ್ರಾಂತ್ಯದವರಿಗೆ ಮತಕೊಟ್ಟು ತಮ್ಮ ಪ್ರತಿನಿಧಿಗಳನ್ನು ಸಭೆಗೆ ಕಳುಹಿಸುವ ಹಕ್ಕುದೊರೆಯಿತು. ಆದರೆ ಕೊಡಗು ಪ್ರಾಂತ್ಯಕ್ಕೆ ಈ ರೀತಿಯಲ್ಲಿ ಯಾವಸಭೆಗೂ ಯಾವ ಪ್ರತಿನಿಧಿಯನ್ನು ಕಳುಹಿಸಲೂ ಅಧಿಕಾರ ದೊರೆಯಲಿಲ್ಲ. ಅದೇ ಸಮಯದಲ್ಲ ಕೊಡಗಿನ ಮುಖ್ಯ ರಾಜಕೀಯ ಸಂಸ್ಥೆಯಾದ ಕೊಡಗು ಜಮೀನುದಾರರ ಸಂಘವು ತಮಗೊಂದು ನ್ಯಾಯ ವಿಧಾಯಕ ಸಭೆಯನ್ನು ಕೊಡಬೇಕೆಂದೂ, ಇಲ್ಲವಾದರೆ ತಮ್ಮ ನಾಡನ್ನು ಮದ್ರಾಸು ಪ್ರಾಂತ್ಯದ ಒಂದು ಜಿಲ್ಲೆಯಾಗಿ ಸೇರಿಸಿಕೊಳ್ಳಬೇಕೆಂದೂ ಚಳವಳವನ್ನು ಪ್ರಾರಂಭಿಸಿತು. ಈ ಚಳವಳವು ಆಗ ಸಫಲವಾಗಲಿಲ್ಲ; ಅಂತು ಸರಕಾರದಿಂದ ಒಂದು ಸಭೆಯು ದೊರೆಯುವುದೆಂದು ಒಂದು ಭರವಸೆ ದೊರೆಯಿತು. ಹಾಗೂ ೧೯೨೪ ನೇ ಇಸವಿ ಅಂತ್ಯದಲ್ಲಿ ಸಭೆಯನ್ನು ಸ್ಥಾಪಿಸಲು ಸರಕಾರದವರ ಕಡೆಯಿಂದ ಎಲ್ಲಾ ತರದ ಕೆಲಸಗಳೂ ಪ್ರಾರಂಭವಾದವು.

ಈ ಸಭೆಯು ೨೦ ಮಂದಿ ಸದಸ್ಯರುಗಳಿಂದ ಕೂಡಿರುವುದು. ಅವರುಗಳಲ್ಲ ನಾಲ್ಕು ಜನರು ಸರಕಾರಿ ಸದಸ್ಯರುಗಳಾಗಿಯೂ, ಒಬ್ಬನು ಹಿಂದುಳಿದ ಪಂಗಡದವರ ಪರವಾಗಿ ಸರಕಾರದವರಿಂದ ನೇಮಿಸಲ್ಪಡುವವನಾಗಿಯೂ ಇರುವನು. ಉಳಿದವರುಗಳಲ್ಲಿ ಎರಡು ಜನರು ವಿಲಾಯಿತಿಯವರ ಪರವಾಗಿ ಅವರುಗಳಲ್ಲಿಯೇ ಚುನಾಯಿಸಲ್ಪಡುವರು. ಇನ್ನುಳಿದ ೧೪ ಜನರುಗಳಲ್ಲಿ ಎರಡು ಭಾಗಗಳು. ಒಂದು 'ಜಮ್ಮ' ವೆಂಬುದು; ಇನ್ನೊಂದು 'ಸಾಗು' ಎಂಬುದು. 'ಜಮ್ಮ' ಎಂಬುವರು ಕೊಡಗಿನ ಪೂರ್ವ ನಿವಾಸಿಗಳೆಂದು ತಿಳಿದು ಬಂದಿದೆ. ಇವರುಗಳು ಕತ್ತಿ ಕೋವಿಗಳನ್ನು ಸರಕಾರದ ಅಪ್ಪಣೆಯಿಲ್ಲದೇ ಹಿಡಿಯಬಹುದು. (Exempted from Arms Act)

ಮತ್ತು ಇವರು ಜೇರಿಯುವರು ಕೊಡುವುದಕ್ಕಿಂತ ಅರ್ಧ ಭೂಕಂದಾಯ ಕೊಟ್ಟರೆ ಸಾಕು. ಇನ್ನುಳಿದವರು ಸಾಗಿನವರು. ಈ ನ್ಯಾಯವಿಧಾಯಕ ಸಭೆಗೆ ಜಮ್ಮಾದವರು ೯ ಜನರನ್ನೂ ಸಾಗಿನವರು ೪ ಜನರನ್ನೂ ಚುನಾಯಿಸಬಹುದು ಇದೂ ಅಲ್ಲದೆ ಸರಕಾರದವರು ಏನಾದರೂ ಹೊಸ ಮಸೂದೆಗಳನ್ನು ಸಭೆಯ ಮುಂದೆ ತರುವುದಾದರೆ, ಆ ವಿಷಯದಲ್ಲಿ ನಿಪುಣರಾದವರೊಬ್ಬರನ್ನು ಸಭೆಯ ತಾತ್ಕಾಲಿಕ ಸದಸ್ಯರನ್ನಾಗಿ ಸರಕಾರದವರು ನೇಮಕ ಮಾಡುವರು. ಇದರ ಅಧ್ಯಕ್ಷರು ಕೊಡಗಿನ ಚೀಫ್ ಕಮೀಷನರವರು ; ಉಪಾಧ್ಯಕ್ಷರು ಸ್ಥಳೀಯ ಕಮಿಷನರವರು. ಮತ್ತು ಸಭೆಯ ಕಾರ್ಯದರ್ಶಿಗಳು ಡಿಸ್ಟ್ರಿಕ್ಟ್ ಮೇಜಿಸ್ಟ್ರೇಟರು.

ಈ ಸಭೆಯಿಂದ ದೇಶಕ್ಕೆ ದೊರೆಯುವ ಹಕ್ಕು ಬಾಧ್ಯತೆಗಳು ಕೆಲವಿವೆ. ಸರಕಾರದವರೊಂದಿಗೆ ಪ್ರಶ್ನೆಗಳನ್ನು ಕೇಳಿ ಉತ್ತರಗಳನ್ನು ಪಡೆಯಬಹುದು. ಹಣದ ಮೇಲೆ ಕೆಲವು ಮಟ್ಟಿನ ಅಧಿಕಾರವೂ ಇರುವುದು. ಇನ್ನು ಕೆಲವು ತರದ ಠರಾವುಗಳನ್ನೂ ಕಾನೂನುಗಳನ್ನೂ ಸರಕಾರದವರೂ ಪ್ರಜಾ ಪ್ರತಿನಿಧಿಗಳೂ ತರಬಹುದು. ಆದರೆ ಇವುಗಳೆಲ್ಲವನ್ನೂ ನಾಪಾಸುಮಾಡುವ (Vetoing) ಅಧಿಕಾರವು ಚೀಫ್ ಕಮಿಷನವರಿಗೆ ಇದೆ.

ಈ ಸಭೆಯು ಪ್ರಾರಂಭವಾಗಿ ಇನ್ನು ಒಂದು ವರ್ಷವಾಗದಿರುವುದರಿಂದ ಯಾವ ವಿಶೇಷ ಕಾರ್ಯವನ್ನೂ ಕೈಕೊಂಡಿರುವುದಿಲ್ಲ.

---

# ಶುದ್ಧಾ ಶುದ್ಧ ಪತ್ರಿಕೆ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೩ | ೧೨ | ದಕ್ಷಣದಲ್ಲ | ದಕ್ಷಿಣದಲ್ಲಿ |
| ೪ | ೧ | **ಸ್ವಭಾವಿಕ** | **ಸ್ವಾಭಾವಿಕ** |
| ,, | ೨೩ | ಪೂಡಗಳಿಗೆ | ಸೋಡಗಳಿಗೆ |
| ೬ | ೯ | ವೊನ್ನೀರ್ | ಪೊನ್ನೀರ್ |
| ೭ | ೧೬ | ಘಟಾಪ್ರಭಾನದಿಯ | ಘಟಪ್ರಭಾನದಿಯು |
| ೯ | ೨೩ | ರತ್ನಗಿರಿ | **ಬಿಟ್ಟು ಬಿಡಬೇಕು** |
| ೯ | ೨೪ | ಷೋಲಾಪುರ | |
| ೧೪ | ೫ | ಮಹಾಷ್ಟ್ರದಲ್ಲ | ಮಹಾರಾಷ್ಟ್ರದಲ್ಲಿ |
| ೧೫ | ೧ | ವುನ್ನಟ | ಪುನ್ನಟ |
| ೧೮ | ೨೫ | ರಾಜನ | ರಾಜಸ |
| ೧೯ | ೧೪ | ಭವಭೂತಿ | ಪುರಂದರದಾಸ |
| ೨೦ | ೪ | ವರ್ವತ | ಪರ್ವತ |
| ,, | ೧೬ | ಹುಟ್ಟ | ಹುಟ್ಟಿ |
| ೨೨ | ೧೨ | ಶೃತಕೇವಲಿ | ಶ್ರುತಕೇವಲಿ |
| ,, | ೧೫ | ಜ್ಯೆನ | ಜೈನ |
| ೨೩ | ೨ | ಉತ್ಕಟೇಛ್ಛೆ | ಉತ್ಕಟೇಚ್ಛೆ |
| ,, | ೧೭ | ವುರಾತನ | ಪುರಾತನ |
| ೨೫ | ಕಡೆಪಂಕ್ತಿ | ಸಿದ್ಧಾ)ಂತ | ಸಿದ್ಧಾಂತ |
| ೨೮ | ,, | ಅಂಧ್ರ | ಆಂಧ್ರ |
| ೩೨ | ೨೨ | ಅ ದೇಶಕ್ಕೆ | ಆ ದೇಶಕ್ಕೆ |
| ೩೩ | ೩ | ಆವನಿಗೆ | ಅವನಿಗೆ |
| ೩೫ | ಕಡೆಪಂಕ್ತಿ | ಕುಗುತ್ತ | ಕುಗ್ಗುತ್ತ |
| ೩೮ | ೬ | ಲಾಂಛನ | ಲಾಂಛನರು |
| ೪೦ | ೨ | ಮಗಸೊಬ್ಬ | ಮಗನೊಬ್ಬ |
| ,, | ೩ | ನಿಕುಂಭಲ್ಲಶಕ್ತಿ | ನಿಕುಂಭ ಮಲ್ಲಶಕ್ತಿ |
| ೪೩ | ೨ | ದೀಕ್ಷತೆ | ದಕ್ಷತೆ |
| ೪೫ | ೯ | ಶತೃ | ಶತ್ರು |
| ೪೭ | ೨೨ | ಗುಪ್ತಸಾರ್ವಭೌಮ | ಸಾರ್ವಭೌಮ |
| ,, | ೨೩ | ವುಲಕೇಶಿ | ಪುಲಕೇಶಿ |
| ೪೮ | ೧೪ | ಪ್ರುಲಕೇಶಿ | ಪುಲಕೇಶಿ |
| ,, | ೨೭ | (ಪೆಂಗೀ) | (ವೆಂಗಿ) |
| ೪೯ | ೧೭ | ಮಹತ್ವವೂ | ಮಹತ್ವವುಳ್ಳದೂ. |

| | | | |
|---|---|---|---|
| ೫೦ | ೧೪ | ಸೂಮ್ರಾಜ್ಯಕ್ಕೆ | ಸಾಮ್ರಾಜ್ಯಕ್ಕೆ |
| ೫೩ | ೭ | ತೂರ್ವಸು,, | ತೂರ್ವಸುವಿಗ |
| ೫೬ | ೧೮ | ಧೃವಸು | ಧ್ರುವಸು |
| ೬೦ | ೮ | ಸ್ಥಪ | ಸ್ತುಪ |
| ,, | ೧೦ | ನಿರುಪಸೆಂದೂ | ನಿರುಪಮುಸೆಂದೂ |
| ೬೨ | ೧೬ | ಆಳ್ವಿಕಯು | ಆಳ್ವಿಕೆಯು |
| ೬೪ | ೬ | ಪ್ರ-ತ್ತಿ | ಪ್ರ-ಸ್ತಿ |
| ,, | ೭ | ಪ್ರಕಿಥಟಿಸಿದ | ಪ್ರತಿಭಟಿಸಿದ |
| ,, | ೧೩ | ಕಪ್ಪವನ್ನೊಗ್ಪಿಸಿ | ಕಪ್ಪವನ್ನೊಪ್ಪಿಸಿ |
| ೬೭ | ಕಡೆಪಂಕ್ತಿ | ಪ್ರವಾಹಾಹುತಿಗೆ | ಪ್ರವಾಹಾಹತಿಗೆ |
| ೬೯ | ೧೦ | ತದರ | ಇದರ |
| ೭೧ | ೮ | ಪನ | ಪನು |
| ೭೨ | ೨೩,೪ | ಚೋಳಸಮ್ರಾಜನಾದ ರಾಜರಾಜನನ್ನು | ಚೋಳಕುಲ ದರಸನನ್ನು |
| ೭೬ | ೧೦ | ಗ;ಂಗವಂತೀಯು | ; ಗಂಗವಂತೀಯ |
| ೮೦ | ೨೩ | ಸೋಮಿಯ | ಸೋವಿಯ |
| ೮೩ | ೨೩ | ಅಸ್ಥಾನ | ಆಸ್ಥಾನ |
| ೮೪ | ೧೩ | ಯಾದವಜೈತುಗಿ | ಯಾದವಭಿಲ್ಲಮ |
| ೮೬ | ೨೪ | ಅಂತಶುದ್ಧಿ | ಅಂತಶ್ಶುದ್ಧಿ |
| ೮೮ | ೮ | ಸಿಂಹಾಸನ ಮೇಲೆ | ಸಿಂಹಾಸನದ ಮೇಲೆ |
| ,, | ,, | ಮುಮ್ಮುಡಿ | ಮುಮ್ಮುಡಿ |
| ೯೦ | ೨೦ | ಸೊರಯೂರಿನ | ಸೊರಟೂರಿನ |
| ೯೨ | ಕಡೆಪಂಕ್ತಿ | ಮಲ್ಲಕಾಫರ | ಮಲ್ಲಿಕ್‌ಕಾಫೂರ |
| ೯೭ | ೮ | ಜತುರ್ಜಾತಿ | ಚತುರ್ಜಾತಿ |
| ೯೮ | ೧ | ಆಲ್ಪವೆ | ಅಲ್ಪವೆ |
| ,, | ೨೪ | ಸೋಮೇಶ್ವನಿಗೀ | ಸೋಮೇಶ್ವರನಿಗೀ |
| ೧೦೦ | ೧೨ | ಸೌಷ್ಟವ | ಸೌಷ್ಠವ |
| ೧೦೧ | ೯ | ಜ್ಯೋತಿಯನ್ನು | ಜ್ಯೋತಿಯನ್ನು |
| ೧೦೪ | ೧೯ | ಆಲ್ಲದೆ | ಅಲ್ಲದೆ |
| ೧೦೫ | ೨೦ | ಬಹುಮನೀ | ಬಹಮನೀ |
| ೧೦೭ | ೧೬ | ಕೊಡವೀಡು | ಕೊಂಡವೀಡು |
| ೧೦೨ | ೨೨ | ಇಡಾದನು | ಈಡಾದನು |
| ೧೦೩ | ಕಡೆಪಂಕ್ತಿ | ಪಾತಳಕ್ಕೆ | ಪಾತಾಳಕ್ಕೆ |
| ೧೧೭ | ೧೩ | ಅಡಳಿತ | ಆಡಳಿತ |
| ,, | ಕಡೆಪಂಕ್ತಿ | ಶ್ರೀರಂಗಪಟ್ಟಕ್ಕೆ | ಶ್ರೀರಂಗಪಟ್ಟಣಕ್ಕೆ |

| | | | |
|---|---|---|---|
| ೧೧೮ | ೯ | ಶ್ರೀರಂಗಪಟ್ಟದ | ಶ್ರೀರಂಗಪಟ್ಟಣದ |
| ,, | ೧೦ | ರೇವಟಿ | ರೇಮಟಿ |
| ೧೨೦ | ೧೫ | ಮೈಸೂರಿಗೆ | ಮೈಸೂರನ್ನು |
| ೧೨೨ | ೫ | ಬಳ್ಳೇ | ಒಳ್ಳೇ |
| ,, | ೧೮ | ಶಿರ್ಯ | ಶೀರ್ಯ |
| ,, | ಕಡೆಪಂಕ್ತಿ | ಜಹಾರ್ | ಜಹಾರ್ |
| ೧೨೩ | ೧೦ | ಹೆಚ್ಜಿಸಿ | ಹೆಚ್ಚಿಸಿ |
| ೧೨೫ | ೬ | ಗೆಡಗೊಡದೆ | ಗೆಡಗೊಡದ |
| ೧೨೬ | ೧ | ರಾಜ್ಯಾಂತರ್ಗದ | ರಾಜ್ಯಾಂತರ್ಗತ |
| ೧೨೯ | ೧೧ | ಮುಹಮುದೀಯ | ಮುಹಮ್ಮದೀಯ |
| ೧೩೦ | ೧೩ | ಪ್ರೆಂಚರೂ | ಫ್ರೆಂಚರೂ |
| ೧೩೧ | ೨೦ | ಆಥವಾ | ಅಥವಾ |
| ೧೩೨ | ಕಡೆಪಂಕ್ತಿ | ಶಿವಾಜಿ | ಶಿವಾಜಿಗೆ |
| ೧೩೩ | ೮ | ಅರಸರರಿಗೂ | ಅರಸರಿಗೂ |
| ,, | ೨೧ | ಆರ್ಧಿಕ | ಆರ್ಥಿಕ |
| ೧೩೫ | ೭ | ಪುಟ್ಟದರೂ | ಹುಟ್ಟಿದರೂ |
| ೧೩೭ | ೭ | ದೃಕ್ಪಥಕ್ಕೆ | ದೃಕ್ಪಥಕ್ಕೆ |
| ,, | ೧೬ | ದರ್ಪವನ್ನಡಿಗಿಸಿ | ದರ್ಪವನ್ನಡಗಿಸಿ |
| ೧೩೯ | ೨೦ | ಆಜಾಗರೂಕ | ಅಜಾಗರೂಕ |
| ೧೪೧ | ೬ | ಆಲಿಬೇಗಂ | ಆಲಿಬೇಗ್ |
| ೧೪೨ | ೧೦ | ಫಜಲ್‌ಲುಲ್ಲ | ಫಜಲುಲ್ಲ |
| ,, | ೧೧ | ಹಾಕಿದಿರು | ಹಾಕಿದರು |
| ೧೪೪ | ೨೨ | ಮುಹಾರಾಷ್ಟ್ರದಲ್ಲಿ ಪದವಿ | ಮುಹಾರಾಷ್ಟ್ರದಲ್ಲಿ ಪೇಷ್ವೆಪದವಿ |
| ,, | ೨೪ | ಬಾಂಧ್ಯ | ಬಾಂಧ |
| ೧೪೫ | ೫ | ಲ್ಲಿತು | ಲ್ಲಿತ್ತು |
| ,, | ೨೩ | ಆಲ್ಲೂ | ಅಲ್ಲೂ |
| ೧೪೮ | ೭ | ತಿರ್ಮಾನಿಸಲು | ತೀರ್ಮಾನಿಸಲು |
| ,, | ೧೪ | ವ್ಯಾಜ್ಯ | ವ್ಯಾಜ |
| ೧೫೩ | ೨ | ಶ್ರಿರಂಗಪಟ್ಟಣ | ಶ್ರೀರಂಗಪಟ್ಟಣ |
| ,, | ೧೧ | ಸ್ವಾತರತ್ಯ | ಸ್ವಾತಂತ್ರ್ಯ |
| ೧೫೬ | ೭ | ಉಪಾರಿಯಾದ | ಸ್ವಲ್ಪಉದಾರಿಯಾಗಿ |
| ೧೫೭ | ೨೫ | ಬ್ರಿಟಷರು | ಬ್ರಿಟಿಷರು |
| ೧೫೮ | ೧೪ | ಆವರಿಗೆ | ಅವರಿಗೆ |

| ಪುಟ | ಸಾಲು | ತಪ್ಪು | ಸರಿ |
|---|---|---|---|
| ೧೬೦ | ೭ | ಜಾಗ್ರತಿ | ಜಾಗೃತಿ |
| ,, | ೧೦ | ಅಡಳಿತ | ಆಡಳಿತ |
| ,, | ೨೧ | ಹುಟ್ಟುತ್ತಿದೆ | ಹುಟ್ಟುತ್ತಿವೆ |
| ೧೭೭ | ೧೧ | ಬಹಳ ಸಹಾಯ ಮಾಡಿದರು | ಅಸ್ತಿಭಾರಹಾಕಿದರು |
| ೧೭೮ | ೧೯ | ಲಿಂಗವು | ಅಂಗವು |
| ೧೭೯ | ೩ | ಜಾತಿಭೇದದಮುಖ್ಯ | ಜಾತಿಭೇದದಸಂಕೋಚವನ್ನು ಖಂಡಿಸಿಮುಖ್ಯ |
| ,, | ೨೨ | ಮೇಲೆಮಾಡಿದ | ಮೇಲೆಸೆಲಸುವಂತೆ ಮಾಡಿದ |
| ೧೮೦ | ೬ | ೨೨ | ೩೨ |
| ೧೮೧ | ೧೨ | ರಾಪೂನುಜಾ | ರಾಮಾನುಜಾ |
| ,, | ೧೭ | ಬಹರ | ಬಹಳ |
| ೧೮೩ | ೧೧ | ಸ್ವಾಂ ವಿವಿವೇಕಾ | ಸ್ವಾಮಿವಿವೇಕಾ |
| ೧೮೩ | ೧೯ | ಹರಡುತ್ತಿತ್ತು | ನೆಲೆಸಿತ್ತು |
| ೧೮೬ | ೭ | ಹುಡಿಬುಟೊ | ಡಿಬ್ರಿಟ್ಟೊ |
| ,, | ೧೭ | ಅಬ್ಬೆಡೂಬಾಯ್ | ಅಬ್ಬೆಡ್ಯೂಬ್ವಾ |
| ೧೯೧ | ೬ | ಕ್ರಿಶ್ತಶಕ | ಕ್ರಿಸ್ತಶಕ |
| ,, | ೧೨ | ಆನಂದಜೀವನ | ಸಂತುಷ್ಟಜೀವನ |
| ,, | ೨೦ | ಹಿಂದೀಜ್ಞಾನೋದಯ | ಪುನರುಜ್ಜೀವನ |
| ೧೯೨ | ೬ | ಸಾಧಿಸಲಾರದ | ಸಾಧಿಸಲಾಗದಿದ್ದ |
| ,, | ೧೫ | ಮತ್ತೊಂದು | ಎರಡು |
| ೧೯೩ | ೧೦ | ಎತ್ತರವಾದವಿಗ್ರಹ | ಎತ್ತರವಾದಬಯಲಿನಲ್ಲಿರುವವಿಗ್ರಹ |
| ೧೯೬ | ೨ | ದೇವಾಲಯವು ಈ | ದೇವಾಲಯವು ಅಸಂಪೂರ್ಣವಾದ ಈ |
| ೧೯೭ | ೧೧ | ಬೆಳಗಾಮಿ | ಬಿಜಾಪುರ |
| ,, | ೨೫ | ಪುಲಕೇಶಿಯರೂಪವೂ | ಪುಲಕೇಶಿಯಸಭೆಯೂ |
| ೧೯೮ | ೧೨ | ಕರ್ಮವೆಲ್ಲವನ್ನೂ | ಕರ್ಮಕೆಲವನ್ನು |
| ೨೦೦ | ೧ | ಕಲಾಯುವಕರೂ | ಕಲಾನಿಪುಣರೂ |
| ,, | ೨೧ | ಆಯಾ | ಕೆಲ |
| ೨೦೧ | ೫ | ಕಲಿನಾಥ | ಕಲ್ಲಿನಾಥ |
| ,, | ೬ | ವ್ಯಾಖ್ಯಾನವೂ | ವ್ಯಾಖ್ಯಾನದಲ್ಲಿಯೂ |
| ,, | ೭ | ಗುಟ್ಟೇ | ಪದ್ಧತಿಯೇ |
| ೨೦೨ | ೧೩ | ವಂಶೀಯ | ಪರಂಪರೆಯ |

